# ಕಸ್ತೂರಿ



ಸಪ್ಟೆಂಬರ್, ೧೯೬೧ ಬೆಲೆ : ೭೫ ನ ಪೈ.

ಇಂದಿನ ವಿಶ್ವಕ್ಕೊಂದು ಬೆಳಕಿಂಡಿ

ಕರ್ನಾಟಕದ
ಪ್ರಮುಖ
ಕೇಂದ್ರಗಳಲ್ಲಿ
ಜನದಟ್ಟ-
ಣೆಯ ವೈಭವ
ದ ಪ್ರದರ್ಶನ
ಇಂದೇ
ನೋಡಿ
ಆನಂದಿಸಿರಿ.



ವಿಜಯಾ ರವರ

# ಜಗದೇಕವೀರನ ಕಥೆ

..ಕನ್ನಡ-ತೆಲುಗು.

ನಿರ್ದೇಶಕ.... **ಕೆ. ವಿ. ರೆಡ್ಡಿ, B.Sc (HONS)**

N44

ವಿಜಯಾ ಪಿಕ್ಚರ್ಸ್ ಸರ್ಕ್ಯೂಟ್ ರಿಲೀಸ್

# ಕಸ್ತೂರಿ

**ಕನ್ನಡ ಡೈಜೆಸ್ಟ್**

ಪ್ರತಿತಿಂಗಳ ೧ ನೆ ದಿನಾಂಕ
ಪ್ರಕಟವಾಗುವುದು.

ಮುಖ್ಯ ಸಂಪಾದಕರು :
ರಂಗನಾಥ ದಿವಾಕರ

ಸಹಾಯಕ ಸಂಪಾದಕರು :
ಪಿ. ವಿ. ಆಚಾರ್ಯ

ಪ್ರಕಾಶಕರು :
ಲೋಕ ಶಿಕ್ಷಣ ಟ್ರಸ್ಟ್-ಹುಬ್ಬಳ್ಳಿ

ಕಚೇರಿ :
ಸಂಯುಕ್ತ ಕರ್ನಾಟಕ ಕಾರ್ಯಾಲಯ
ಹುಬ್ಬಳ್ಳಿ

ಮುದ್ರಕರು :
ಸಂಯುಕ್ತ ಕರ್ನಾಟಕ ಮುದ್ರಣಾಲಯ
ಹುಬ್ಬಳ್ಳಿ

ಮುಖಚಿತ್ರ :
ದಿನಾಂತದಲ್ಲಿ
ನರಸಿಂಹ ಕಟ್ಟಿ

ಚಂದಾ ದರ :

| | |
|---|---|
| ವಾರ್ಷಿಕ (ಅಂಚೆಸೇರಿ). | ರೂ.೮.೦೦ |
| ಅರ್ಧ ವರ್ಷ — | ರೂ.೪.೫೦ |
| ಬಿಡಿಸಂಚಿಕೆ — | ರೂ.೦.೭೫ |

**Kasturi, September 1961**


## ಲೇಖಕರಿಗೆ ಸೂಚನೆ

ಕಸ್ತೂರಿಯಲ್ಲಿ ಪ್ರಕಟನೆಗಾಗಿ ಲೇಖ, ಪ್ರಬಂಧ, ಕಥೆ ಮೊದಲಾದವನ್ನು ಸ್ವೀಕರಿಸಲಾಗುವುದು. ಕಾಗದದ ಒಂದೇ ಮಗ್ಗಲಿಗೆ ವಿರಳವಾಗಿ ಬರೆದು ಕಳಿಸಬೇಕು. ಲೇಖಕರು ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ತಿಳಿಸಬೇಕಲ್ಲದೆ, ಅನುವಾದ, ರೂಪಾಂತರ ಇಲ್ಲವೆ ಸಾಧಾರ ಲೇಖಗಳಾದರೆ ಅವುಗಳ ಮೂಲ ಲೇಖಕ ಹಾಗು ಪ್ರಕಾಶಕರ ಹೆಸರು ವಿಳಾಸಗಳನ್ನೂ ಒದಗಿಸಬೇಕು. ಮೂಲ ಲೇಖಕರ ಅನುಮತಿ ಪಡೆದೇ ಲೇಖಗಳನ್ನು ಕಳಿಸಿದರೆ ಅವುಗಳ ಮೇಲೆ ಬೇಗನೆ ನಿರ್ಣಯಕ್ಕೆ ಬರಲು ಸುಲಭವಾಗುವುದು. ಅಸ್ವೀಕೃತ ಲೇಖಗಳು ತಿರುಗಿ ಬೇಕಾಗಿದ್ದರೆ **ಲೇಖಗಳ ಸಂಗಡವೇ** ತಿರುಗಿ ಕಳಿಸಲು ಅವಶ್ಯಬೀಳುವಷ್ಟು ಅಂಚೆ ತಿಕೀಟುಗಳನ್ನೂ ಕಳಿಸಿರಬೇಕು. ಲೇಖ ಸ್ವೀಕೃತವಾದರೆ ಯಥಾವಕಾಶ ಪ್ರಕಟಿಸಲಾಗುವದು. ಲೇಖಕರು ತಮ್ಮ ಲೇಖಗಳ ಸ್ಥಳಪ್ರತಿಗಳನ್ನು ಕಾಯ್ದಿಟ್ಟುಕೊಳ್ಳುವದೊಳಿತು. ಲೇಖಗಳು ಅಕಸ್ಮಾತ್ತಾಗಿ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ.

ಲೇಖ ಪ್ರಕಟವಾದರೆ "ಕಸ್ತೂರಿ"ಯು ಆಗಿಂದಾಗ್ಗೆ ಗೊತ್ತುಪಡಿಸಿಕೊಂಡ ಕ್ರಮದಲ್ಲಿ ಪ್ರತಿಫಲವನ್ನು ಆದಷ್ಟು ಬೇಗ ಕೊಡಲಾಗುವದು. ಲೇಖಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ.

## ಚಂದಾದಾರರಿಗೆ ಸೂಚನೆ

ಪ್ರತಿತಿಂಗಳ "ಕಸ್ತೂರಿ" ಆಯಾ ತಿಂಗಳ ೧ನೇ ದಿನಾಂಕದೊಳಗೇ ಪ್ರಕಟವಾಗುವದು. ಅದು ಚಂದಾದಾರರಿಗೆ ಆಯಾ ತಿಂಗಳ ೫ನೇ ದಿನಾಂಕದೊಳಗೆ ತಲಪುವದು. ಹಾಗೆ ಬಾರದಿದ್ದರೆ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ನಮಗೆ ತಿಳಿಸಬೇಕು. ಚಂದಾದಾರರು ಕಾರ್ಯಾಲಯದೊಡನೆ ಪತ್ರವ್ಯವಹಾರ ಮಾಡುವಾಗ್ಗೆ ತಮ್ಮ ಚಂದಾ ನಂಬರು ಕಾಣಿಸಲು ಮರೆಯಬಾರದು.

# ಈ ಸಂಚಿಕೆಯಲ್ಲಿ

ಕಸ್ತೂರಿ



ಸಂಚಿಕೆ ೧ ಸಪ್ಟೆಂಬರ್, ೧೯೬೧ ವರ್ಷ ೬

ಒಂದು ನೀತಿ ಕಥೆ

# ಮೃತ್ಯುವಿನ ಸೃಷ್ಟಿ

ಕೃಷ್ಣ ಶಂಕರ ವ್ಯಾಸ

ಬ್ರಹ್ಮಾಂಡದ ಸೃಷ್ಟಿಯ ಕಾರ್ಯವನ್ನು ಪೂರ್ಣಗೊಳಿಸಿದ ನಂತರ ಈ ಸೃಷ್ಟಿ ನಿರಂತರವೂ ವೃದ್ಧಿಗೊಳ್ಳುತ್ತ ನಡೆದಿದೆ; ಪ್ರತಿನಿತ್ಯವೂ ಹೊಸ ಹೊಸ ಲೋಕ-ಲೋಕಾಂತರಗಳೂ ಚೇತನ ಮತ್ತು ಜಡಪದಾರ್ಥಗಳೂ ಹುಟ್ಟುತ್ತಲಿವೆ; ಆದರೆ ಯಾತರ ವಿನಾಶವೂ ಆಗುತ್ತಿಲ್ಲ ಎಂಬ ಮಾತು ಬ್ರಹ್ಮದೇವನ ಗಮನಕ್ಕೆ ಬಂತು. ಕಾಲಾಂತರದಲ್ಲಿ ಇದರ ಪರಿಣಾಮವೇನಾದೀತು ಎಂಬ ಕಲ್ಪನೆ ಆತನ ತಲೆ ತಿನ್ನತೊಡಗಿತು. ಆತ ವಿಚಾರ ಮಾಡಿ ಮಾಡಿ ದಣಿದ. ಆದರೆ ಯಾವ ಬಗೆಯ ಪರಿಹಾರವೂ ಹೊಳೆಯಲಿಲ್ಲ. ಈ ಸ್ಥಿತಿಯಲ್ಲಿ ಆತನ ಕ್ರೋಧ ಉರಿದೆದ್ದಿತು. ಅದರ ಜ್ವಾಲೆಯಲ್ಲಿ ಸಮಸ್ತ ಸೃಷ್ಟಿ ದಗ್ಧವಾಗತೊಡಗಿತು. ಸರ್ವನಾಶದ ಲಕ್ಷಣ ಕಾಣಿಸಿಕೊಂಡಿತು.

ಆಗ ಭಗವಾನ್ ವಿಷ್ಣು ಬ್ರಹ್ಮನ ಬಳಿಗೆ ಬಂದ. ಸಮಸ್ತ ಚರಾಚರ ಜಗತ್ತಿನ ಪರವಾಗಿ ಬ್ರಹ್ಮದೇವನಲ್ಲಿ ಕರುಣೆಯನ್ನು ಯಾಚಿಸುತ್ತ ವಿಷ್ಣು "ಬ್ರಹ್ಮದೇವಾ, ಇಷ್ಟೊಂದು ಪರಿಶ್ರಮದಿಂದ ನೀನು ಸೃಷ್ಟಿಸಿದ ಪ್ರಜೆ ಈಗ ನಿನ್ನ ಕ್ರೋಧಾನಲದಲ್ಲಿ ಭಸ್ಮವಾಗುತ್ತಲಿದೆ. ದಯವಿಟ್ಟು ಈ ಕ್ರೋಧವನ್ನು ಶಾಂತಗೊಳಿಸಿಕೊ" ಎಂದ.

ವಿಷ್ಣುವಿನ ಪ್ರಾರ್ಥನೆಯಿಂದ ಪ್ರೀತನಾದ ಬ್ರಹ್ಮನು ಕ್ರೋಧವನ್ನು ನುಂಗಿಕೊಂಡು ಒಂದು ಮುಹೂರ್ತ ಕಾಲ ಧ್ಯಾನಯೋಗವನ್ನು ಸಾಧಿಸಿ ಸೃಷ್ಟಿಗಾಗಿ ಪ್ರವೃತ್ತಿಧರ್ಮವನ್ನೂ ಮೋಕ್ಷಕ್ಕಾಗಿ ನಿವೃತ್ತಿಧರ್ಮವನ್ನೂ ಯೋಜಿಸಿದ.

ಇತ್ತ ಕ್ರೋಧಾಗ್ನಿಯ ಜ್ವಾಲೆಗಳು ಆರುತ್ತಿದ್ದಂತೆ ಅತ್ತ ನಾರಿಯೊಬ್ಬಳು ಹುಟ್ಟಿದಳು. ಈ ಲಲನೆ ಬಲು ರಹಸ್ಯಮಯಿಯಾಗಿದ್ದಳು. ಕೆಂಪು ಮಿಶ್ರಿತ ಕಪ್ಪು ಬಣ್ಣದಿಂದ ಅವಳ ಅಂಗ ಹೊಳೆಯುತ್ತಿತ್ತು. ಮುಖ, ನಾಲಗೆ ಮತ್ತು ಕಣ್ಣುಗಳು ಕೆಂಡದಂತೆ ಕೆಂಪಾಗಿದ್ದವು. ಬಹುವಿಧ ರತ್ನ ಭೂಷಣಗಳಿಂದ ಅಲಂಕೃತಳಾಗಿದ್ದರೂ ಅವಳು

ಅತ್ಯಂತ ಕ್ರೂರಳಾಗಿ ಕಾಣಿಸುತ್ತಿದ್ದಳು.

ಅವಳು ಪ್ರಕಟವಾದೊಡನೆ ಬ್ರಹ್ಮ ಅವಳಿಗೆ ಆದೇಶವಿತ್ತ : "ನನ್ನ ಸಂಹಾರ ಬುದ್ಧಿಯಿಂದ ನಿನ್ನ ಜನ್ಮವಾಗಿದೆ. ನನ್ನ ಆಜ್ಞೆಯಂತೆ ನೀನು ಜಡ-ಚೇತನ ಸೃಷ್ಟಿಯ ವಿನಾಶವನ್ನು ಮಾಡು."

ಬ್ರಹ್ಮನ ಮಾತು ಕೇಳಿದೊಡನೆ ಆ ಹೆಣ್ಣಿನ ಕಣ್ಣುಗಳಿಂದ ಅಶ್ರುಗಳ ಸಂತತಧಾರೆ ಹರಿಯ ತೊಡಗಿತು. ಅವಳು ಕಂಪಿತ ಸ್ವರದಲ್ಲಿ, "ಭಗವನ್, ಇದಕ್ಕಾಗಿಯೆ ಈ ಅಭಾಗಿನಿಯ ಸೃಷ್ಟಿಯಾಯಿತೇ? ತಿಳಿದೂ ತಿಳಿದೂ ಈ ಕ್ರೂರಕರ್ಮವನ್ನು ಹೇಗೆ ಮಾಡಲಿ? ಪ್ರಾಣ ಮೋಹದಿಂದ ವಿಲಾಪ ಗೈಯುವ ಪ್ರಾಣಿಗಳ ಪ್ರಾಣಗಳನ್ನು ಹೇಗೆ ಹರಣ ಮಾಡಲಿ? ಮತ್ತೆ ಯಾರ ಪ್ರಾಣ ಹರಣ ಮಾಡುವೆನೊ ಅವರ ಬಂಧುಬಳಗದವರು ಈಯುವ ಶಾಪ ನನ್ನನ್ನು ಬದುಕಿರಲು ಬಿಟ್ಟೀತೇ? ಕೃಪೆದೋರು. ನನ್ನನ್ನು ಈ ಧರ್ಮಸಂಕಟಕ್ಕೆ ಸಿಲುಕಿಸಬೇಡ" ಎಂದು ಬೇಡಿಕೊಂಡಳು.

"ಆದರೆ ಸಂಹಾರ ಕಾರ್ಯಕ್ಕಾಗಿಯೆ ಎಂದು ನಿನ್ನ ಸೃಷ್ಟಿಯಾಗಿದೆ. ಹೋಗು, ನನ್ನ ಆದೇಶವನ್ನು ಪಾಲಿಸು. ಈ ವಿಷಯದಲ್ಲಿ ವಾದ-ವಿವಾದಕ್ಕಾಸ್ಪದವಿಲ್ಲ. ಎಂತೂ ಪ್ರಾಣಿಗಳ ನಾಶವಾಗಿಯೆ ಆಗುವುದು. ನೀನು ನಿಮಿತ್ತಮಾತ್ರಳು" ಎಂದ ಬ್ರಹ್ಮದೇವ.

ಆದರೆ ಮೃತ್ಯುವಿಗೆ ಸಮಾಧಾನವಾಗಲಿಲ್ಲ. ಸಂಹಾರ ಕಾರ್ಯ ಅವಳಿಗೆ ಸಮ್ಮತವಿರಲಿಲ್ಲ. ಬ್ರಹ್ಮಲೋಕದಿಂದ ಹೊರಟ ಅವಳು ತಪಸ್ಸು ಮಾಡಲೆಂದು ಧೇನುಕಾಶ್ರಮಕ್ಕೆ ಹೋದಳು.

ವರ್ಷಗಟ್ಟಲೆ ಅವಳು ಮಾಡಿದ ಉಗ್ರ ತಪಸ್ಸಿನಿಂದ ಪ್ರಸನ್ನನಾದ ಬ್ರಹ್ಮ ಪ್ರತ್ಯಕ್ಷನಾಗಿ "ಮಗು, ಏತಕ್ಕಾಗಿ ಈ ಉಗ್ರ ತಪಸ್ಸು? ನಿನ್ನ ಬಯಕೆಯೇನು?" ಎಂದು ಕೇಳಿದ.

"ದೇವಾ, ಸಮಸ್ತ ಪ್ರಾಣಿವರ್ಗ ತಂತನ್ನ ನಿಯತ ಕಾರ್ಯದಲ್ಲಿ ಮಗ್ನವಾಗಿದೆ. ವಚನ ಅಥವಾ ವಿಚಾರ ಮೂಲಕವೂ ಯಾರೂ ಅಹಿತವನ್ನು ಎಸಗುವುದಿಲ್ಲ. ಅಂಥವರನ್ನು ನಾಶಗೈದರೆ ನಾನು ಮಹಾ ಅಧರ್ಮ ಮಾಡಿದಂತಾಗುವುದು. ಆ ಅಧರ್ಮಕ್ಕಂಜಿಯೆ ಈ ತಪಸ್ಸು ಮಾಡುತ್ತಿದ್ದೇನೆ. ನನ್ನನ್ನು ಪಾರು ಮಾಡು ಈ ಸಂಕಟದಿಂದ." ಮೃತ್ಯು ಬ್ರಹ್ಮನಿಗೆ ಸಾಷ್ಟಾಂಗವೆರಗಿ ಅವನ ಪಾದಗಳನ್ನು ಹಿಡಿದುಕೊಂಡಳು.

ತ್ರಿಕಾಲಜ್ಞ ಬ್ರಹ್ಮ ನುಡಿದ: "ಪ್ರಜಾ ಸಂಹಾರದಿಂದ ನಿನಗೆ ಅಧರ್ಮ ತಗಲದು ಎಂದು ಆಶ್ವಾಸನವೀಯುತ್ತೇನೆ. ನನ್ನ ಆದೇಶವನ್ನು ಪಾಲಿಸು. ಧರ್ಮ ನಿನ್ನನ್ನು ಪವಿತ್ರವಾಗಿಸುವುದು. ಲೋಕಪಾಲ, ಯಮರಾಜ, ರೋಗ ಮತ್ತು ದೇವಗಣ ಸಹಿತವಾಗಿ ನಾನು ನಿನ್ನ ರಕ್ಷಣೆ ಮಾಡುವೆನು. ಸಂಹಾರ ಕಾರ್ಯವನ್ನೆಸಗುತ್ತಿದ್ದರೂ ನೀನು ನಿಷ್ಪಾಪಿಯೂ ರಜೋಗುಣವಿಮುಕ್ತಳೂ ಆಗಿರುವಿ ಎಂದು ನಿನಗೆ ವರವೀಯುತ್ತೇನೆ."

"ಸರಿ. ಆದರೆ ನಿಷ್ಪಾಪ ಪ್ರಾಣಿಗಳನ್ನು ಪೀಡಿಸುತ್ತಿರುವಾಗ ನನ್ನ ಆತ್ಮ ಹೇಗೆ ಶಾಂತವಾಗಿದ್ದೀತು?"

ಒಂದು ಕ್ಷಣ ಯೋಚಿಸಿ ಬ್ರಹ್ಮ ಹೇಳಿದ: "ನಿನ್ನ ಮಾತು ನಿಜ. ಲೋಭ, ಮೋಹ, ಕ್ರೋಧ, ಈರ್ಷೆ, ದ್ರೋಹ, ನಿರ್ಲಜ್ಜತೆ, ನಿರ್ದಯತೆ, ಕಟುವಾಣಿ ಎಂಬೀ ರಜೋಗುಣಿ ಮತ್ತು ತಮೋಗುಣಿ ಪ್ರವೃತ್ತಿಗಳು ಪ್ರಾಣಿಗಳ ಧರ್ಮ ಸಂಚಯವನ್ನು ಕರಗಿಸುತ್ತಲೇ ಇರುವವು. ಕೊನೆಗೆ ಅವು ತಾವಾಗಿಯೆ ನಿನ್ನ ತುತ್ತಾಗುವವು. ಇನು ತೆರಳು. ಕಾಮ-ಕ್ರೋಧಗಳಿಂದ ಮುಕ್ತಳಾಗಿ ಜೀವಿಗಳ ಸಂಹಾರ ಕಾರ್ಯದಲ್ಲಿ ತೊಡಗು."

ಅಂದಿನಿಂದ ಮೃತ್ಯು ಲೋಕಪಿತನ ಆದೇಶವನ್ನು ಪಾಲಿಸುತ್ತ ಬಂದಿದ್ದಾಳೆ. ಮದ-ಮಾತ್ಸರ್ಯ, ದ್ವೇಷ-ಅಸೂಯೆ, ಕಾಮ-ಕ್ರೌರ್ಯ – ಮೊದಲಾದ ಮನೋವಿಕಾರಗಳು ಮನುಷ್ಯನಲ್ಲಿ ದೈಹಿಕ ವಿಕಾರಗಳನ್ನುಂಟುಮಾಡುತ್ತವೆ. ಈ ಎರಡೂ ವಿಕಾರಗಳು ಮನುಷ್ಯನ ಪುಣ್ಯ ಮತ್ತು ಸ್ವಾಸ್ಥ್ಯವನ್ನು ಕ್ಷೀಣಗೊಳಿಸುತ್ತವೆ. ಆಗ ದಯಾಮಯ ಮೃತ್ಯು ಬಂದು ಅವನನ್ನು ಈ ಘಾತಕ ಜೀವನದಿಂದ ಮುಕ್ತಗೊಳಿಸುತ್ತದೆ. *

# ಮಹಾಪುರುಷರ ಮನಸು

ತುಂಗಭದ್ರೆಯ "ಪ್ರೇಮಾಯತನ"ದ ವಿದ್ಯಾರ್ಥಿಗಳು ಸಂಜೆ ಆರು ಗಂಟೆಗೆ ಅಲ್ಲಿ ಬರುತ್ತಿದ್ದ ಮುಂಬಯಿ-ಮದ್ರಾಸ್ ಎಕ್ಸ್‌ಪ್ರೆಸ್ ಗಾಡಿಗಾಗಿ ಸಂಭ್ರಮದಿಂದ ಕಾಯುತ್ತಿದ್ದರು. ಅಂದು ಮುಂಬಯಿಯಿಂದ ಗುರುವರ್ಯ ಪಂಡಿತ ತಾರಾನಾಥರು ಅದೇ ರೈಲಿನಿಂದ ಬರಲಿದ್ದರು. ಮುಂಬಯಿಯ ಆಗಿನ ಆರೋಗ್ಯ ಮಂತ್ರಿಗಳಾಗಿದ್ದ ಡಾ. ಗಿಲ್ಡರ್‌ರ ಆಸ್ಪತ್ರೆಗಳ ಮೇಲಿನ ಬಿಲ್ಲೊಂದನ್ನು ಪ್ರತಿಭಟಿಸಲು ಮುಂಬಯಿಯಿಂದ ಕರೆ ಬಂದದ್ದರಿಂದ ಅವರು ಹೋಗಿದ್ದರು. ಸಾವಿರಾರು ವೈದ್ಯರನ್ನು ಕೂಡಿಸಿಕೊಂಡು ತಾರಾನಾಥರು ಕರಿ ಪತಾಕೆಯೊಂದಿಗೆ ಸೆಕ್ರೆಟರಿಯಟ್ಟಿಗೆ ಜಾತಾ ನಡೆಸಿಕೊಂಡು ಹೋದ ಸುದ್ದಿ ಫೋಟೊ ಸಹಿತ ದಪ್ಪ ಅಕ್ಷರಗಳಲ್ಲಿ ಪೇಪರಿನಲ್ಲಿ ಬಂದಿತ್ತು. ಆ ಹುಮ್ಮಸ್ಸಿನಲ್ಲಿ ನಾವೆಲ್ಲ ಅವರ ಬರವನ್ನೇ ಕಾಯುತ ನಿಂತಿದ್ದೆವು.

ಗಾಡಿ ಬಂದು ನಿಂತಿತು. ತೆರೆದ ಬಾಗಿಲೊಂದರ ಹತ್ತಿರ ತಾರಾಜಿಯ ಆಜಾನುಬಾಹು ಆಕೃತಿ ನಿಂತಿತ್ತು. ನಾವೆಲ್ಲ ಚೀರುತ್ತ ನಲಿಯುತ್ತ ಅತ್ತ ಓಡಿದೆವು. ಅವರನ್ನು ಇಳಿಸಿ ಅವರ ಸಾಮಾನುಗಳನ್ನು ಸಾಗಿಸಿಕೊಂಡು ಹೊರಟೆವು. ಗೇಟಿನ ವರೆಗೆ ಬಂದು ಕಾದೆವು. ತಾರಾಜಿಯ ಸುಳಿವಿಲ್ಲ.

ಸೋಜಿಗಗೊಂಡು ಹಿಂದೆ ನೋಡಿದೆವು. ಅವರು ಪ್ಲಾಟ್‌ಫಾರಂನ ತುದಿಯಲ್ಲಿದ್ದ ಯಾವ ಯಾವುವೋ ಗಂಟುಗಳನ್ನು ಒಂದೊಂದಾಗಿ ಒಯ್ದು ರೈಲಿನಲ್ಲಿ ಇಡುವುದರಲ್ಲಿ ಮಗ್ನರಾಗಿದ್ದರು. ಗಂಟುಗಳನ್ನು ಒಬ್ಬ ಮುದುಕಿ ಎತ್ತಿ ಕೊಡುತ್ತಿದ್ದಳು.

ಮುದುಕಿಗೆ ಗಾಡಿಯಲ್ಲಿ ಚೆನ್ನಾಗಿ ಜಾಗ ಮಾಡಿಕೊಟ್ಟು ಅವಳ ಗಂಟುಗಳನ್ನು ಅವಳ ಹತ್ತಿರವೇ ಇರಿಸಿ, ತಾರಾನಾಥರು "ಒಂದೊ ಎರಡೊ ದೊಡ್ಡ ಗಂಟುಗಳನ್ನು ಮಾಡಬಾರದಿತ್ತೆ ಅಜ್ಜಿ?" ಎಂದರು. ಅದಕ್ಕೆ ಅಜ್ಜಿ "ನಿಮ್ಮಂಥವರು ಯಾರು ಸಿಗುತ್ತಾರೆಂದು ಮೂಟೆ ದೊಡ್ಡದು ಮಾಡಲಿ ಮಗೂ? ಈ ಚಿಕ್ಕವುಗಳನ್ನೇ ನನಗೆ ರೈಲಿಗೆತ್ತಿಡಲಾಗುತ್ತಿರಲಿಲ್ಲ" ಎಂದು ಉತ್ತರಿಸಿದಳು. ಕೃತಜ್ಞ ಭಾವದಿಂದ ಎರಡು ಹನಿ ನೀರು ಅಜ್ಜಿಯ ಕಣ್ಣುಗಳಿಂದ ಉದುರಿದವು.

ಅಜ್ಜಿ ಧಾರವಾಡದವರು. ತುಂಗಭದ್ರೆಯಿಂದ ಎಂಟು ಮೈಲು ದೂರವಿರುವ ಮಂತ್ರಾಲಯಕ್ಕೆ ಹೋಗಿದ್ದರು. ಅಲ್ಲಿ ಒಂದೆರಡು ತಿಂಗಳಿದ್ದು ಈಗ ಮರಳಿ ಹೊರಟಿದ್ದರು. ಖರ್ಚಿಗೆಂದು ಒಯ್ದಿದ್ದ ಸಾಮಗ್ರಿಯಲ್ಲಿ ಉಳಿದದ್ದನ್ನೂ ಮಂತ್ರಾಲಯದಲ್ಲಿ ಪಡೆದದ್ದನ್ನೂ ಸೇರಿಸಿಯೆ ಈ ಗಂಟುಗಳನ್ನು ಮಾಡಿ ಹೇಗೊ ನಡೆದು ಸ್ಟೇಶನ್ ಸೇರಿದ್ದರು. ಹತ್ತೇ ನಿಮಿಷ ನಿಲ್ಲುವ ಗಾಡಿಗೆ ಗಂಟು ಹೇರುವುದಕ್ಕಾಗಿ ಪಡಿಪಡಿಸಿ ಗಾಬರಿಯಾಗಿದ್ದ ಮುದುಕಿಯನ್ನು ಕಂಡು ತಾವು ೧೫ ದಿನದ ಆಯಾಸದಿಂದ ಹಣ್ಣಾಗಿದ್ದರೂ ತಾರಾಜಿ ತಮ್ಮ ದಣಿವನ್ನು ಮರೆತು ಅವಳ ನೆರವಿಗೆ ಧಾವಿಸಿದ್ದರು.

ತಾರಾಜಿಯವರ ದಯಾಪರ ಹೃದಯವನ್ನು ಕಂಡು ನಾವು ಮಂತ್ರಮುಗ್ಧರಂತೆ ನಿಂತಿದ್ದೆವು. ನಮ್ಮ ತಂಡದ ಒಬ್ಬ ಪ್ರೊಫೆಸರರು, "ನಮಗೆ ಹೇಳಬಾರದಿತ್ತೆ? ನೀವೇಕೆ ಆಯಾಸಪಟ್ಟಿರಿ?" ಎಂದು ತಾರಾಜಿಯನ್ನು ಪ್ರಶ್ನಿಸಿದರು.

ತಾರಾಜಿ, "ನೀವೂ ಈ ದಾರಿಯಾಗಿಯೇ ಹೋಗಿದ್ದಿರಲ್ಲವೆ?" ಎಂದು ಕೇಳಿದರು. ಮತ್ತೆ ನಾವಾರೂ ತುಟಿ ಬಿಚ್ಚಲಿಲ್ಲ. ಹೊರಗೆ ಕಾದಿದ್ದ ಕಾರಿನಲ್ಲಿ ಮೌನವಾಗಿ ಆಶ್ರಮ ಸೇರಿದೆವು.

—ಡಾ. ಯು. ಕೃಷ್ಣ

ಉತ್ತೋ ಕ್ಸೇತರ್ (Utto Xeter) ನಲ್ಲಿ ಅಂದು ಸಂತೆ. ವಿಪರೀತ ಗದ್ದಲ. ಜನಗಳ ನೂಕು-ನುಗ್ಗಲು ಹೇಳತೀರದು. ಅಂತಹ ನೂಕು ನುಗ್ಗಲಿನಲ್ಲಿ ಇಳಿ ವಯಸ್ಸಿನ ಸಭ್ಯವ್ಯಕ್ತಿಯೋರ್ವರು ಜನಗಳನ್ನು ಹಿಂದಕ್ಕೆ ತಳ್ಳಿ ತಾವು ಮುಂದೆ-ಮುಂದೆ ನಡೆಯುತ್ತಿದ್ದರು. ತುಸು ಸಮಯದ ನಂತರ ಅವರು ಒಂದು ನಿಶ್ಚಿತ ಸ್ಥಾನದಲ್ಲಿ ನಿಂತರು. ಅಲ್ಲಿಗೆ ಬರುತ್ತಲೇ ಅವರ ಮೈ ಕಂಪಿಸಲಾರಂಭಿಸಿತು. ಕಣ್ಣುಗಳಲ್ಲಿ ಮಹಾಪೂರ ಬಂದುಬಿಟ್ಟಿತು. ಸುಡುವ ಬಿಸಿಲನ್ನೂ ಗಮನಿಸದೆ, ತಲೆಯ ಮೇಲಿನ ಟೊಪ್ಪಿಗೆಯನ್ನು ತೆಗೆದು ಕಂಕುಳ ಬದಿಗೆ ಸೇರಿಸಿ ಕಂಬದಂತೆ ಚಲಿಸದೆ ನಿಂತರು. ಎರಡು ಗಂಟೆಯಾಯಿತು. ಅವರು ಕದಲಲಿಲ್ಲ. ಆಕಾಶದಲ್ಲಿ ಮೋಡಗಳು ಸಂಚರಿಸಿದವು. ಮಳೆಯನ್ನೂ ಸುರಿಸಿದವು. ಆದರೂ ಅವರು ಅಲುಗಲಿಲ್ಲ. ಅವರು ದೇವರಲ್ಲಿ ತಮ್ಮ ತಪ್ಪಿಗಾಗಿ ಕ್ಷಮೆಯನ್ನು ಯಾಚಿಸುತ್ತಾ ನಿಂತುಬಿಟ್ಟಿದ್ದರು.

ಆ ವ್ಯಕ್ತಿ ಬೇರೆ ಯಾರೂ ಅಲ್ಲ. ಹದಿನೆಂಟನೆಯ ಶತಮಾನದ ಉತ್ತರಾರ್ಧದಲ್ಲಿ ಆಂಗ್ಲ ಸಾರಸ್ವತ ಪ್ರಪಂಚದ ಅನಭಿಷಕ್ತ ಸಾರ್ವಭೌಮರಾಗಿ ಮೆರೆದ ಡಾ. ಸ್ಯಾಮುಯೆಲ್ ಜಾನ್ಸನ್ನರು. ಅದು ಅವರ ತಂದೆ ಪುಸ್ತಕ ಮಾರುತ್ತಿದ್ದ ಸ್ಥಳವಾಗಿತ್ತು.

ಅವರು ತುಂಬಾ ಬಡತನದಲ್ಲಿ ಬಾಲ್ಯವನ್ನು ಕಳೆದರು. ಅವರ ತಂದೆಯವರು ಪುಸ್ತಕ ಮಾರಿ ಜೀವನ ನಡೆಸುತ್ತಿದ್ದರು-ಅದೂ ಬಹು ಪ್ರಯಾಸದಿಂದ. ಪುಸ್ತಕ ಮಾರಿದರೇ ಊಟ. ಇಲ್ಲದಿದ್ದರೆ ಇಲ್ಲ.

ಒಮ್ಮೆ ಅವರ ತಂದೆ ಅನಾರೋಗ್ಯ ನಿಮಿತ್ತ ಬಾಲಕ ಜಾನ್ಸನ್ನರನ್ನು "ಸಂತೆಗೆ ಹೋಗಿ ಪುಸ್ತಕ ಮಾರಿಕೊಂಡು ಬಾ" ಎಂದರು. ಜಾನ್ಸನ್ನರು ತಲೆ ಅಲ್ಲಾಡಿಸಿಬಿಟ್ಟರು. ಮಗ ಹಟಮಾರಿ, ಸ್ವಾರ್ಥಿ ಎಂಬುದು ಅವರ ತಂದೆಗೆ ತಿಳಿದಿತ್ತು. ಅವರು ಮರುಮಾತಾಡದೆ ಪುಸ್ತಕಗಳ ಗಂಟನ್ನು ಹೊತ್ತು ಸಂತೆಗೆ ಹೊರಟುಹೋದರು.

ತಮ್ಮ ತಂದೆ ಹೊರಟು ಹೋದ ಮೇಲೆ ಜಾನ್ಸನ್ನರ ಅಂತಃಕರಣ ಚುಚ್ಚತೊಡಗಿತು ತಂದೆ ಸಂತೆಯಲ್ಲಿ ಪುಸ್ತಕ ಮಾರುತ್ತಿರುವ ದೃಶ್ಯ ಕಲ್ಪನೆಗೆ ಬಂದಿತು. ಮಧ್ಯಾಹ್ನದ ಉರಿ ಬಿಸಿಲು, ಮುಖ ಬಿಳಿಚಿಕೊಂಡು ದಣಿದು ನಿಂತಿರುವ ತಂದೆ- ಜನಗಳ ಕನಿಕರ ನೋಟ. "ಇವನಿಗೆ ಮಕ್ಕಳಿಲ್ಲವೇ?" "ಇಂತಹ ಸ್ಥಿತಿಯಲ್ಲಿ ನೆರವಾಗದ ಮಕ್ಕಳೂ ಇರುತ್ತಾರೆಯೆ"? ಮುಂತಾದ ನಿಂದೆಯ ನುಡಿಗಳು.

ಜಾನ್ಸನ್ನರು "ದೇವರೇ, ನನ್ನನ್ನು ಕ್ಷಮಿಸು, ನನ್ನನ್ನು ಕ್ಷಮಿಸು," ಎಂದು ಮೊರೆಯಿಟ್ಟರು. ಆದರೆ ದೇವರು ಕ್ಷಮಿಸಲಿಲ್ಲ- ಏಕೆಂದರೆ ಅವರು ನಿಜವಾಗಿಯೂ ಪಶ್ಚಾತ್ತಾಪಪಡುತ್ತಿರಲಿಲ್ಲ. ಹಾಗಿದ್ದಿದ್ದರೆ ಅನಂತರವಾದರೂ ಸಂತೆಗೆ ಹೋಗಿ ನೆರವಾಗಬಹುದಿತ್ತು. ತಂದೆಯ ಕ್ಷಮೆಯನ್ನು ಬೇಡಬಹುದಾಗಿತ್ತು. ಆದರೆ ಅವರು ಹಾಗೆ ಮಾಡಲಿಲ್ಲ.

ಕೆಲವು ವರ್ಷಗಳ ನಂತರ ಜಾನ್ಸನ್ನರ ತಂದೆ ಮೈಕೇಲ್ ಜಾನ್ಸನ್ನರು ತೀರಿಹೋದರು. ಜಾನ್ಸನ್ನರು ದೊಡ್ಡ ಬರಹಗಾರರಾದರು. ಸಮಕಾಲೀನ ಸಾಹಿತಿಗಳಲ್ಲಿ ಯಾರೂ ಗಳಿಸಿರದಷ್ಟು ಕೀರ್ತಿಯನ್ನು ಗಳಿಸಿದರು. ಇಂಗ್ಲೆಂಡಿನ ದೊರೆಗಳು ಅವರನ್ನು ಸನ್ಮಾನಿಸಿದರು. ಪ್ರತಿಷ್ಠಿತ ವ್ಯಕ್ತಿಗಳು ಅವರ ಸ್ನೇಹ ಗಳಿಸಲು ಹಾತೊರೆಯುತ್ತಿದ್ದರು, ಅವರೊಂದಿಗೆ ಸಂಭಾಷಣೆ ನಡೆಸಲು ಕಾತರರಾಗಿರುತ್ತಿದ್ದರು.

ಆದರೆ ಈ ಕೀರ್ತಿ ಸನ್ಮಾನಗಳಾವುವೂ "ಸಂತೆಯ ಘಟನೆ"ಯನ್ನು ಅವರ ಚಿತ್ತಪಟಲದಿಂದ ದೂರ ಸರಿಸಲಾರದಾದವು. ಆ ಘಟನೆ ಅವರ ಹೃದಯವನ್ನು ಕೊರೆಯುತ್ತಲೇ ಇದ್ದಿತು.

ಕೊನೆಗೊಮ್ಮೆ, ಐವತ್ತು ವರ್ಷಗಳ ದೀರ್ಘ ಕಾಲದ ನಂತರ, ಪರಿತಾಪದ ಬೇಗುದಿಯಲ್ಲಿ ಬೆಂದ ಅವರು ಮೇಲ್ಕಂಡಂತೆ ಪ್ರಾಯಶ್ಚಿತ್ತ ಮಾಡಿಕೊಂಡರು. — ಪಿ. ರಾಮಸ್ವಾಮಿ

ನಿರ್ಭಯವೇ ಅವರ
ಜೀವನದ ಸಾರವಾಗಿದೆ

# ಶ್ರೀಮತಿ ಕಮಲಾದೇವಿ



ಪಾವೆಂ

ಕನ್ನಡನಾಡಿನಲ್ಲಿ ಹುಟ್ಟಿದ ಆಧುನಿಕ ಮಹಿಳೆಯರಲ್ಲಿ ಎಲ್ಲರಿಗೂ ಮಿಗಿಲಾದ ಕೀರ್ತಿಯನ್ನು ಪಡೆದವರೆಂದರೆ ಕಮಲಾದೇವಿಯವರು. ನೆಹರೂ ಕುಟುಂಬದ ಮೂವರು ಮಹಿಳೆಯರನ್ನೂ ಸರೋಜಿನಿ ನಾಯ್ಡುರವರನ್ನೂ ಬಿಟ್ಟರೆ ಅಖಿಲ ಭಾರತದಲ್ಲೇ ಕಮಲಾ ದೇವಿಯವರು ಅತಿ ಪ್ರಸಿದ್ಧ ಮಹಿಳೆಯಾಗಿದ್ದಾರೆ. ಅವರು ಮಹಿಳಾ ಆಂದೋಲನದ ಚಾಲಕಸತ್ವವಾಗಿದ್ದರು. ಸಮಾಜವಾದಿ ಚಳವಳಿಯತ್ತ ಅಸಂಖ್ಯ ತರುಣರನ್ನು ಆಕರ್ಷಿಸಿದರು. ಅಪ್ರತಿಮ ಉತ್ಸಾಹಶಕ್ತಿಯ ತೆರೆಗಳ ಮೇಲೆ ಅವರು ತಮ್ಮ ಸಾರ್ವಜನಿಕ ಜೀವನದ ಶಿಖರಾವಸ್ಥೆಯಲ್ಲಿ ಕಾಂಗ್ರೆಸ್ ಕಾರ್ಯಸಮಿತಿಯ ಸದಸ್ಯತ್ವದ ವರೆಗೂ ಮುಟ್ಟಿದರು.

ಕಮಲಾದೇವಿಯವರ At the Cross Roads ಎಂಬ ಪುಸ್ತಕದ ಮುನ್ನುಡಿಯಲ್ಲಿ ಯುಸುಫ್ ಮೆಹರಲಿಯವರು ಅವರನ್ನು ಕುರಿತು ಬರೆಯುತ್ತ, "ಇಚ್ಛಾಶಕ್ತಿಯಲ್ಲಿ ಧೈರ್ಯವೂ ಕೃತಿತ್ವವೂ ಇಷ್ಟು ಪರಿಪೂರ್ಣ ಪ್ರಮಾಣದಲ್ಲಿ ಬೆರೆತಿರುವ ವ್ಯಕ್ತಿಗಳು ದೊರೆಯುವುದು ಅಪರೂಪ. ಮೊದಲಿಂದಲೂ ಉತ್ತೇಜಿತ ವಿವಾದದ ವಾತಾವರಣದಲ್ಲಿಯೇ ಕಾರ್ಯತತ್ಪರರಾಗಿರುವುದು ಅವರ ಹಣೆಯಲ್ಲಿ ಬರೆದಿತ್ತು" ಎಂದಿದ್ದಾರೆ. ಈ "ಉತ್ತೇಜಿತ ವಿವಾದ"ಕ್ಕೆ ಕಮಲಾದೇವಿ ಚಿಕ್ಕಂದಿನಲ್ಲೇ ಕೇಂದ್ರವಾದರು. ಅವರ "ಇಚ್ಛಾಶಕ್ತಿ" ಯಾವುದನ್ನೂ ಲೆಕ್ಕಿಸಲಿಲ್ಲ. ಬಾಲ ವೈಧವ್ಯಕ್ಕೊಳಗಾಗಿದ್ದ ಅವರು ಪುನರ್ವಿವಾಹವಾದಾಗ ಅವರಿಗೆ ಜನ್ಮವಿತ್ತ ಸಾರಸ್ವತ ಸಮಾಜದಲ್ಲೊಂದು ಚಿಕ್ಕ ಪ್ರಳಯವೇ ಆಗಿಹೋಯಿತು.

ಕಮಲಾದೇವಿಯವರು ಎಪ್ರಿಲ್ ೧೯೦೩ ರಲ್ಲಿ ಮಂಗಳೂರಲ್ಲಿ ಹುಟ್ಟಿದರು. ಅವರ ತಂದೆ ಧಾರೇಶ್ವರ ಅನಂತರಾಯರು ಡೆಪ್ಯುಟಿ ಕಲೆಕ್ಟರರಾಗಿದ್ದರು. ಕಮಲಾದೇವಿಯವರ ಪ್ರಥಮವಿವಾಹ ೧೨—೧೩ ವಯಸ್ಸಿನಲ್ಲೇ ಆಯಿತು. (ಸಾರಸ್ವತ ಸಮಾಜದಲ್ಲಿ ಪ್ರತಿಷ್ಠಿತರೆನಿಸಿದ್ದ ಆಗಿನ ಜಿಲ್ಲಾ ಬೋರ್ಡ್ ಅಧ್ಯಕ್ಷ ನಯಂಪಳ್ಳಿ ಸುಬ್ಬರಾಯರ ಮಗನಿಗೆ ಅವರನ್ನು ಕೊಡಲಾಗಿತ್ತು.) ಆದರೆ ಮದುವೆಯಾಗಿ ಒಂದೆರಡು ವರ್ಷಗಳೊಳಗೇ ಅವರಿಗೆ ವೈಧವ್ಯ ಪ್ರಾಪ್ತಿಯಾಯಿತು. ಆಗ ಸಂಪ್ರದಾಯದಂತೆ ಕಮಲಾದೇವಿಯವರು ಶಾಲೆ ಬಿಡದೆ ಶಿಕ್ಷಣ ಮುಂದುವರಿಸಿದ್ದು ನೋಡಿ

ಸಮಾಜದ ಹುಬ್ಬು ಗಂಟಿಕ್ಕಿತು. ಕಮಲಾದೇವಿ ಹೈಸ್ಕೂಲು ಮುಗಿಸಿ ಮದ್ರಾಸಿನ ಕ್ವೀನ್ ಮೇರೀಸ್ ಕಾಲೇಜಿನಲ್ಲಿ ಅಭ್ಯಾಸ ಮುಂದುವರಿಸಿದರು.

ಈ ನಡುವೆ ಮಂಗಳೂರಿಗೆ ಬಂದಿದ್ದ ಹರೀಂದ್ರನಾಥ ಚಟ್ಟೋಪಾಧ್ಯಾಯರ ಪರಿಚಯ ಕಮಲಾದೇವಿಯವರಿಗಾಯಿತು. ಆ ಹಾಡುವ ಮತ್ತು ಬಾರಿಸುವ ಸಾಹಿತಿಯೊಡನೆ ಅವರು ಪ್ರೇಮದಲ್ಲಿ ಸಿಲುಕಿದರು. ಸುತ್ತಲೂ ಎದುರಾದ ವಿರೋಧವನ್ನು ಲೆಕ್ಕಿಸದೆ ಅವರು ಹರೀಂದ್ರನಾಥರನ್ನು ವಿವಾಹವಾದರು. ಕವಿ ಗಂಡ ಮತ್ತು ಅನುಪಮ ಸುಂದರಿ ಹೆಂಡತಿಯ ಈ ತಂಡ ಕಲ ಕಾಲ ಹೋದಲ್ಲೆಲ್ಲ ಉತ್ಸಾಹವನ್ನು ಚೆಲ್ಲುತ್ತ ದೇಶವನ್ನೆಲ್ಲ ಸುತ್ತಿತು.

ಈ ವಿವಾಹ ಅಷ್ಟು ಸುಖಾಂತವಾಗಲಿಲ್ಲೆಂಬುದು ನಿಜ. ಆದರೆ ಅದು ಕಮಲಾದೇವಿಯವರನ್ನು ಸಾಮಾಜಿಕ ಮತ್ತು ರಾಜಕೀಯ ಆಂದೋಲನದ ಸೆಳವಿಗೆ ಸಿಲುಕಿಸಲು ನೆರವಾಯಿತು. ಅವರು ಕಾಂಗ್ರೆಸ್ ಸೇರಿದರು. ೧೯೨೪ ರಲ್ಲಿ ಬೆಳಗಾವಿ ಕಾಂಗ್ರೆಸ್ಸಿನಲ್ಲಿ ಅವರು ಸ್ವಯಂಸೇವಿಕೆಯಾಗಿದ್ದುದನ್ನು ಕಂಡವರು ಮುಟ್ಟಿದ್ದಕ್ಕೆಲ್ಲ ಹುರುಪನ್ನು ನೀಡುವ ಅವರ ಯೋಗ್ಯತೆಯನ್ನು ಈಗಲೂ ನೆನೆದುಕೊಳ್ಳುತ್ತಾರೆ.

ಒಂದೂವರೆ ವರ್ಷದ ನಂತರ ೨೩ ವರ್ಷದ ಈ ತರುಣಿ ದಕ್ಷಿಣ ಕನ್ನಡ ಜಿಲ್ಲೆಯ ಅತಿ ಪ್ರಮುಖ ಮುಂದಾಳೊಬ್ಬರನ್ನು ಎದುರಿಸಿ ಮದ್ರಾಸ್ ಶಾಸನ ಸಭೆಯ ಚುನಾವಣೆಯ ಕಣಕ್ಕಿಳಿಯುವುದನ್ನು ಕಾಣುತ್ತೇವೆ. ಕೆ. ಆರ್. ಕಾರಂತರು ಪ್ರಸಿದ್ಧ ವಕೀಲರು, ಸ್ವರಾಜ್ಯ ಪಕ್ಷದ ಅಧಿಕೃತ ಹುರಿಯಾಳುಗಳು; ಕಮಲಾದೇವಿಯವರು ರಾಜಕಾರಣಕ್ಕೆ ಹೊಸಬರು, ಮಹಿಳೆಯರ ಹಕ್ಕನ್ನು ಪ್ರತಿಪಾದಿಸಿ ರಂಗಕ್ಕಿಳಿದವರು. ಬಹುಶಃ ಇಡೀ ದೇಶದಲ್ಲೇ ಅವರು ಚುನಾವಣೆಗೆ ನಿಂತ ಪ್ರಪ್ರಥಮ ಮಹಿಳೆಯಾಗಿರಬೇಕು. ಅವರು ಕೊನೆಯಲ್ಲಿ ೨೦೦ ಮತಗಳಿಂದ ಸೋತರು. ಅಂದಿನ ಸ್ಥಿತಿಗತಿಗಳಲ್ಲಿ ಇದು ಆಶ್ಚರ್ಯಕರವಾಗಿರಲಿಲ್ಲ. ಬದಲಿಗೆ ಮಹಿಳೆಯರು ತಮ್ಮ ಹಕ್ಕುಗಳನ್ನು ಪಡೆಯಲು ನಡೆಸುವ ಯತ್ನಗಳಿಗೆ ಅದು ನಾಂದಿಯಾಯಿತು.

ಅನಂತರ ಕಮಲಾದೇವಿಯರು ಮಹಿಳಾ ಚಳವಳಿಯಲ್ಲಿ ಆಸಕ್ತಿ ವಹಿಸಿದರು. ಬೇಗನೇ ಅವರು ಅದರ ತುತ್ತತುದಿಗೇರಿದರು. ಅಖಿಲ ಭಾರತ ಮಹಿಳಾ ಶಿಕ್ಷಣ ಪರಿಷತ್ತಿನ ಪ್ರಧಾನ ಕಾರ್ಯದರ್ಶಿಯೂ ಅಖಿಲ ಭಾರತ ಮಹಿಳಾ ಪರಿಷತ್ತಿನ ಸಂಘಟನಾ ಕಾರ್ಯದರ್ಶಿಯೂ ಆಗಿ ಅವರು ಮಹಿಳಾ ಚಳವಳಿಯನ್ನು ಪ್ರಗತಿಪಥದಲ್ಲಿ ಸಾಗಿಸಲು ನೆರವಾದರು. ೧೯೨೯ ರಲ್ಲಿ ಅವರು ಹುಬ್ಬಳ್ಳಿಯಲ್ಲಿ ಈ ಬಗ್ಗೆ ಒಂದು ಸಾರ್ವಜನಿಕ ಭಾಷಣ ಮಾಡಿದರು.

೧೯೩೦ ರಲ್ಲಿ ಮಹಾತ್ಮಾಗಾಂಧಿಯವರು ಉಪ್ಪಿನ ಸತ್ಯಾಗ್ರಹ ಹೂಡಿದಾಗ ಸಂಪತ್ತಿನಲ್ಲಿ ಬೆಳೆದ ಈ ಕೋಮಲ ತರುಣಿ ಮುಂಬಯಿಯಲ್ಲಿ ಸೆರೆಮನೆ ಸೇರಲು ಮುಂದೆ ಬಂದ ಪ್ರಪ್ರಥಮ ಮಹಿಳೆಯರಲ್ಲೊಬ್ಬರಾಗಿದ್ದರು. ಮುಂಬಯಿಯ ಸ್ಟಾಕ್ ಎಕ್ಸ್‌ಚೇಂಜಿನಲ್ಲಿ ಅವರು ಬೇಕಾಯಿದೇಶೀರ್ ಉಪ್ಪಿನ ಪುಡಿಕೆಗಳನ್ನು ೪೦,೦೦೦ ರೂಪಾಯಿಯ ಅದ್ಭುತ ಕ್ರಯಕ್ಕೆ ಮಾರಿದರು. ಮ್ಯಾಜಿಸ್ಟ್ರೇಟರ ಮುಂದೆ ನಿಲ್ಲಿಸಿದಾಗ ರಾಜೀನಾಮೆ ಕೊಟ್ಟು ನೀವೂ ಸತ್ಯಾಗ್ರಹಿಯಾಗಿರಿ ಎಂದು ಅವರು ಮ್ಯಾಜಿಸ್ಟ್ರೇಟರಿಗೆ ಆಮಂತ್ರಣವಿತ್ತು ಕೋರ್ಟಿನಲ್ಲೇ ಉಪ್ಪು ಮಾರಲು ಪ್ರಾರಂಭಿಸಿದರು. ಅವರಿಗೆ ಒಂಬತ್ತು ತಿಂಗಳ ಶಿಕ್ಷೆಯಾಯಿತು.

ಅಂದಿನಿಂದ ಕಮಲಾದೇವಿಯವರು ಪ್ರತಿಯೊಂದು ಚಳವಳಿಯಲ್ಲೂ ಸೆರೆಮನೆಯ ಮೊದಲ ಅತಿಥಿಗಳ ಸಾಲಿನಲ್ಲಿ ಸೇರಿದ್ದುದು ಅವರನ್ನು ಬ್ರಿಟಿಶ್ ಸರಕಾರ ಎಷ್ಟು ಅಪಾಯಕರ ವ್ಯಕ್ತಿಯೆಂದು ತಿಳಿದಿತ್ತೆಂಬುದನ್ನು ತೋರಿಸುತ್ತದೆ. ೧೯೩೨-೩೩ ರಲ್ಲಿ ಎರಡು ಸಲ—ಒಮ್ಮೆ ಬೆಳಗಾವಿ ಸೆರೆಮನೆಯಲ್ಲಿ, ಇನ್ನೊಮ್ಮೆ ವೆಲ್ಲೂರಿ

ನಲ್ಲಿ— ಕಾರಾಗೃಹವನ್ನನುಭವಿಸಿದರು. ಸೆರೆ ಮನೆಯಲ್ಲೂ ಅವರು ದುರ್ದಾಂತರಾಗಿಯೇ ಇದ್ದರು. ಒಮ್ಮೆಯಂತೂ ಅವರನ್ನು ಇಡೀ ವರ್ಷ ಏಕಾಂತಬಂಧನದಲ್ಲಿರಿಸಿ ಬ್ರಿಟಿಶ ಅಧಿಕಾರಿಗಳು ಪ್ರತೀಕಾರ ಮಾಡಿದರು. ೧೯೪೨ ರ "ಚಲೇಚಾವ್" ಚಳವಳಿಯಲ್ಲಿ ಅವರು ಡಿಟೆನ್ಯೂ ಆಗಿ ದೀರ್ಘಕಾಲ ಸೆರೆಮನೆಯಲ್ಲಿ ಕೊಳೆಯಬೇಕಾಯಿತು.

ಶ್ರೀಮಂತ ಕುಲದಲ್ಲಿ ಜನಿಸಿದ್ದರೂ ಕಮಲಾದೇವಿಯರ ಸಾಮಾಜಿಕ ಆತ್ಮಸಾಕ್ಷಿ ಆಧುನಿಕ ವಿಚಾರಗಳಿಗೆ ಕಿವುಡಾಗಿರಲಿಲ್ಲ. ಅವರ ಪಾಲಿಗೆ, ಬೇರೆ ಕೆಲ ಮಹಿಳಾಮುಂದಾಳುಗಳ ಹಾಗೆ, ಮಹಿಳಾ ಚಳವಳಿ ಮೇಲ್ವರ್ಗದ ಹೆಂಗಸರ ಸ್ವಾತಂತ್ರ್ಯ ಹಕ್ಕುಗಳ ಚಳವಳಿಯಾಗಿರಲಿಲ್ಲ. ಪ್ರತಿಯೊಂದು ತಳ್ಳಲ್ಪಟ್ಟ ಜನ ವರ್ಗದ ಹಕ್ಕು ಹಿತಗಳೊಡನೆ ತಾದಾತ್ಮ್ಯ ಹೊಂದಿದರೆನೇ ಮಹಿಳೆಯರ ಹಕ್ಕಿನ ಹೋರಾಟ ಸಾರ್ಥಕವಾಗುತ್ತದೆ. ಪ್ರತಿಯೊಬ್ಬ ವ್ಯಕ್ತಿಗೂ ಉತ್ತಮ ಜೀವನ, ತನ್ನ ಶ್ರಮದ ಫಲವನ್ನು ತಾನೇ ಅನುಭವಿಸುವ ಹಕ್ಕು, ಪ್ರತಿಯೊಂದು ಮಗುವಿಗೂ ಪರಿಪೂರ್ಣವಾಗಿ ವಿಕಾಸ ಹೊಂದಲವಕಾಶ— ಇವುಗಳಿಗಾಗಿ ಮಹಿಳಾ ಪರಿಷತ್ತು ಪ್ರಗತಿಪರ ಶಕ್ತಿಗಳೊಡನೆ ಸೇರಿಕೊಂಡು ಹೋರಾಡಬೇಕು— ಎಂದವರು ಮಹಿಳಾ ಚಳವಳಿಗೆ ಆದರ್ಶ ಹಾಕಿಕೊಟ್ಟಿದ್ದರು. ಸಮಾಜವಾದಿ ಆರ್ಥಿಕ ಚಿಂತನೆಗೆ ಮಾತೃಸ್ಥಾನವಾದ ಲಂಡನ್ ಸ್ಕೂಲ್ ಆಫ್ ಇಕನಾಮಿಕ್ಸ್‌ನಲ್ಲಿ ಅವರು ಅಭ್ಯಸಿಸಿದ್ದರು. ಆದ್ದರಿಂದ ೧೯೩೪ ರಲ್ಲಿ ಕಾಂಗ್ರೆಸ್ ಸಮಾಜವಾದಿ ಪಕ್ಷ ಸ್ಥಾಪಿತವಾದಾಗ ಕಮಲಾ ದೇವಿಯವರು ಅದರ ಸ್ಥಾಪಕ ಸದಸ್ಯರಲ್ಲೊಬ್ಬರಾದುದು ಸಹಜವೇ. ದೇಶದಲ್ಲೆಲ್ಲ ಕಾಂಗ್ರೆಸ್ ಸಮಾಜವಾದಿ ಶಕ್ತಿಗಳನ್ನು ಸಂಘಟಿಸುತ್ತ ಅವರು ಸಂಚರಿಸಿದರು. ಕರ್ನಾಟಕದಲ್ಲಿ ಸಮಾಜವಾದಿ ಮತ್ತು ಕೂಲಿಕಾರಚಳವಳಿಯ ಕೇಂದ್ರವಾಗಿದ್ದರು. ಆದರೆ ವ್ಯಾವಹಾರಿಕ ಕೂಲಿಕಾರ ಸಂಘಟನೆಯ ಗಿಂಡಿಯೊಳಗಿನ ಗಿಂಡಿಗಳ ಕುಟಿಲ ಉಪಾಯಗಳನ್ನು ಅರಗಿಸಿಕೊಳ್ಳಲಾರದೆ ಅವರು ಕೂಲಿಕಾರ ಸಂಘಟನೆಯಲ್ಲಿ ಅಷ್ಟು ಯಶಸ್ವಿಯಾಗಲಿಲ್ಲ. ಆದರೂ ಮಂಗಳೂರಲ್ಲಿ ಕೂಲಿಕಾರ ಸಂಘಟನೆಗೆ ತಳಪಾಯ ಹಾಕಿದವರು ಅವರೇ ಎನ್ನಬಹುದು.

ಕಮಲಾದೇವಿಯವರ ಆಸಕ್ತಿ ಕೇವಲ ಸಾಮಾಜಿಕ ರಾಜಕೀಯ ವಿಷಯಗಳಿಗಷ್ಟೇ ಸೀಮಿತವಾಗಿರದಷ್ಟು ವಿಶಾಲವಾದದ್ದು. ಅವರು ಇಂದು ಸಂಗೀತನಾಟಕ ಅಕಾದಮಿಯ ಉಪಾಧ್ಯಕ್ಷರಾಗಿರುವುದು ಸರ್ವವಿದಿತವಾಗಿದೆ. ಆದರೆ ಅವರು ಬಲು ಮಧುರವಾಗಿ ಹಾಡಬಲ್ಲರೆಂದೂ ಅದಕ್ಕೂ ಹೆಚ್ಚಾಗಿ ಅವರು ಕಾಂಗ್ರೆಸ್ ರಾಜಕಾರಣದಲ್ಲಿ ಸಕ್ರಿಯ ಆಸಕ್ತಿ ತಳೆಯುವ ಮೊದಲು ಸಮಾಜದ ವಕ್ರದೃಷ್ಟಿಯನ್ನು ಧಿಕ್ಕರಿಸಿ ಸ್ವತಃ ನಾಟಕಗಳಲ್ಲಿ ಪಾತ್ರವಹಿಸುತ್ತಿದ್ದರೆಂದೂ ಹಲವರಿಗೆ ಗೊತ್ತಿಲ್ಲ. ಅವರು "ವಸಂತಸೇನಾ" ಮೂಕ ಚಿತ್ರದಲ್ಲಿ ಒಂದು ಚಿಕ್ಕ ಪಾತ್ರವನ್ನು ಕೂಡ ತೆಗೆದುಕೊಂಡಿದ್ದರು. ಕುಲೀನ ನಾರಿಯರು ನೃತ್ಯನಾಟಕಾದಿಗಳಲ್ಲಿ ಭಾಗ ವಹಿಸುವುದು ಕೀಳೆಂಬ ಭಾವನೆಯನ್ನು ನಿವಾರಿಸುವಲ್ಲಿ ಕಮಲಾದೇವಿಯವರಿಂದ ತುಂಬ ಸಹಾಯವಾಯಿತು. ೩೫ ವರ್ಷಗಳ ಹಿಂದೆಯೆ ಅವರು ಭಾರತೀಯ ನಾಟಕ ಕಲೆಗೆ ಬಂದಿರುವ ಗಂಡಾಂತರವನ್ನರಿತು ಅದನ್ನು ಜೀವಂತವಾಗಿಡಲು ಜನರೂ ಸರಕಾರಗಳೂ ಪ್ರಯತ್ನಿಸಬೇಕೆಂದು ಹೇಳಿದುದು ಈಗ ತಾನೆ ಸಫಲವಾಗುತ್ತಿದೆ.

ಬ್ರಿಟಿಶ ರಾಜ್ಯ ಭಾರತದಲ್ಲಿರುವ ತನಕವೂ ಕಮಲಾದೇವಿ ಅದರೊಡನೆ ಹೋರಾಡಿದರು. ತಮ್ಮ ಹಲವು ವಿದೇಶ ಯಾತ್ರೆಗಳಲ್ಲಿಯೂ ಭಾರತದ ಪರವಾಗಿ ಹೋರಾಟವನ್ನು ಮುಂದೆ ಸಾಗಿಸಿದರು. ೧೯೩೯ ರಲ್ಲಿ ಮಹಾಯುದ್ಧ ಪ್ರಾರಂಭವಾದಾಗ ಅವರು ತಮ್ಮ ವಿಶ್ವಪರ್ಯಟನದಲ್ಲಿ ಅಮೇರಿಕದಲ್ಲಿದ್ದರು. ೧೯೪೦ ರಲ್ಲಿ ಭಾರತವು ಯುದ್ಧದಲ್ಲಿ ಸಹಕರಿಸಬೇಕಾದರೆ ಬ್ರಿಟಿಶ್

ಸರಕಾರ ಭಾರತಕ್ಕೆ ಸ್ವಾತಂತ್ರ್ಯವೀಯಬೇಕೆಂದು ಕಾಂಗ್ರೆಸ್ಸು ವಾದಿಸಿದ ನಂತರ ಬ್ರಿಟಿಶ್ ಮಂತ್ರಿಮಂಡಲದ ಸದಸ್ಯರೊಬ್ಬರು ಅಮೇರಿಕದಲ್ಲೊಂದು ಸಭೆಯಲ್ಲಿ ಭಾರತವನ್ನು ನಿಂದಿಸಿ ಭಾಷಣ ಮಾಡಿದರು. ಆ ಸಭೆಯಲ್ಲಿ ಕಮಲಾದೇವಿಯವರಿದ್ದರೆಂದು ಅವರಿಗೆ ಗೊತ್ತಿದ್ದಿಲ್ಲವೇನೋ. ಭಾಷಣ ಮುಗಿದೊಡನೆ ಕಮಲಾದೇವಿಯವರು ವೇದಿಕೆಯನ್ನೇರಿ ಆ ಮಂತ್ರಿ ಮಹಾಶಯನಿಗೆ ಎಷ್ಟು ಸೂಕ್ತ ಉತ್ತರವಿತ್ತರೆಂದರೆ ಸಭೆಯಲ್ಲಿ ಗದ್ದಲವೆದ್ದು ಆತ ಹಿಂಬಾಗಿಲಿನಿಂದ ಪಲಾಯನ ಮಾಡಬೇಕಾಯಿತು!

ಆದರೆ ಬ್ರಿಟಿಶರು ನಮ್ಮ ಎದುರಾಳಿಗಳಾಗಿದ್ದರೆಂಬುದರಿಂದ ಅವರ ಶತ್ರುಗಳೊಡನೆ-ಅವರೆಂಥವರಿದ್ದರೂ—ಸ್ನೇಹ ಬೆಳೆಸುವ ಸಂದರ್ಭಸಾಧಕತೆಯನ್ನು ಕಮಲಾದೇವಿಯವರು ಎಂದೂ ಅನುಸರಿಸಲಿಲ್ಲ. ಚೀನದ ಮೇಲೆ ಜಪಾನ್ ಆಕ್ರಮಣ ಮಾಡಿದಾಗ ಅದನ್ನು ಅವರು ನಿಸ್ಸಂದಿಗ್ಧವಾಗಿ ಖಂಡಿಸಿದರು. ಇದನ್ನವರು ಭಾರತದಲ್ಲಲ್ಲ, ಜಪಾನದಲ್ಲಿದ್ದಾಗಲೇ ಮಾಡಿದರೆಂಬುದರಿಂದ ಅವರ ದಿಟ್ಟತನವೆಷ್ಟೆಂದೂಹಿಸಬಹುದು. ಕೆಲವೇ ಕಾಲದಲ್ಲಿ ತಮ್ಮ ಘೋರ ಶತ್ರುವಾಗಲಿದ್ದ ಜಪಾನವನ್ನು ಖಂಡಿಸಿದ ಈ ಮಹಿಳೆಯನ್ನು ಬ್ರಿಟಿಶರು ಆಮೇಲೆ ಹಾಂಕಾಂಗಿನಲ್ಲಿ ಬಂಧಿಸಿದರು! ಚಿಯಾಂಗ್ ಕೈಶೇಕರ ಒತ್ತಾಯದಿಂದ ಆ ಮೇಲೆ ಅವರನ್ನು ಬಿಡುಗಡೆ ಮಾಡಲಾಯಿತು. ಯುದ್ಧೋಧ್ವಸ್ತ ಚೀನದಲ್ಲೆಲ್ಲ ಸಂಚರಿಸಿ ಕಮಲಾದೇವಿಯವರು ಚೀನದ ಬಗ್ಗೆ ಎರಡು ಚಿಕ್ಕ ಪುಸ್ತಕಗಳನ್ನು ಬರೆದರು.

ಕಮಲಾದೇವಿಯವರು ಭಾರತದ ಮೂಲೆ ಮೂಲೆಯನ್ನೂ ಬಲ್ಲರು. ಹಲವು ವಿದೇಶ ಪರ್ಯಟನಗಳಿಂದ ಅವರು ತಮ್ಮ ಮನೋಭೂಮಿಕೆಯನ್ನು ವಿಸ್ತರಿಸಿಕೊಂಡಿದ್ದಾರೆ. ಒಮ್ಮೆ ಇಡೀ ಜಗತ್ತನ್ನು ಸುತ್ತಿ ಬಂದಿದ್ದಾರೆ. ಐದು ಸಲ ಜಾಗತಿಕ ಮಹಿಳಾ ಪರಿಷತ್ತುಗಳಲ್ಲಿ ಭಾರತದ ಪ್ರತಿನಿಧಿಯಾಗಿದ್ದರು. ೧೯೪೪ ರ ಅಖಿಲ ಭಾರತ ಮಹಿಳಾ ಪರಿಷತ್ತು ಅವರನ್ನು ತನ್ನ ಮುಂಬಯಿ ಅಧಿವೇಶನದ ಅಧ್ಯಕ್ಷರಾಗಿ ಆರಿಸಿ ಕಮಲಾದೇವಿಯವರ ಸೇವೆಗೆ ಮನ್ನಣೆಯಿತ್ತಿತು.

ಕಮಲಾದೇವಿಯವರು ಚೆನ್ನಾಗಿ ಬರೆಯಬಲ್ಲರು. ಚೀನ ಮತ್ತು ಅಮೇರಿಕದ ಬಗ್ಗೆ ಅವರು ಪುಸ್ತಕಗಳನ್ನು ಬರೆದಿದ್ದಾರೆ. ಇಂಗ್ಲೀಷಿನಲ್ಲಿ ಅವರು ಭಾಷಣವೀಯಲಾರಂಭಿಸಿದರೆ ಶ್ರೋತೃಗಳು ಮುಗ್ಧರಾಗಿಹೋಗುತ್ತಾರೆ. ಕನ್ನಡದಲ್ಲಿ ಮೊದಲು ಪರಿಶ್ರಮ ಕಡಿಮೆಯಾಗಿದ್ದರೂ ಅನಂತರ ಸಾಕಷ್ಟು ಚೆನ್ನಾಗಿ ಮಾತಾಡಲು ಕಲಿತರು. ಈಚೆಗೆ ಹಿಂದಿಯನ್ನೂ ಅಭ್ಯಸಿಸಿದ್ದಾರೆ. ಅವರ ಸ್ವಭಾವ ಮೃದು. ತಮಗೆ ಯಾರು ಮಾಡಿದ ಎಂಥ ಅಪರಾಧವಾದರೂ ಅದು ಅವರ ಮನಸ್ಸಿನಲ್ಲಿ ಶಾಶ್ವತವಾದ ಕಲೆಯನ್ನು ಮೂಡಿಸುವುದಿಲ್ಲ. ಅತಿ ವೇದನಾಕರವಾದ ಅನ್ಯಾಯವನ್ನು ಕಮಲಾದೇವಿಯವರಿಗೆ ಮಾಡಿದ ಸ್ತ್ರೀಯೊಬ್ಬಳು ನಿರ್ಗತಿಕಳಾಗಿ ಅವರ ಕಡೆ ಬಂದಾಗ ಅವರು ಮರುಮಾತಿಲ್ಲದೆ ಅವಳಿಗೆ ಆಶ್ರಯವಿತ್ತ ಉದಾಹರಣೆಯೊಂದನ್ನು ಅವರ ಪರಿಚಿತರು ಕೊಡುತ್ತಾರೆ.

ಸ್ವಾತಂತ್ರ್ಯ ಬಂದ ನಂತರ ಅವರು ಮೆಲ್ಲ ಮೆಲ್ಲಗೆ ರಾಜಕಾರಣದಿಂದ ಬಿಡಿಸಿಕೊಂಡು ಈಗ ಪೂರ್ತಿ ನಿವೃತ್ತಿ ಹೊಂದಿದ್ದಾರೆ. ಸಮಾಜವಾದಿಗಳೊಡನೆ ಅವರಿಗೆ ಭಿನ್ನಾಭಿಪ್ರಾಯವುಂಟಾಯಿತು. ಬದಲಾದ ಪರಿಸ್ಥಿತಿಯಲ್ಲಿ ಅವರಿಗೆ ಸಾರ್ವಜನಿಕ ಜೀವನದ ಪ್ರಖರ ಪ್ರಕಾಶದಲ್ಲಿ ಮೆರೆಯುವುದಕ್ಕಿಂತ ಹೆಚ್ಚು ಶಾಂತವಾದ ಕಾರ್ಯಗಳನ್ನು ಮಾಡುವುದು ಹಿತವೆನಿಸಿತು. ಇಂದು ಅವರು ಅಖಿಲಭಾರತ ಕೈಗಾರಿಕೆ ಮಂಡಲದ ಅಧ್ಯಕ್ಷರಾಗಿ ನಾಡಿನ ಅಂತರ್ಹಿತ ಜೀವನಕಲಾ ಸ್ಫೂರ್ತಿಗೆ ಹೊಸ ಅಭಿವ್ಯಕ್ತಿಸಂದರ್ಭಗಳನ್ನೊದಗಿಸಲು ಯತ್ನಿಸುತ್ತಿದ್ದಾರೆ. ಅವರ ಏಕಮಾತ್ರ ಪುತ್ರ ರಾಮಕೃಷ್ಣರು ಅಮೇರಿಕದಲ್ಲಿ ಶಿಕ್ಷಣ ಪಡೆದು ಈಗ ಮುಂಬಯಿಯಲ್ಲಿ ಸ್ವತಂತ್ರವಾಗಿ ಫಿಲ್ಮ್, ವಯರ್ಲೆಸ್ ಸ್ಟೂಡಿಯೋವೊಂ-

ದನ್ನು ನಡೆಸುತ್ತಿದ್ದಾರೆ. ಅವರು ಅಮೇರಿಕನ್ ತರುಣಿಯನ್ನು ಮದುವೆಯಾಗಿದ್ದಾರೆ.

ಕಮಲಾದೇವಿಯವರ ದೇಶಸೇವೆಗೆ ಮನ್ನಣೆಯಾಗಿ ರಾಷ್ಟ್ರಪತಿಗಳು ೧೯೫೫ ರಲ್ಲಿ ಅವರಿಗೆ "ಪದ್ಮಭೂಷಣ" ಪ್ರಶಸ್ತಿಯಿತ್ತರು. ಅರುವತ್ತನ್ನು ಸಮೀಪಿಸುತ್ತಿರುವ ಕಮಲಾದೇವಿಯವರು ಇಂದು ನವದಿಲ್ಲಿಯ ಗೌರವಿತ ಹಿರಿಯ ಮಹಿಳೆಯಾಗಿದ್ದಾರೆ. ಮೊಮ್ಮಕ್ಕಳೊಡನೆ ಆಡುವುದರಲ್ಲಿ ಅವರಿಗೆ ಸುಖವೆನಿಸುತ್ತಿದೆ. ದಿಲ್ಲಿಯಲ್ಲಿದ್ದರೂ ಅವರಿಗೆ ಕನ್ನಡನಾಡಿನ ನದೀ ಪರ್ವತ ಹಸುರು ಹೊಲಗಳಿಂದ ಕೂಡಿದ ಕರಾವಳಿಯ ಮತ್ತು ಅಲ್ಲಿನ ಸ್ವಾತಂತ್ರ್ಯಪ್ರಿಯ ಜನದ ನೆನಪಾಗುತ್ತಿರುತ್ತದೆ. "ಪಶ್ಚಿಮ ಘಟ್ಟದ ಕೆಳಗೆ ಪ್ರತ್ಯೇಕವಾಗಿರುವ ಮಂಗಳೂರು ಪ್ರವಾಸಿಗಳ ಲಕ್ಷ್ಯಕ್ಕೆ ಬರುವುದು ಅಪರೂಪ. ಅದು ಲಜ್ಜಾಶೀಲ ಕುಮಾರಿಯಂತೆ ತನ್ನ ಹಿನ್ನೆಲೆಯೊಡನೆ ಬೆರೆತು ತನ್ನ ಪಾಡಿಗಿದೆ. ಆದರೆ ಒಮ್ಮೆ ನೀವು ಅದನ್ನು ನೋಡಿದರೆ ಶಾಶ್ವತವಾಗಿ ಮುಗ್ಧರಾಗುವಿರಿ," ಎಂದು ಕಮಲಾದೇವಿಯವರು ಹೇಳಿದ ಮಾತು ಅವರ ಹೃದಯದಿಂದ ಉಗಮಿಸಿದ್ದು. *

## ಕೋಮಲ ಗಾಂಧಾರ

ಸುಪ್ರಸಿದ್ಧ ಸಂಗೀತ ವಿದ್ವಾಂಸ ಪಂಡಿತ ಓಂಕಾರನಾಥ ಠಾಕೂರರ ಜೀವನದಲ್ಲಿ ನಡೆದ ಅದ್ಭುತ ಘಟನೆಯಿದು: ಲಾಹೋರಿನ ಮೃಗಾಲಯದಲ್ಲಿ ಒಂದು ಅತಿ ಕ್ರೂರ ಹುಲಿಯನ್ನು ಒಮ್ಮೆ ತಂದಿಟ್ಟಿದ್ದರು. ಪಂಡಿತಜಿಯವರು ತಮ್ಮ ಮಿತ್ರರೊಬ್ಬರಿಗೆ ಹೇಳಿದರು, "ನಡೆಯಿರಿ. ಒಂದು ಪ್ರಯೋಗ ಮಾಡೋಣ. ಮೃಗಾಲಯಕ್ಕೆ ನಡೆಯಿರಿ. ನಿಮ್ಮ 'ಬೇಲಾ' (ಒಂದು ಬಗೆಯ ವಾದ್ಯ) ವನ್ನು ತೆಗೆದುಕೊಳ್ಳಿ." "ಏನು ಹುಚ್ಚು ಹಿಡಿದಿದೆಯೆ?" ಎಂದು ಅವರ ಆ ಮಿತ್ರ ಕೇಳಲು "ಹೌದು. ಪ್ರಯೋಗ ಮಾಡುವವರೆಲ್ಲ ಹುಚ್ಚರೇ ಇರುತ್ತಾರೆ" ಎಂದು ಪಂಡಿತಜಿ ಉತ್ತರವಿತ್ತರು.

ಅವರಿಬ್ಬರೂ ಮೃಗಾಲಯಕ್ಕೆ ಹೋದರು. ಅಲ್ಲಿ ಬಾಗಿಲು ಕಾಯುವವ ಅವರನ್ನು ತಡೆದ. ಹುಲಿಯ ಭೀಕರ ಗರ್ಜನೆಗೆ ಅಂಜಿದ ಪ್ರೇಕ್ಷಕರಲ್ಲಿ ಕೆಲವರು ಮೂರ್ಛೆ ಹೋಗಿಬಿಟ್ಟಿದ್ದರು. ಪಂಡಿತಜಿ ಮತ್ತು ಅವರ ಮಿತ್ರರು ಬಾಗಿಲು ಕಾಯುವವನ ಕೈಬೆಚ್ಚಗೆ ಮಾಡಿ ಒಳಗೆ ಹೋದರು. ಪಂಡಿತಜಿಯವರ ಆದೇಶದಂತೆ ಅವರ ಮಿತ್ರ 'ಬೇಲಾ'ದ ಮೇಲೆ ಕಾಫೀರಾಗದ ಸ್ವರವನ್ನು ನುಡಿಸತೊಡಗಿದರು. ಇಬ್ಬರೂ ಸಾವಕಾಶವಾಗಿ ಹುಲಿಯ ಪಂಜರದತ್ತ ನಡೆದರು. ಅವರು ಪಂಜರದ ಸಮೀಪಕ್ಕೆ ಹೋಗಿ ನೋಡುತ್ತಾರೆ, ಹುಲಿ ಗರ್ಜಿಸುವುದಂತಿರಲಿ, ಗುರುಗುಡುವುದನ್ನು ಕೂಡ ನಿಲ್ಲಿಸಿತ್ತು. ಮಾತ್ರವಲ್ಲ, ಪಂಜರದ ಸರಳುಗಳ ಹೊರಗೆ ತನ್ನ ಮುಂಗಾಲನ್ನು ಈ ಜನರೊಡನೆ ಆಟವಾಡಲು ಬಯಸುತ್ತಿದೆಯೇನೊ ಎಂಬಂತೆ ಚಾಚಿತ್ತು. ಹುಲಿಯ ಕಣ್ಣುಗಳಲ್ಲಿ ನಾಯಿಯ ಕಣ್ಣುಗಳಲ್ಲಿಯಂತೆ ಪ್ರೀತಿ ತುಳುಕುತ್ತಿತ್ತು. ಪಂಡಿತಜಿ ಮಿತ್ರನಿಗೆ ಹೇಳಿದರು: "ಕೋಮಲ ಗಾಂಧಾರದಲ್ಲಿ ಹೃದಯವನ್ನು ಕೋಮಲವಾಗಿಸುವ ಸಾಮರ್ಥ್ಯ ಇದೆಯೆ ಇಲ್ಲವೆ ಎಂದು ನನಗೆ ನೋಡಬೇಕಾಗಿತ್ತು. ಬೇಲಾದ ಬದಲು ಸಾರಂಗಿಯಿದ್ದಿದ್ದರೆ ಹುಲಿಯ ಮೇಲೆ ಇನ್ನಿಷ್ಟು ಪ್ರಭಾವ ಬೀಳುತ್ತಿತ್ತು."

ಸಾರ್ವಜನಿಕ ವಿಚಾರಗಳಿಗೆ ಸಂಬಂಧಿಸಿದ ಜನರು ದೈನಂದಿನ ಘಟನೆಗಳಲ್ಲೇ ಮಗ್ನರಾಗಿ ಬಿಡುವ ಸಂಭವವಿದೆ. ನಾವು ಇಂಥದೊಂದು ವಿಧೇಯಕ, ಇಂಥವನೊಬ್ಬ ಮಂತ್ರಿ, ಅಥವಾ ಮುಂಬರುವ ಚುನಾವಣೆ ಇವುಗಳನ್ನು ಚರ್ಚಿಸುತ್ತ ಮುಂದಿನ ಹಲವು ದಶಮಾನಗಳ ವರೆಗೆ ದೇಶದ ಹಣೆಬರಹವನ್ನೇ ನಿರ್ಣಯಿಸಬಹುದಾದಂಥ ದೀರ್ಘಾವಧಿಯ ಬಲವುಗಳನ್ನು ಅಲಕ್ಷಿಸಿ ಬಿಡುತ್ತೇವೆ. ಈ ದೃಷ್ಟಿಯಿಂದ ನಾನು ಈಚೆಗೆ ಓದಿದ ಪುಟ್ಟ ಪುಸ್ತಕವೊಂದು ಭವಿಷ್ಯತ್ತಿನ ಬಗ್ಗೆ ವಿಚಾರಿಸಲು ನನ್ನನ್ನು ಪ್ರಚೋದಿಸಿತು.

ನಿರ್ಣಯಿಸಲ್ಪಡಲಿದೆ; ಈ ಶಕ್ತಿಗಳೆರಡೂ ಪಾರ್ಲಿಮೆಂಟರಿ ಕ್ರಮದಲ್ಲಿ ಆಟವಾಡಲಾರವು. ಒಂದು ಕಡೆ ಕಮ್ಯುನಿಜಂ ಮತ್ತು ಇನ್ನೊಂದು ಕಡೆ ಆರ್. ಎಸ್. ಎಸ್. ಮತ್ತು ಜನಸಂಘದಿಂದ ಸಂಘಟಿಸಲ್ಪಟ್ಟಿರುವ ಹಿಂದೂ ಪರಾಕ್ರಮವಾದ—ಇವೇ ಆ ದ್ವಂದ್ವಶಕ್ತಿಗಳು. ಈ ಸಿದ್ಧಾಂತ ನಮ್ಮ ರಾಷ್ಟ್ರೀಯ ಸ್ವಾಭಿಮಾನಕ್ಕೆ ನೋವುಂಟುಮಾಡಬಹುದಾದರೂ ಅದರಲ್ಲೇನಾದರೂ ಸಾರವಿದೆಯೇ ಎಂದು ಹಿಂಜಿ ನೋಡುವುದು ಪ್ರತಿಯೊಬ್ಬ ದೇಶಹಿತೈಷಿಯ ಕರ್ತವ್ಯವಾಗಿದೆ. ಇದನ್ನು ಅಲಕ್ಷಿಸುವುದು ಒಳಿತಲ್ಲ.

---

**ಭಾರತದಲ್ಲಿ ಪ್ರಜಾಸತ್ತೆಗೆ ಎರಡು ದಿಕ್ಕುಗಳಿಂದ ಅಪಾಯ ಬರಬಹುದು ಎಂಬ ವಿದೇಶಿ ಲೇಖಕರೊಬ್ಬರ ತರ್ಕವನ್ನು ಭಾರತ ಸರಕಾರದ ಹಿಂದಿನ ಅನುಭವಶಾಲಿ ಅಧಿಕಾರಿಯೊಬ್ಬರು ವಿವೇಚಿಸಿದ್ದಾರೆ**

# ಬರಲಿರುವ ವಿಪತ್ತುಗಳು

ವಿ. ಪಿ. ಮೆನನ್

---

ಅದನ್ನು ಬರೆದವರು ಫ್ರಾನ್ಸಿನಲ್ಲಿ ಹುಟ್ಟಿ ಅಮೇರಿಕದಲ್ಲಿ ನೆಲಸಿದ ಅಮೋರಿ ಡಿ ರೈನ್‌ಕೋರ್ಟ್. ಪುಸ್ತಕದ ಹೆಸರು "ಭಾರತದ ಆತ್ಮ."

ಅದರಲ್ಲಿ ಭಾರತದ ಇತಿಹಾಸವನ್ನೇ ವ್ಯಾಪಕ ಮತ್ತು ಆಳವಾದ ದೃಷ್ಟಿಯಿಂದ ಅಭ್ಯಸಿಸಲಾಗಿದೆ. ಆದರೆ ನನಗೆ ತುಂಬ ರುಚಿಸಿದ್ದು ಭವಿಷ್ಯತ್ತನ್ನು ಕುರಿತ ಅದರ ಕೊನೆಯ ಭಾಗ. ಲೇಖಕರ ಅಭಿಮತದಲ್ಲಿ ನಮ್ಮ ಪಾರ್ಲಿಮೆಂಟರಿ ಪ್ರಜಾಸತ್ತೆ ಕೇವಲ ತೋರಿಕೆಯದು. ಅದು ಬಾಳಲಾರದು. ನಮ್ಮ ಭವಿಷ್ಯತ್ತು ಎರಡು ಪರಸ್ಪರ ವಿರೋಧಿ ಶಕ್ತಿಗಳ ಹೋರಾಟದಿಂದ

ಚೀನದ ಹಾಗೆ ಭಾರತವು ಕಮ್ಯುನಿಸ್ಟರ ದೃಷ್ಟಿಯಿಂದ ಹುಲುಸಾಗಿ ಪರಿಣಮಿಸಲಿಲ್ಲ. ನಮ್ಮ ಪರಂಪರೆಯೇ ಕಮ್ಯುನಿಜಂಗೆ ಹಿತಾವಹವಾಗಿಲ್ಲ. ಕಮ್ಯುನಿಜಂಗೆ ಇಲ್ಲಿ ಏನಾದರೂ ಬಲ ಬಂದಿದ್ದರೆ ಅದು ನಮ್ಮ ದೌರ್ಬಲ್ಯದಿಂದ. ಆದರೆ ಈ ದೌರ್ಬಲ್ಯ ನಮ್ಮಲ್ಲಷ್ಟೇ ಇರುವಂಥದಲ್ಲ, ಇಡೀ ಕಮ್ಯುನಿಸ್ಟೇತರ ಜಗತ್ತಿಗೇ ಅಂಟಿಕೊಂಡದ್ದು.

ಇದೊಂದು ವಿರೋಧಾಭಾಸವೇ ನಿಜ: ಇಂದಿನ ಜಗತ್ತಿನ ಬಹುಜನರೊಪ್ಪಿದ ಧ್ಯೇಯವಾದ ಪ್ರಜಾಸತ್ತೆಯು ಕಮ್ಯುನಿಜಂಗಿಂತ ಹೆಚ್ಚು ಆಕರ್ಷಕವೂ ಆಗಿದೆ, ಅದಕ್ಕಿಂತ ಹೆಚ್ಚಿನ

* ಹಿಂದುಸ್ತಾನ ಟೈಮ್ಸ್" ಸ್ವಾತಂತ್ರ್ಯ ಸಂಚಿಕೆಯಿಂದ

ಸಾಧನೆಗಳನ್ನೂ ಮಾಡಿದೆ. ಅದು ಮಾನವ ಸ್ವಭಾವಕ್ಕೆ ಹೆಚ್ಚು ಹೊಂದಿಕೊಳ್ಳುತ್ತದೆ ಮತ್ತು ಜನಸಾಮಾನ್ಯಕ್ಕೆ ಅದು ಹೆಚ್ಚು ಗ್ರಾಹ್ಯವೂ ಆಗಿದೆ. ಕಮ್ಯುನಿಜಂ ಅಂಕಿತದಲ್ಲಿ ಬಾಳಿ ಅನುಭವವುಳ್ಳ ಜನರಿಗೆ ಅದು ಎಷ್ಟೂ ಮೆಚ್ಚಿಕೆಯಾಗಿಲ್ಲ. ಆದರೂ ಪ್ರಜಾಸತ್ತೆ ಎಲ್ಲೆಡೆಯೂ ಹಿಂದೇಟು ತಿನ್ನುತ್ತಿದೆ. ಪ್ರಜಾಸತ್ತಾತ್ಮಕ ಪಾಶ್ಚಾತ್ಯ ದೇಶಗಳ ಬೌದ್ಧಿಕ ಕೇಂದ್ರಗಳಲ್ಲೇ ಈ ಮಾತು ಎಲ್ಲಕ್ಕೂ ಹೆಚ್ಚು ವ್ಯಕ್ತವಾಗುತ್ತಿದೆ. ಭಾರತದ ಕಮ್ಯುನಿಸ್ಟರಲ್ಲಿ ಅತಿ ಶ್ರೇಷ್ಠರಾದವರ ತರಬೇತಿ ಮಾಸ್ಕೋದಲ್ಲಲ್ಲ, ಆಕ್ಸ್‌ಫರ್ಡಿನಲ್ಲಿ ಆಗಿದೆ. ನಮ್ಮ ದೇಶದಲ್ಲಿಯೂ ನಾವು ಸನಾತನಿಗಳೇ ಆಗಿರಲಿ, ಆಧುನಿಕ ಪಾಶ್ಚಾತ್ಯ ವಿಚಾರದವರೇ ಆಗಿರಲಿ, ನಮ್ಮ ಆತ್ಮಸಮರ್ಥನೆಯಲ್ಲಿ ಏನೂ ಹುರುಪು ತೋರಿಸದೇ, ಕಮ್ಯುನಿಸ್ಟರು ಮಧ್ಯಯುಗೀನ ದಬ್ಬಾಳಿಕೆಗಿಂತಲೂ ಘೋರವಾದ ಸತ್ತೆಯನ್ನು ಹೇರಲು ಸಂಘಟಿಸುತ್ತಿರುವಾಗ ನಿರ್ವೀರ್ಯರಾಗಿ ನೋಡುತ್ತ ನಿಂತಿದ್ದೇವೆ.

ಕೇಂದ್ರ ಸರಕಾರದ ಮಂತ್ರಿಗಳೇ ಈ ವಿಷಯದಲ್ಲಿ ನಿಶ್ಚಿಂತರಾಗಿರುವುದನ್ನು ನೋಡಿ ನನಗೆ ವ್ಯಥೆಯಾಗುತ್ತಿದೆ. ನಮ್ಮ ಪ್ರಧಾನಮಂತ್ರಿಗಳನ್ನೇ ತೆಗೆದುಕೊಳ್ಳಿ. ಅವರು ಮನಸಾ ಪ್ರಜಾತಂತ್ರವಾದಿಗಳು. ಆದರೆ ಆಧುನಿಕ ಪ್ರಜಾತಂತ್ರವಾದಿಗಳಿಗೆಲ್ಲ ಬಡಿದಿರುವ ಆತ್ಮವಿಶ್ವಾಸಾಭಾವದ ಗರ ಅವರಿಗೂ ಬಡಿದಿದೆ. ಅದರಿಂದಲೇ ಕಮ್ಯುನಿಸ್ಟರಿಗೆ ದೇಶದಲ್ಲಿ ಒಂದು ಬಗೆಯ ಗೌರವ ಪ್ರಾಪ್ತವಾಗಿದೆ. ನಮ್ಮ ನೆರೆಯಲ್ಲಿ ಪ್ರಚಂಡ ಕಮ್ಯುನಿಸ್ಟ್ ರಾಷ್ಟ್ರಗಳಿರುವುದರಿಂದ, ಅಡವಿಯಲ್ಲಿದ್ದ ಮೇಲೆ ಹುಲಿ-ಕರಡಿಗಳ ಸಂಗಡ ಜಗಳ ತರವಲ್ಲ ಎಂಬ ದೃಷ್ಟಿಯಿಂದ ಪ್ರಧಾನ ಮಂತ್ರಿಗಳು ಯೋಚಿಸುತ್ತಿರಲೂಬಹುದು. ಹೀಗೆ ಅನುಕೂಲ ಪರಿಸ್ಥಿತಿಯನ್ನು ಪಡೆದ ಕಮ್ಯುನಿಸ್ಟರು ವಿದೇಶಗಳಿಂದ ದೊರೆಯುವ ಧಾರಾಳ ಧನಸಹಾಯ ಮತ್ತು ಕಮ್ಯುನಿಸ್ಟ್ ಜಗತ್ತಿನ ಪ್ರಚಂಡ ಶಕ್ತಿಯ ಬೆಂಬಲದಿಂದ ದೇಶಕ್ಕೆ ಅಪಾಯ ತರುವಷ್ಟು ಪ್ರಬಲರಾಗುವ ಭಯವಿದೆ.

ಕಮ್ಯುನಿಸ್ಟರು ಸ್ವಶಕ್ತಿಯಿಂದಲೇ ಅಧಿಕಾರಕ್ಕೆ ಬಂದಾರೆಂದು ನಾನು ನಂಬುವುದಿಲ್ಲ. ಆದರೆ ಇತರ ಉಪಾಯಗಳಿಂದ ಅವರಿಗೆ ಅಧಿಕಾರಕ್ಕೆ ಬರಲು ಸಾಧ್ಯವಿದೆ. ಒಮ್ಮೆ ಅವರು ಅಧಿಕಾರಕ್ಕೆ ಬಂದ ಮೇಲೆ ದಬ್ಬಾಳಿಕೆಯ ತಂತ್ರವನ್ನು ಸಫಲವಾಗಿ ಪ್ರಯೋಗಿಸದೆ ಬಿಡರೆಂಬುದನ್ನು ನಾವು ಮನಗಾಣಬೇಕು. ಇದುವರೆಗೆ ಯಾವ ಕಮ್ಯುನಿಸ್ಟ್ ಸರಕಾರವೂ ಆಂತರಿಕ ವಿರೋಧದಿಂದ ತಲೆಕೆಳಗಾದ ಉದಾಹರಣೆಯಿಲ್ಲ. ಸದ್ಯ ಚೀನದಲ್ಲಿ ರಾಷ್ಟ್ರಾದ್ಯಂತ ಕ್ಷಾಮ ಬಿದ್ದಿದೆ; ಇದಕ್ಕೆ ಬಹುಮಟ್ಟಿಗೆ ಕಮ್ಯುನಿಸ್ಟ್ ಸರಕಾರದ ನೀ-ತಿಯೇ ಕಾರಣ. ಹೀಗಿದ್ದರೂ ಅಲ್ಲಿ ಕಮ್ಯುನಿಸ್ಟರ ಸತ್ತೆ ಭದ್ರವಾಗಿಯೆ ಇದ್ದಂತೆ ಕಾಣುತ್ತದೆ.

ಆಂತರಿಕ ಅಥವಾ ಅಂತಾರಾಷ್ಟ್ರೀಯ ಬಿಕ್ಕಟ್ಟಿನ ಯಾವುದಾದರೂ ಸಂದರ್ಭದಲ್ಲಿ ವಿದೇಶಿ ಕಮ್ಯುನಿಸ್ಟರ ಒತ್ತಾಯ ಅಥವಾ ಬಲಾತ್ಕಾರದ ಫಲವಾಗಿ ಇಲ್ಲಿ ಕಮ್ಯುನಿಸ್ಟರು ಅಧಿಕಾರವನ್ನು ಆಕ್ರಮಿಸಬಹುದು. ನಮ್ಮ ಉತ್ತರ ಗಡಿಗಳ ಮೇಲೆ ಚೀನೀಯರು ಆಕ್ರಮಣ ಮಾಡಲು ಈ ಉದ್ದೇಶದಿಂದಲೇ ಪ್ರೇರಿತರಾಗಿದ್ದರೆಂದು ನನಗೆ ಖಂಡಿತವಿದೆ.

ಇದಕ್ಕೂ ದೊಡ್ಡ ಅಪಾಯವೆಂದರೆ ಏನಾಗಿದೆಯೆಂದು ಜನರಿಗೆ ಅರ್ಥವಾಗುವ ಮೊದಲೇ ಕಮ್ಯುನಿಸ್ಟರು ವೇಷಾಂತರದಲ್ಲಿ ಅಧಿಕಾರಕ್ಕೇರಬಹುದು. ಮೊದಲು ಯಾವುದಾದರೂ ಸಂಮಿಶ್ರ ಸರಕಾರದಲ್ಲಿ ಒಂದು ಪಕ್ಷವಾಗಿ ಕಮ್ಯುನಿಸ್ಟರು ಸೇರಿಕೊಳ್ಳಬಹುದು. ಕಮ್ಯುನಿಸ್ಟ್ ಪಕ್ಷದ ಕೆಲ ಅಜ್ಞಾತ ಸದಸ್ಯರು ಇತರ ಪಕ್ಷಗಳಲ್ಲಿ ಸೇರಿಕೊಂಡು ಅವುಗಳ ಹೆಸರಿನಲ್ಲಿ ಮುಖ್ಯ ಮುಖ್ಯ ಸ್ಥಳಗಳಿಗೆ ನೇಮಕ ಹೊಂದಬಹುದು. ಅದರ ಬೆಂಬಲಿಗರು ನೌಕರಿಗಳಲ್ಲಿ ಮಹತ್ವದ ಸ್ಥಾನಗಳಿಗೇರಿಸಲ್ಪಡಬಹುದು. ಹೀಗೆ ತಮ್ಮ ಹಿಡಿತ ಬಲವಾದನಂತರ ಅವರು ತಮ್ಮ ಮುಖವಾಡವನ್ನು ಕಿತ್ತೊಗೆದು ತಮಗೊಲ್ಲದ

'ಮಿತ್ರ'ರನ್ನು ಓಡಿಸಿ ಪೂರ್ತಿ ಅಧಿಕಾರವನ್ನು ಕಸಿದುಕೊಳ್ಳಬಹುದು.

ಇದೇನು ಹುಚ್ಚು ಕಲ್ಪನೆಯಲ್ಲ. ಝೆಕೋ-ಸ್ಲೊವಾಕಿಯದಲ್ಲಿ ಹೀಗೆಯೆ ಆಯಿತು. ಕ್ಯೂಬಾದಲ್ಲಿಯೂ ಹೀಗಾಗುತ್ತಿದೆಯೆಂದು ಕಾಣುತ್ತದೆ. ಇಲ್ಲಿಯೂ ಆಗದೆಂದು ಹೇಳಲಾಸಲ್ಲ. ವಾಸ್ತವಿಕವಾಗಿ ಕಮ್ಯುನಿಸ್ಟ್ ಪಕ್ಷವು ತನ್ನ ಅಜ್ಞಾತ ಸದಸ್ಯರನ್ನು ಕಾಂಗ್ರೆಸ್ ಪಕ್ಷದೊಳಗೆ ನುಸುಳಿಸುವುದರಲ್ಲಿ ಮಗ್ನವಾಗಿದೆ. ಈ ಒಳಸಂಚನ್ನು ಹೀಗೆಯೆ ಮುಂದೆ ಸಾಗಗೊಟ್ಟರೆ ಒಂದು ದಿನ ಬೆಳಗ್ಗೆ ಎದ್ದಾಗ ಸರ್ವನಾಶವಾಗಿ ಹೋದುದನ್ನು ನಾವು ಕಾಣಬೇಕಾದೀತು. ಏಕೆಂದರೆ ಪ್ರಜಾಸತ್ತೆಯನ್ನೊಪ್ಪದ ನಿರ್ದಯವಾದ ಪಕ್ಷವು ಒಮ್ಮೆ ಅಧಿಕಾರಕ್ಕೆ ಬಂತೆಂದರೆ ಜನರು ನಿಸ್ಸಹಾಯರಾಗಿಬಿಡುತ್ತಾರೆ. ಇಂಥ ಅನಾಹುತವನ್ನು ಪ್ರತಿಬಂಧಿಸುವಂತೆ ಪ್ರತಿಯೊಬ್ಬ ದೇಶಾಭಿಮಾನಿ ಕಾಂಗ್ರೆಸ್ಸಿಗನೂ ಎಚ್ಚರ ವಹಿಸಬೇಕು.

ಕಮ್ಯುನಿಸ್ಟರು ಅಕಸ್ಮಾತ್ತಾಗಿ ಒಳಸಂಚಿನ ಮೂಲಕ ಅಧಿಕಾರಕ್ಕೆ ಬರುವ ಭಯವೇ ನಿಜವಾದ ಭಯ. ತಮ್ಮ ಸ್ವಂತ ಧೋರಣೆಗಳನ್ನು ಜನಪ್ರಿಯವಾಗಿ ಮಾಡಿ ಅವರು ಅಧಿಕಾರಕ್ಕೆ ಬರುವ ಸಂಭವವೇ ಇಲ್ಲ. ಅದಕ್ಕೆ ಸುದೀರ್ಘವಾದ ಹೋರಾಟ ಹೂಡಬೇಕಾದೀತು. ಆಗ ನಮ್ಮ ಸಂಸ್ಕೃತಿಯ ಆಂತರಿಕ ಸತ್ವವು ಸಂಘಟಿತವಾಗಿ ಆತ್ಮರಕ್ಷಣೆ ಮಾಡಿಕೊಳ್ಳದೆ ಬಿಡದು.

ಆದರೆ ಕಮ್ಯುನಿಸ್ಟ್ ಗಂಡಾಂತರದ ವಿರುದ್ಧ ಹೀಗೆ ಸಂಘಟನೆಯಾದರೆ ಅದರ ಫಲವಾದರೂ ಏನಾದೀತು? ಕೈನ್‌ಕೋರ್ಟರ ಅಭಿಪ್ರಾಯದಲ್ಲಿ ಅದು ಕೂಡ ಅನಿಷ್ಟವೇ ಆದೀತು. ಹಿಂದೂ ಪರಂಪರೆಯ ವೈವಿಧ್ಯಪೂರ್ಣ ಮುಖಗಳಲ್ಲಿ ಕಠೋರವಾದ ರಾಜಕೀಯ ವಾಸ್ತವದೃಷ್ಟಿಯೂ ಒಂದು. ಕೌಟಿಲ್ಯನ "ಅರ್ಥಶಾಸ್ತ್ರ"ದಲ್ಲಿ ವ್ಯಕ್ತವಾದ ಈ ದೃಷ್ಟಿಯನ್ನು ಅಂಶತಃ ಮರಾಠಾ ಸಾಮ್ರಾಜ್ಯದ ಕೆಲ ಧೋರಣೆಗಳಲ್ಲಿಯೂ ಆಧುನಿಕ ರಾಷ್ಟ್ರೀಯ ಚಳವಳಿಯ ತೀವ್ರಗಾಮಿಗಳ ವಿಚಾರಧಾರೆಯಲ್ಲಿಯೂ ಈಗ ಆರ್. ಎಸ್. ಎಸ್. ಮತ್ತು ಜನಸಂಘದಲ್ಲಿಯೂ ನಾವು ಕಾಣಬಹುದು. ಕೌಟಿಲ್ಯನ ಪ್ರತಿಭೆ, ಶಿವಾಜಿ ಮಹಾರಾಜರ ಶೌರ್ಯ ಮತ್ತು ಸುಭಾಷ ಬೋಸರ ದಿಟ್ಟತನ ಇವೆಲ್ಲವುಗಳ ಬಗ್ಗೆ ನಮಗೆ ಅಭಿಮಾನವಿದೆ. ಆದರೆ ಸಾಂಘಿಕವಾಗಿ ಹೇಳಬೇಕಾದರೆ ಇಂದು ಅಂಥವರ ಆಳಿಕೆಯಿಂದ ನಾವು ಸಮಾಧಾನ ಹೊಂದಲಾರೆವು. ವಿದೇಶೀಯರ ಅಥವಾ ವಿದೇಶೀ ಕೈಗೊಂಬೆಗಳಾದ ಕಮ್ಯುನಿಸ್ಟರಂಥವರ ಆಳಿಕೆಯ ಬದಲು ಇವರ ಆಳಿಕೆಯನ್ನು ಒಪ್ಪಿಕೊಳ್ಳಲು ನಾವು ಖಂಡಿತ ಸಿದ್ಧರಾಗಬೇಕು. ಆದರೆ ಅದೊಂದು ಅತಿರೇಕದ ತುದಿ. ಇನ್ನೊಂದು ಅತಿರೇಕವನ್ನು ಎದುರಿಸುವ ಸ್ಥಿತಿ ಬಂದರೆ ಮಾತ್ರ ಈ ಅತಿರೇಕ ಉತ್ಕರ್ಷಕ್ಕೆ ಬರಬಲ್ಲದು.

ಬೌದ್ಧ ಧರ್ಮದ ಅಹಿಂಸೆಯಿಂದ ನಾಡಿನಲ್ಲುಂಟಾದ ಒಡಕಿಗೆ ಪ್ರತಿಕ್ರಿಯೆಯಾಗಿ ಕೌಟಿಲ್ಯನ ಕುಟಿಲ ರಾಜಕೀಯ ವಿಚಾರಗಳು ಮೂಡಿರಬೇಕು. ಹತ್ತೊಂಭತ್ತನೇ ಶತಮಾನದ ಕಾಂಗ್ರೆಸ್ಸಿನ ಘಟನಾತ್ಮಕ ಚಳವಳಿಯ ನಿರ್ವೀರ್ಯತೆಗೆ ಪ್ರತಿಕ್ರಿಯೆಯಾಗಿ ಬಾಂಬು ಒಗೆಯುವ ಕ್ರಾಂತಿಕಾರಿ ಚಳವಳಿ ಹುಟ್ಟಿತು. ಗಾಂಧೀಜಿಯ ಅಹಿಂಸಾವಾದ ನಿರ್ವೀರ್ಯವೆಂಬ ಭಾವನೆಯೆ ಸುಭಾಷ ಬೋಸರ ದಿಟ್ಟತನದ ಕಾರ್ಯಗಳಿಗೆ ಪ್ರಚೋದನೆಯಿತ್ತಿತು. ಔರಂಗಜೇಬನ ಅಸಹಿಷ್ಣುತೆಗೆ ಪ್ರತಿಯಾಗಿ ಮರಾಠರ ಅತಿರೇಕವಾದ ಉದಯಿಸಿದಂತೆ ಮುಸ್ಲಿಂ ಲೀಗಿನ ಮತ್ತು ಪಾಕಿಸ್ತಾನದ ಅತಿರೇಕವಾದವೇ ಜನಸಂಘದಂಥ ಪರಾಕ್ರಮವಾದಿ ಹಿಂದೂ ಸಂಘಟನೆಗಳಿಗೆ ಪ್ರೇರಣೆಯಿತ್ತಿತು.

ವಾಸ್ತವಿಕವಾಗಿ ಒಂದಲ್ಲ ಹಲವು ಬಗೆಯ ಅಪಾಯಗಳಿಗೆ ವಿರುದ್ಧವಾಗಿ ಇಂದು ಹಿಂದೂ ಪರಾಕ್ರಮವಾದವು ಅಧಿಕಾರಕ್ಕೆ ಬರುವಷ್ಟು ಬಲಶಾಲಿಯಾಗಬಲ್ಲದು. ಅದು ನಮ್ಮ ರಾಷ್ಟ್ರೀ-

ಯ ಸಂಸ್ಕೃತಿ ಮತ್ತು ಸ್ವಾತಂತ್ರ್ಯಕ್ಕೆ ಕಮ್ಯು ನಿಸ್ಟರಿಂದ ಬರುವ ಗಂಡಾಂತರಕ್ಕೆ ಎದುರಾಗಿ ಸಂಘಟಿಸಿ ಬೆಳೆಯಬಲ್ಲದು; ಅಥವಾ ಮುಸ್ಲಿಮರ ಮಿತಿಮೀರಿದ ಬೇಡಿಕೆಗಳಿಗೆ ಪ್ರತಿಭಟನೆಯಾಗಿಯೂ ಬಲಗೊಳ್ಳಬಲ್ಲದು; ಹಾಗೆಯೆ ದೇಶದ ನಾನಾ ಭಾಗಗಳಲ್ಲಿ ಬೆಳೆಯುತ್ತಿರುವ ಪ್ರತ್ಯೇಕತಾ ಭಾವನೆಗಳಿಗೆ ವಿರುದ್ಧವಾಗಿ ರಾಷ್ಟ್ರೀಯ ಐಕ್ಯದ ಪರವಾಗಿ ಹೋರಾಡಿಯೂ ಅದು ಶಕ್ತಿ ಸಂಪಾದನೆ ಮಾಡಬಲ್ಲದು.

ಹೀಗೆ ಪರಾಕ್ರಮವಾದಿ ಪ್ರಭಾವಗಳು ತಲೆಯೆತ್ತುವ ಸಂಭವವಿದೆಯೆಂಬುದು ರಾಷ್ಟ್ರ ವಿರೋಧಿ ವಿಚಾರಧಾರೆಗಳನ್ನು ಲಘುವಾಗಿ ಮನಸ್ಸಿನಲ್ಲಿಟ್ಟುಕೊಂಡವರಿಗೊಂದು ಎಚ್ಚರಿಕೆಯಾಗಿದೆ. ವಿಶೇಷವಾಗಿ ಇದು ಮುಸ್ಲಿಮರಿಗೆ ಎಚ್ಚರಿಕೆಯಾಗಿದೆ. ಏಕೆಂದರೆ ಯಾವ ಕಾರಣದಿಂದ ಹಿಂದೂ ಪರಾಕ್ರಮವಾದಿಗಳು ಅಧಿಕಾರಕ್ಕೆ ಬಂದರೂ ಮುಸಿ ಮರಿಗೆ ಕಷ್ಟ ತಪ್ಪಿದ್ದಲ್ಲ. ನಮ್ಮೆದುರಿಗಿರುವ ಸಂದಿಗ್ಧ ಸಂಧಿಕಾಲದಲ್ಲಿ ಎಲ್ಲರಿಗಿಂತ ಹೆಚ್ಚಾಗಿ ಮುಸ್ಲಿಮರು ಬೆಂಕಿಯೊಡನೆ ಚಿನ್ನಾಟವಾಡುವ ಹವ್ಯಾಸಕ್ಕೆ ಬೀಳಬಾರದು

ಮೊನ್ನೆ ಜೂನ್‌ನಲ್ಲಿ ಅವರು ರಾಷ್ಟ್ರೀಯ ಸಮ್ಮೇಲನ ಸೇರಿಸಿದ್ದು ದೊಡ್ಡ ಪ್ರಮಾದವಾಯಿತು. ನಿರ್ದಾಕ್ಷಿಣ್ಯವಾಗಿ ಹೇಳಬೇಕಾದರೆ, ಅವರ ಕುಂದು-ಕೊರತೆಗಳ ಕೂಗು ಶುದ್ಧ ಅರ್ಥಹೀನವಾದದ್ದು. ಅವರಲ್ಲಿ ಕೆಲವರಿಗೆ ಅನ್ಯಾಯವಾಗಿರುವುದು ನಿಜವಿರಬಹುದು. ಆದರೆ ನಮ್ಮ ರಾಷ್ಟ್ರದ ಅಂಗಗಳಾಗಿರುವ ನೂರಾರು ವಿವಿಧ ಗುಂಪುಗಳಿಗೂ ಹೀಗಾಗಿದೆ. ಪ್ರತಿಯೊಂದು ಗುಂಪಿನ ವಿರುದ್ಧವೂ ಪಕ್ಷಪಾತವಾಗುತ್ತಿದೆ ಮತ್ತು ಪ್ರತಿಯೊಂದು ಗುಂಪೂ ಇತರರ ವಿರುದ್ಧ ಪಕ್ಷಪಾತ ಮಾಡುತ್ತಿದೆ.

ಯಾವುದೊಂದು ಏಕಜಾತೀಯ ಸಮಾಜದಲ್ಲಿ ನಿತ್ಯವೂ ಜರಗುವ ಅಸಂಖ್ಯ ಅನ್ಯಾಯಗಳು ವ್ಯಕ್ತಿಗಳ ತಪ್ಪು ಎಂಬುದಾಗಿ ಪರಿಗಣಿಸಲ್ಪಡುತ್ತವೆ. ನಮ್ಮ ಸಮಾಜದಲ್ಲಿ ಮಾತ್ರ ಅಂಥವು ಅಲ್ಪ ಸಂಖ್ಯಾಕರ ಕುಂದು-ಕೊರತೆಗಳೆನಿಸುತ್ತವೆ. ಗುಂಪುಗಳ ಕುಂದು-ಕೊರತೆಗಳ ದೂರಿಗೆ ಕೊನೆಯೇ ಇಲ್ಲವೇನೋ. ಆದರೆ ಆ ಮಾರ್ಗದಿಂದ ಪ್ರಗತಿ ಸ್ವಲ್ಪವೂ ಸಾಧ್ಯವಾಗದು.

ಭಾರತದಲ್ಲಿ ಭಾಷಾರಾಜ್ಯಗಳ ರಚನೆಯ ಇತಿಹಾಸವನ್ನು ನೋಡಿದರೆ, ಗುಂಪು ಮತ್ತು ತಂಡಗಳ ಹಕ್ಕುಗಳನ್ನು ಕಾಪಾಡಲು ಈ ಬಗೆಯ ಕ್ರಮಗಳು ಎಷ್ಟು ನಿರರ್ಥಕವೆಂದು ನಮಗೆ ವಿದಿತವಾಗುತ್ತದೆ. ರಾಜ್ಯ ಪುನರ್ಘಟನೆಯಿಂದ ಅತೃಪ್ತಿ ಶಾಂತವಾಗುವ ಬದಲು ಅಸಂತೋಷದ ಕಾರಣಗಳು ಹೆಚ್ಚಿವೆ. ಅದರಿಂದ ಪ್ರತ್ಯೇಕ ರಾಜ್ಯಗಳಿಗಾಗಿ ಬೇಡಿಕೆ ಹೆಚ್ಚಾಗಿದೆ, ರಾಜ್ಯಗಳೊಳಗೆ ಇದ್ದ ಬಲ ಸಮತೋಲ ಕೆಟ್ಟಿದೆ, ಮೊದಲು ಇಲ್ಲದಿದ್ದ ಗಡಿ ವಿವಾದಗಳು ಹೆಚ್ಚಿವೆ, ದೇಶದಲ್ಲೆಲ್ಲ ಗುಂಪಿನ ಮನೋಭಾವ ಬೆಳೆದಿದೆ.

ಸ್ವಾತಂತ್ರ್ಯಾನಂತರದ ಅನುಭವವು ಗುಂಪುಗಳ ಹಿತವನ್ನು ರಕ್ಷಿಸಲು ವಿಶೇಷ ಸವಲತ್ತುಗಳನ್ನು ಕೊಟ್ಟರೂ ಅವುಗಳ ಉದ್ದೇಶ ನಿರರ್ಥಕವಾಗುತ್ತದೆಂದು ತೋರಿಸಿದೆ. ಗುಂಪುಗಳ ಹಿತ ರಕ್ಷಿಸುವ ಏಕಮಾತ್ರ ಉಪಾಯವೆಂದರೆ ವ್ಯಕ್ತಿಗಳ ಹಿತವನ್ನು ಎತ್ತಿ ಹಿಡಿಯುವುದು. ಆದ್ದರಿಂದ ಮುಸ್ಲಿಮರು ಇನ್ನಾದರೂ ಜಾತೀಯ ಆಟವಾಡುವುದನ್ನು ಬಿಡುವರೆಂದು ಆಶಿಸಲಾಗಿದೆ. ಅದು ಅವರಿಗೇ ವಿಶೇಷವಾಗಿ ಅಪಾಯಕರವಾಗಿದೆ.

ಆದ್ದರಿಂದ ರೈನ್‌ಕೋರ್ಟರು ಹೇಳುವಂತೆ ಕಮ್ಯುನಿಸ್ಟರಾಗಲಿ ಹಿಂದೂ ಪರಾಕ್ರಮವಾದವಾಗಲಿ ಕಡೆಗೆ ಗೆಲ್ಲುವುದೆಂಬುದು ಅಶಕ್ಯಕೋಟಿಯದಲ್ಲೆಂದು ನನಗೆನಿಸುತ್ತದೆ. ಆದರೆ ಇದು ಅನಿವಾರ್ಯವೆಂದೇನೂ ನಾನು ನಂಬುವುದಿಲ್ಲ. ನಾವು ಎಚ್ಚರಿಕೆ ವಹಿಸಬೇಕೆಂದಷ್ಟೇ ಇದರ ಅರ್ಥ. ಭಾರತೀಯ ಜನತೆಯಲ್ಲಿ ವಿವೇಕದ ನಿಧಿಯೇ ಇದೆ. ಸಕಾಲದಲ್ಲಿ ಅದು ಎಚ್ಚತ್ತರೆ ನಾವು ಮಧ್ಯಮಾರ್ಗದಲ್ಲೇ ಸಾಗಿ ಎರಡೂ ಬಗೆಯ ಅತಿರೇಕವಾದಿಗಳು ಅಧಿಕಾರಗ್ರಹಣ ಮಾಡುವುದನ್ನು ತಡೆಯಬಲ್ಲೆವು.

*

ನಿಮಗೆ ವೇಳೆ ಸಾಲದೆ? ಇದನ್ನೋದಿ.

# ೨೪ ಅಲ್ಲ, ೨೪ ತಾಸು!

" ಕೋಲಿಯರ್ಸ್ " ನಿಂದ

ಪ್ರತಿಯೊಬ್ಬನಿಗಿರುವುದೂ ಅಷ್ಟೇ: ದಿನಕ್ಕೆ ೨೪ ತಾಸುಗಳು. ಒಂದಿಷ್ಟು ಮುಂಜಾಗ್ರತೆಯಿಂದ, ಸುಯೋಜಿತ ರೀತಿಯಿಂದ ಈ ಸಮಯವನ್ನು ಆದಷ್ಟು ಹೆಚ್ಚಾಗಿ, ಹೆಚ್ಚು ಒಳ್ಳೆಯ ರೀತಿಯಲ್ಲಿ ಉಪಯೋಗಿಸಿಕೊಳ್ಳುವ ಬಗೆಯನ್ನು ಅರಿತುಕೊಳ್ಳಬಹುದು. ಈ ಬಗೆಯನ್ನರಿತರೆ ಉದ್ವೇಗ, ಚಿಂತೆ, ಅವಾಸ್ತವ ದಣಿವು ಇವುಗಳಿಂದ ಮುಕ್ತರಾಗಿ ಬೇಕಷ್ಟು ಕೆಲಸ ಮಾಡಲು ಬೇಕಷ್ಟು ಸಮಯವಿರುತ್ತದೆ.

ಯಾವುದು ಈ ಬಗೆ? ಸಮಯದ ಈ ಆಡಳಿತ ಸೂತ್ರ ಯಾವುದು?

ಬೆಳಿಗ್ಗೆ ನೀವು ನಿತ್ಯ ಏಳುವುದು ಏಳು ಗಂಟೆಗೆ ಎನ್ನಿ. ಒಂದು ಹತ್ತು ನಿಮಿಷ ಮುಂಚೆ ಏಳಲು ನಿಶ್ಚಯಿಸಿಕೊಳ್ಳಿ. "ಏಳಕ್ಕೆ ಎದ್ದರೇ ತುಂಬ ಬಳಲಿದವನಂತಿರುತ್ತೇನೆ. ಒಂದು ನಿಮಿಷದ ನಿದ್ದೆಯೂ ನನಗೆ ಅಮೂಲ್ಯವಾದದ್ದು. ಬೆಳಗಿನ ಝಾವದಲ್ಲಿ ನನಗೆ ಚೆನ್ನಾಗಿ ನಿದ್ದೆ ಬರುತ್ತದೆ" ಎಂದು ನೀವನ್ನಬಹುದು. ಆದರೆ ಮೊದಲೇನೊ ಸ್ವಲ್ಪ ತಾಪದಾಯಕವೆನಿಸಿದರೂ ಹತ್ತು ನಿಮಿಷ ಮೊದಲು ಏಳುವ ನಿರ್ಧಾರ ಮಾಡಿ. ಈ ನಿರ್ಧಾರವನ್ನು ಕೆಲ ದಿನ ಪಾಲಿಸಿದ ಬಳಿಕ ಮುಂದೆಂದೂ ನೀವು ನಿಯಮ ತಪ್ಪಿಸುವುದಿಲ್ಲ.

ಹತ್ತು ನಿಮಿಷ ಮೊದಲು ಏಳುವಿರಲ್ಲ! ಈ ಹತ್ತು ನಿಮಿಷಗಳನ್ನು ಹೇಗೆ ಉಪಯೋಗ ಮಾಡಿಕೊಳ್ಳಬೇಕು? ಅಲ್ಲೆ ಹಾಸಿಗೆಯಲ್ಲಿ ಅಡ್ಡಾಗಿ ಕೈಕಾಲು ಚಾಚಿರಿ. ಈ ಅವಸ್ಥೆ ನಿಮಗೆ ಹತ್ತು ನಿಮಿಷಗಳ ನಿದ್ದೆ ಕೊಡುವುದಕ್ಕಿಂತ ಹೆಚ್ಚಿನ ಲಾಭವನ್ನು ಕೊಡುವುದು. ಆ ಮೇಲೆ ಹಾಸಿಗೆ ಬಿಟ್ಟೇಳಿರಿ. ಆದರೆ ಅವಸರ-ವಸರವಾಗಿ ಅಲ್ಲ. ಹಾಸಿಗೆಯಲ್ಲಿ ಚೇಳು ಕಂಡವರಂತೆ ಜಿಗಿದೇಳಬೇಡಿ. ಅದರಿಂದ ನಿಮ್ಮ ಹೃದಯ ಮತ್ತು ಸ್ನಾಯುಗಳ ಮೇಲೆ ಅವಾಸ್ತವ ಭಾರ ಬೀಳುವುದು.

ಸಾವಕಾಶವಾಗಿ ಏಳಿರಿ. ಏಳುವಾಗ ದೀರ್ಘವಾಗಿ ಶ್ವಾಸವನ್ನೆಳೆದುಕೊಳ್ಳಿರಿ. ಈ ಮಾತನ್ನು ಯಾವಾಗಲೂ ನೆನಪಿಡಬೇಕು. ಕುರ್ಚಿಯ ಮೇಲಿಂದ ಏಳುವಾಗ ಕೂಡ ಸರಕ್ಕನೆ ಏಳದೆ ಸಾವಕಾಶವಾಗಿ ಶ್ವಾಸವನ್ನೆಳೆದುಕೊಳ್ಳುತ್ತ ಏಳಬೇಕು. ಕನ್ನಡಿಯ ಮುಂದೆ ಕುರ್ಚಿಯನ್ನಿಟ್ಟುಕೊಂಡು ಮೇಲಿನ ಎರಡೂ ರೀತಿಯಲ್ಲಿ ಎದ್ದು ನೋಡಿದರೆ ವ್ಯತ್ಯಾಸ ನಿಮಗೆ ಹೊಳೆಯುವುದು. ಸಾವಕಾಶವಾಗಿ ಎದ್ದಾಗ ನಿಮ್ಮ ಮುಖದಲ್ಲಿರುವ ಕಳೆ ಸರ್ರನೆ ಎದ್ದಾಗ ಇರುವುದಿಲ್ಲ.

ಎದ್ದಬಳಿಕ ಮತ್ತೆ ಮಲಗುವವರೆಗೂ ಇಂದು ನನಗೆ ಹತ್ತು ಮಿನಿಟುಗಳ ಸಮಯ ಹೆಚ್ಚಿಗೆ ಸಿಕ್ಕಿದೆ ಎಂಬ ನೆನಪಿರಲಿ. ಪ್ರತಿಯೊಂದು ಕೆಲಸವನ್ನೂ ಸ್ನಾನ, ಊಟ ಮುಂತಾದ್ದೆಲ್ಲವನ್ನೂ ನಿಧಾನವಾಗಿ ನೆರವೇರಿಸಿ.

ನೀವು ಬೆಳಿಗ್ಗೆ ಉಪಾಹಾರ ಏನು ಸ್ವೀಕರಿಸುತ್ತೀರಿ ಎನ್ನುವುದಕ್ಕಿಂತ ಅದನ್ನು ಹೇಗೆ ತಿನ್ನುತ್ತೀರಿ ಎಂಬುದು ಮಹತ್ವದ್ದು. ಅವಸರದಿಂದ ತಿಂಡಿ-ಪಾನೀಯಗಳನ್ನು ಹೊಟ್ಟೆಗೆ ತುರುಕಿದರೆ ನೀವು ನಿಮ್ಮ ಪಚನಾಂಗಗಳ ಕಾರ್ಯವನ್ನು ಅವಸರಪಡಿಸಿ ಆ ಮೂಲಕ ಅಂದಿನ

ಇಡೀ ದಿನದಲ್ಲಿ ಗಡಬಿಡಿ ಮತ್ತು ಅಸ್ವಸ್ಥತೆಗೆ ನಾಂದಿ ಹಾಕಿಕೊಳ್ಳುವಿರಿ. ನಿಮ್ಮ ಕಾರ್ಯಶಕ್ತಿ ಬರುವುದು ಆಹಾರದಿಂದ. ಆದ್ದರಿಂದ ಆಹಾರ ಸೇವಿಸುವಾಗ ಶಾಂತಚಿತ್ತದಿಂದ, ನಿಧಾನವಾಗಿ ಸೇವಿಸುವ ನಿಯಮ ಹಾಕಿಕೊಳ್ಳಿರಿ.

ಸಮಯನಿಷ್ಠೆಯಿಂದ ನಿಮ್ಮ ಇತರ ಎಷ್ಟೋ ತಾಪ-ಕಷ್ಟಗಳು ನಿವಾರಣೆಯಾಗಬಲ್ಲವು. ತಡವಾಯಿತು, ಆ ಕೆಲಸವಾಗಬೇಕು, ಈ ಕೆಲಸವಾಗಬೇಕು ಎಂದು ನೀವು ಚಡಪಡಿಸುತ್ತಿದ್ದರೆ ನಿಮ್ಮ ಅಂಗಾಂಗಗಳೆಲ್ಲ ಉದ್ರೇಕಗೊಂಡು ಅದರಿಂದ ಅಸ್ವಸ್ಥತೆ ಹೆಚ್ಚುವುದು. ಕೆಲಸವೂ ಸರಿಯಾಗಿ ಆಗುವುದಿಲ್ಲ. ಒಂದಕ್ಕೆ ಎರಡು ಪಟ್ಟು ಶ್ರಮವೂ ಬೇಕಾಗುತ್ತದೆ.

ಯಾಕೆ ತಡವಾಯಿತು ಎಂದು ವಿಚಾರ ಮಾಡಿರಿ. ಏಳಲು ತಡವಾಗಿ, ಪತ್ರಿಕೆಯನ್ನೋವುದರಲ್ಲಿ ತಲ್ಲೀನರಾಗಿ, ಅಥವಾ ಇನ್ನಾವುದೋ ವಿಚಾರದಲ್ಲಿ ತಡವಾಯಿತೇ? ನಿಮ್ಮ ಕಣ್ಣು ಗಡಿಯಾರದ ಮೇಲೆ ಬಿದ್ದು 'ಎಲಾ, ಎಷ್ಟು ತಡವಾಯಿತಲ್ಲ' ಎಂದು ನೀವು ಉದ್ಗರಿಸಿದಾಗ ನಿಮ್ಮ ಸ್ನಾಯುಗಳೆಲ್ಲ ಆಘಾತದಿಂದ ಬಿಗಿಯಾಗುತ್ತವೆ. ನೀವು ಅವಸರದಿಂದ ಹೇಗೆ ಹೇಗೋ ಬಟ್ಟೆ ತೊಟ್ಟುಕೊಂಡು, ಓಡುತ್ತೋಡುತ್ತ ನಿಮ್ಮ ಕೆಲಸದ ಸ್ಥಳಕ್ಕೆ ಹೋಗುವಿರಿ. ಈ ಅವಸರದಿಂದ ನಿಮಗೆ ಅಸಮಾಧಾನ, ಚಿಂತೆ, ಶ್ರಮ ಎಲ್ಲ ಉಂಟಾಗಿ ನಿಮ್ಮ ಶಕ್ತಿ ಅರ್ಧಕ್ಕರ್ಧ ಉಡುಗಿಹೋಗುವುದು.

ಒಂದು ಜಾಣ್ಣುಡಿಯಿದೆ: ಏನಾದರೂ ಕೆಲಸವಾಗಬೇಕಿದ್ದರೆ ಸದಾ ಕಾರ್ಯಮಗ್ನನಾಗಿರುವವನಿಂದ ಮಾಡಿಸಿಕೊಳ್ಳಿ ಎಂದು. ಯಾಕೆ ಗೊತ್ತೆ? ಆತ ಸಮಯದ ಮಹತ್ವವನ್ನು ಬಲ್ಲವ, ಸಮಯಕ್ಕೆ ಸರಿಯಾಗಿ ಕೆಲಸ ಮಾಡುವವ. ಅದರಿಂದ ಅವನಿಗೆ ತನ್ನ ಕೆಲಸಗಳನ್ನೆಲ್ಲ ಸಕಾಲದಲ್ಲಿ ಮುಗಿಸಿಕೊಳ್ಳಲು ಸಾಧ್ಯವಾಗಿ ಅವನಲ್ಲಿ ಸಮಯ ಇನ್ನೂ ಉಳಿದಿರುತ್ತದೆ.

"ಛೆ! ಒಂದು ನಿಮಿಷವೂ ಬಿಡುವಿರುವುದಿಲ್ಲ ನನಗೆ" ಎನ್ನುವವರಿಗೆ "ಯಾಕೆ? ದಿನದ ಇಪ್ಪತ್ತುನಾಲ್ಕು ತಾಸು ನಿಮಗೆ ಸಾಲದೆ? ಏನೇನೆಲ್ಲ ಮಾಡುತ್ತೀರಿ?" ಎಂದು ಕೇಳಿರಿ. ಅವರು ಕೂಡಲೆ ಸಂತಾಪದಿಂದ, "ಅದನ್ನು ಮಾಡಿದೆ, ಇದನ್ನೂ ಮಾಡಿದೆ" ಎಂದೆಲ್ಲ ಪಟ್ಟಿ ಓದುತ್ತಾರೆ. ಆದರೆ ನ್ಯಾಯವಾಗಿ ಅಂಥವರು ತಾವು ಮಾಡಿದ ಕೆಲಸಗಳನ್ನೆಲ್ಲ ಒಂದೊಂದಾಗಿ ಪರಿಶೀಲಿಸಿದರೆ, ಅವುಗಳಿಗೆ ನ್ಯಾಯವಾಗಿ ತಗಲುವ ಸಮಯದ ಲೆಕ್ಕ ಹಾಕಿದರೆ, ಬಹಳಷ್ಟು ಸಮಯ ವ್ಯರ್ಥವಾಯಿತು ಎಂದು ಕಾಣಿಸದಿರದು.

ಈ ಜನ ಎಲ್ಲಿ ತಪ್ಪುತ್ತಾರೆಂದರೆ ಅವರು ಯಾವುದಕ್ಕೂ ಒಂದು ಯೋಜನೆ ಮಾಡಿಕೊಂಡಿರುವುದಿಲ್ಲ, ಯದ್ವಾತದ್ವಾ ಕೆಲಸ ಮಾಡುತ್ತಾರೆ. ಮಾಡಬೇಕಾದ ಕೆಲಸಗಳಿಗೆಲ್ಲ ಒಂದ ಯೋಜನೆ ಹಾಕಿಕೊಳ್ಳಬೇಕು. ಹಾಗೆಂದರೆ ಪ್ರತಿಯೊಂದು ಕೆಲಸಕ್ಕೂ ಮಿನಿಟುಮಿನಿಟಿನ ವೇಳಾಪತ್ರಿಕೆ ಹಾಕಿಕೊಳ್ಳಬೇಕು ಎಂದಲ್ಲ. ನಿಮಗೆ ನಿತ್ಯ ವ್ಯವಹಾರಕ್ಕೆ-ಅಂದರೆ ಊಟಪಾಟಾದಿಗಳಿಗೆ ಎಷ್ಟು ಸಮಯ ಬೇಕು ಎಂದು ಅಂದಾಜು ಹಾಕಿಕೊಂಡು ಅಷ್ಟು ಸಮಯದಲ್ಲೆ ಅವನ್ನು ಮುಗಿಸಬೇಕು. ಯಾವುದು ಮಹತ್ವದ್ದು, ಯಾವುದು ಅಲ್ಲ ಎಂಬ ತಿಳಿವಳಿಕೆ ಸಹಜ ಸ್ವಭಾವವಾಗುವಂತೆ ಮಾಡಿಕೊಂಡು ಆ ಆ ಕಾರ್ಯಗಳ ಯೋಗ್ಯತೆಗನುಗುಣವಾಗಿ ಅವಕ್ಕಾಗಿ ಸಮಯ ಕೊಡಲು ಕಲಿಯಬೇಕು. ಇಷ್ಟನ್ನು ನೀವು ಮಾಡಬಲ್ಲಿರಾದರೆ "ಸಮಯವೇ ಇಲ್ಲ" ಎಂಬ ಸೊಲ್ಲೇ ಅಡಗಿಹೋಗುವುದು.

"ಕತ್ತೆಗಿಂತಲೂ ತನಗೆ ಹೆಚ್ಚು ಕೆಲಸ" ಎಂದು ಹೇಳಿಕೊಳ್ಳುವುದು ಕೆಲವರಿಗೆ ಇಷ್ಟವೇ ಆಗಿರುತ್ತದೆನ್ನಬಹುದು. ಇಂಥವರು ಪ್ರಗತಿ ಹೊಂದಲು ಸಾಧ್ಯವೇ ಇಲ್ಲ. 'ಅವಸರ' ವೆನ್ನುವುದು ಒಂದು ಸದ್ಗುಣವಲ್ಲ. ಪ್ರತಿಯೊಂದಕ್ಕೂ 'ಅವಸರ' ಎಂದರೆ ಅದರರ್ಥ ನಮಗೆ ಸರಿಯಾಗಿ ಕೆಲಸ ಮಾಡಲು ಬರುತ್ತಿಲ್ಲ ಎಂದೇ ಆಗುತ್ತದೆ. ದಿನವಿಡೀ ಒದ್ದಾಡುತ್ತ ಗುದ್ದಾಡುತ್ತ ಕೆಲಸ ಮಾಡುವುದು ಜೀವಿಸುವ ಕಲೆಯಲ್ಲ. ದಿನವನ್ನು ಒಂದು ಸಾಧನೆಯ ತೃಪ್ತಿ ಸಂತೋಷಗಳಿಂದ, ವಿಶೇಷ ಶ್ರಮವಿಲ್ಲದೆ ಕಳೆಯುವುದೇ ಜೀವನದ ಕಲೆ.

ರಾತ್ರಿ ಹೊತ್ತಿನಲ್ಲೆ ನಿಮ್ಮ ವಿಚಾರ ಯೋಗ್ಯವೂ ಸ್ಪಷ್ಟವೂ ಆಗಿರುತ್ತಿದ್ದರೆ ಮಲಗುವ ಮೊದಲೇ ಮರುದಿನದ ಕೆಲಸಗಳ ಯೋಜನೆ ಹಾಕಿ

ಕೊಳ್ಳಿ. ಬೆಳಗಿನ ಹೊತ್ತು ವಿಚಾರಕ್ಕೆ ಅನುಕೂಲವಾದರೆ ಹಾಸಿಗೆ ಬಿಟ್ಟೇಳುವ ಮೊದಲು ಯೋಜನೆ ಹಾಕಿಕೊಳ್ಳಿ. ಮಾಡಬೇಕಾದ ಕೆಲಸಗಳನ್ನೆಲ್ಲ ಸಿಕ್ಕಾಪಟ್ಟೆ ಮನದಲ್ಲಿ ತುಂಬಿಕೊಳ್ಳದೆ ಕ್ರಮಬದ್ಧ ರೀತಿಯಲ್ಲಿ ಜೋಡಿಸಿಕೊಳ್ಳಿ. ಆಗ ಕೆಲಸಗಳು ಹಗುರಾಗಿ ಕಾಣಿಸುವವು. ದಿನದ ಕಾರ್ಯಕ್ರಮ ಯೋಜಿಸುವಾಗ ನಿಮ್ಮ ಮನಸ್ಸನ್ನು ರಂಜಿಸುವ ಯಾವುದೊಂದು ಕಾರ್ಯವನ್ನು ತಪ್ಪದೆ ಸೇರಿಸಿಕೊಳ್ಳಿ. ಏಕೆಂದರೆ ದಣಿದ ದೇಹ ಮನಸ್ಸುಗಳಿಗೆ ರಂಜನೆ ಅಗತ್ಯವಾಗಿರುತ್ತದೆ.

ಆಗ.ೕಕಾದ ಕೆಲಸ ಆಗದಿದ್ದರೆ ಮನಸ್ಸಿಗೆ ತಾಪವಾಗುತ್ತದೆ. ಅಪ್ರಿಯ ಕೆಲಸಗಳ ವಿಚಾರವೂ ಹಾಗೆಯೆ. ಆದ್ದರಿಂದ ಮೊದಲಿಗೆ ಅಪ್ರಿಯವಾದ ಕೆಲಸಗಳನ್ನು ಮಾಡಿ ಮುಗಿಸಿಬಿಟ್ಟರೆ ಮನಸ್ಸು ಪ್ರಸನ್ನವಾಗುತ್ತದೆ. ಗೆದ್ದೆ ಎಂಬ ಭಾವದಿಂದ ಉತ್ಸಾಹ ಬರುತ್ತದೆ.

ಈ ಬಗೆಯಾಗಿ ಕೆಲಸಗಳನ್ನು ನಿಯಮಬದ್ಧವಾಗಿ ಮಾಡುವ ನಿರ್ಧಾರ ಮಾಡಿದ ಬಳಿಕ ಹಾಗೆ ಮಾಡುವುದು ನಿಮ್ಮ ಸಹಜ ಸ್ವಭಾವವಾಗುವ ವರೆಗೆ ಸ್ವಲ್ಪ ಜಾಗರೂಕತೆಯಿಂದಿರಬೇಕು. ಒಮ್ಮೆ ನಿಯಮ ತಪ್ಪಿದರೆ ಹತ್ತು ಸಲ ನಿಯಮ ತಪ್ಪಲು ತಡವಾಗುವುದಿಲ್ಲ.

ಮುಂಜಾನೆ ಮತ್ತು ಮಧ್ಯಾಹ್ನದಲ್ಲಿ ಒಂದು ಕೆಲ ನಿಮಿಷ ವಿಶ್ರಾಂತಿ ಪಡೆಯಲು ಸಾಧ್ಯವಿದ್ದರೆ ಬಹಳ ಉತ್ತಮ. ಸಾಧ್ಯವಿಲ್ಲ ಎಂದಾದರೆ ನೀವು ಬಚ್ಚಲ ಮನೆಗೆ ಮುಖ ತೊಳೆಯಲು ಹೋದಾಗ ಆಕಳಿಸಿ ಮೈ ಮುರಿಯಿರಿ. ಗೋಡೆಗೆ ಆತು ನೆಟ್ಟಗೆ ನಿಲ್ಲಿರಿ. ಊಟಕ್ಕೆ ಮೊದಲು ಒಂದೆರಡು ಬಾರಿ ದೀರ್ಘವಾಗಿ ಶ್ವಾಸೋಚ್ಛ್ವಾಸ ಮಾಡಿ ತಲೆಯಿಂದ ಪಾದದ ವರೆಗೆ ದೇಹವನ್ನು ಸಡಿಲು ಬಿಡಿ. ನಿಧಾನವಾಗಿ ಊಟ ಮಾಡಿ. ನಿಮ್ಮ ಕೆಲಸದ ಸ್ಥಳಕ್ಕೆ ಬಸ್ಸಿನಲ್ಲಿ ಹೋಗುತ್ತಿದ್ದರೆ ಬಸ್ಸಿನಲ್ಲಿ ಕುಳಿತಾಗ ಕಣ್ಮುಚ್ಚಿಕೊಂಡು ಯಾವುದೊಂದು ಒಳ್ಳೆಯ ವಿಚಾರ ಮಾಡಿ.

ದಿನದ ಮಧ್ಯದಲ್ಲಿ ಒಂದಿಷ್ಟು ಹೊತ್ತು ಮೌನವಾಗಿರುವುದು ಶಕ್ತಿಯನ್ನುಳಿಸಲು ಒಂದು ದೊಡ್ಡ ಸಾಧನ. ಮಾತಾಡುವುದರಿಂದ ಜನ ಎಣಿಸುವುದಕ್ಕಿಂತ ಹೆಚ್ಚು ಶಕ್ತಿ ವ್ಯಯವಾಗುತ್ತದೆ. ಕೆಲ ದಿನಗಳ ವರೆಗೆ ನಿಮ್ಮ ಮೇಲೆ ಲಕ್ಷ್ಯವಿಟ್ಟುಕೊಂಡು ಸಂಭಾಷಣೆಯಲ್ಲಿ ನಿಮ್ಮ ಪಾಲು ಎಷ್ಟಿರುತ್ತದೆ ಎಂದು ಕಂಡುಹಿಡಿಯಿರಿ. ಇತರರನ್ನು ಈ ದೃಷ್ಟಿಯಿಂದ ನಿರೀಕ್ಷಿಸಿದಾಗ ಹೆಚ್ಚು ಯಶಸ್ವಿಯಾಗಿರುವವರೆಲ್ಲ ಮೌನದ ಬೆಲೆಯನ್ನರಿತವರೇ ಎಂದು ತಿಳಿಯುವುದು. ಅವರು ತಮ್ಮ ಮಾತುಗಳನ್ನೂ ಜೊತೆಗೆ ಶಕ್ತಿಯನ್ನೂ ಹಾಳು ಮಾಡುವುದಿಲ್ಲ.

ಸಂಜೆ ಮನೆಗೆ ತಿರುಗಿ ಬಂದಾಗ ನೀವು ಕೆಲ ನಿಮಿಷ ಪೂರ್ಣ ವಿಶ್ರಾಂತಿ ಪಡೆದೇ ಊಟ ಮಾಡಬೇಕು. ಅಡ್ಡಾಗಿ ಮೈ ಸಡಿಲು ಬಿಟ್ಟು ಆಳವಾಗಿ ಶ್ವಾಸೋಚ್ಛ್ವಾಸ ಮಾಡಿರಿ. ಏಳುವಾಗ ಬೆಳಿಗ್ಗೆ ಏಳುವಾಗ ಮಾಡಿದಂತೆಯೆ ದೀರ್ಘಶ್ವಾಸವೆಳೆದುಕೊಂಡು ಮೆಲ್ಲನೆ ಏಳಿ.

ದಿನವನ್ನೆಲ್ಲ ಒಂದು ವ್ಯವಸ್ಥಿತ ರೀತಿಯಲ್ಲಿ ಕಳೆದರೆ ರಾತ್ರಿ ನಿಮಗೆ ಅನಿದ್ರೆಯ ರೋಗದ ಬಾಧೆ ಕನಸಿನಲ್ಲೂ ಆಗದು. ಹೀಗೆ ವ್ಯವಸ್ಥಿತ ಜೀವನ ನಡೆಸಿದರೆ ದಿನದ ಇಪ್ಪತ್ತುನಾಲ್ಕು ತಾಸುಗಳು ಸಾರ್ಥಕವಾಗಿ ಜೀವನ ಸುಖಮಯವಾಗುವುದು.

ಜೀವನ ಒಂದು ಅನಿಶ್ಚಿತ ಅವಧಿಯ ಶಿಕ್ಷೆಯಲ್ಲ. ಅದೊಂದು ಸಾಹಸ. ಜನರಿಗೆ ತಮ್ಮ ಆರೋಗ್ಯಾದಿಗಳ ಶಕ್ತಿಯ ಕಲ್ಪನೆಯಿಲ್ಲದೆ ಅವರು ತಮ್ಮ ನಿರುತ್ಸಾಹ ಮುಂತಾದವುಗಳು ಸ್ವಾಭಾವಿಕವೆಂದೇ ತಿಳಿಯುತ್ತಾರೆ. ವಸ್ತುಸ್ಥಿತಿ ಹಾಗಿಲ್ಲ. ತೀರ ಕ್ವಚಿತ್ತಾದ ಅಪವಾದಗಳನ್ನು ಬಿಟ್ಟರೆ ಎಲ್ಲರೂ ಈಗಿರುವುದಕ್ಕಿಂತ ಉತ್ತಮರಾಗಬಲ್ಲರು. *

---

ಸುಖಕ್ಕಾಗಿ ಹುಡುಕಿ ಹುಡುಕಿ ನಿಮಗೆ ಸುಖ ದೊರೆಯಲೂಬಹುದು : ಕನ್ನಡಕಕ್ಕಾಗಿ ಹುಡುಕಿ ಹುಡುಕಿ ಕಡೆಗೆ ತನ್ನ ಮೂಗಿನ ಮೇಲೆಯೆ ಮುದುಕಿಗೆ ಅದು ಸಿಕ್ಕಿದ ಹಾಗೆ.

— ಜಾನ್ ಬಿಲ್ಲೋ

# ಬಾಯಿಯ ದುರ್ಗಂಧವನ್ನು ಕಾಲ್ಗೇಟಿನಿಂದ ತೊಲಗಿಸಿರಿ

ಅದರೊಂದಿಗೆ ದಿನವಿಡೀ

# ದಂತಕ್ಷಯವನ್ನು ಇದಿರಿಸಿರಿ !




ಏಕೆಂದರೆ : ಕಾಲ್ಗೇಟ್ ಡೆಂಟಲ್ ಕ್ರೀಮ್‌ನೊಂದಿಗೆ ಒಮ್ಮೆ ಹಲ್ಲುಜ್ಜುವುದರಿಂದ ಬಾಯಿಯಲ್ಲಿ ದುರ್ಗಂಧವನ್ನುಂಟು ಮಾಡುವ ಹಾಗೂ ಹಲ್ಲುಗಳನ್ನು ಕ್ಷಯಿಸುವ ಶೇಕಡ 85ರಷ್ಟು ಕ್ರಿಮಿಗಳು ನಾಶವಾಗುತ್ತವೆ.

ಊಟವಾದೊಡನೆ ಕಾಲ್ಗೇಟನಿಂದ ಹಲ್ಲುಜ್ಜುವುದರಿಂದ ದಂತ ಮಂಜನಗಳ ಇತಿಹಾಸದಲ್ಲೇ ಹಿಂದೆಂದೂ ಆಗದಷ್ಟು ಅಧಿಕ ಜನರ ದಂತಕ್ಷಯವನ್ನು ಅಧಿಕ ಪ್ರಮಾಣದಲ್ಲಿ ತಡೆಗಟ್ಟಲು ಸಾಧ್ಯವಾಗುತ್ತದೆ. ಇದಲ್ಲದೆ ಕಾಲ್ಗೇಟನಿಂದ 10ರಲ್ಲಿ 7 ಸಂದರ್ಭಗಳಲ್ಲಿ ಬಾಯಿಯ ದುರ್ಗಂಧವು ಕೂಡಲೇ ನಿವಾರಿಸಲ್ಪಡುತ್ತದೆ. ಈ ಎರಡು ಪ್ರಮಾಣಗಳನ್ನು ಕಾಲ್ಗೇಟ್ ವೈಜ್ಞಾನಿಕ ಪರೀಕ್ಷೆಗಳ ಮುಖೇನ ಸಿದ್ಧಗೊಳಿಸಿರುತ್ತದೆ. ಕಾಲ್ಗೇಟಿಗೆ ಮಾತ್ರ ಈ ಪ್ರಮಾಣವಿದೆ!

ಊಟವಾದ ಮೇಲೆ ಬರೀ ಬಾಯಿ ಮುಕ್ಕಳಿಸುವುದರಿಂದ ಪ್ರಯೋಜನವಾಗಲಾರದು—ಪ್ರತಿ ಊಟದ ಮೇಲೆ ತಪ್ಪದೆ ನಿಮ್ಮ ಹಲ್ಲುಗಳನ್ನು ಕಾಲ್ಗೇಟನಿಂದ ಉಜ್ಜಿರಿ. ಇದರ ಪ್ರಬಲವಾದ ಸಂದು ಸಂದುಗಳಿಗೆ ಒಳನುಗ್ಗುವ ನೊರೆಯು ಅಗೋಚರವಾದ ಹಲ್ಲುಗಳ ನಡುವಿನ ಸಂದುಗಳಿಗೆ ಹೊಕ್ಕು ನಿಮ್ಮ ಬಾಯಿಯ ದುರ್ಗಂಧಕ್ಕೂ, ಹಲ್ಲುಗಳ ಕ್ಷಯಿಸುವಿಕೆಗೂ ಕಾರಣವಾದ ಆ ಕೊಳೆಯುತ್ತಿರುವ ಆಹಾರ ಕಣಗಳನ್ನು ನಿವಾರಿಸಿ ಸ್ವಚ್ಛಗೊಳಿಸುವುದು.

ಮಕ್ಕಳಿಗೆ ಕಾಲ್ಗೇಟನಿಂದ ಹಲ್ಲುಜ್ಜುವುದೆಂದರೆ ಬಹಳ ಪ್ರೀತಿ. ದೀರ್ಘಕಾಲ ಉಳಿಯುವ ಅದರ [illegible] ಸ್ವಾದವು ಇದರಲ್ಲಿ ಕೂಡಿರುತ್ತದೆ.




ನಿಮಗೆ ಹಲ್ಲುಪುಡಿ ಹೆಚ್ಚು ಇಷ್ಟವಾಗಿದ್ದರೆ ಈ ಎಲ್ಲಾ ಪ್ರಯೋಜನಗಳನ್ನು ಕಾಲ್ಗೇಟ್ ಟೂತ್ ಪೌಡರ್‌ನಿಂದಲೂ ಪಡೆಯಿರಿ... [illegible]

ಕಾಲ್ಗೇಟನಿಂದ ತಪ್ಪದೆ ಹಲ್ಲುಜ್ಜುವುದರಿಂದ

- ✔ ಬಾಯಿಯ ದುರ್ಗಂಧವು ನಿವಾರಿಸಲ್ಪಡುತ್ತದೆ
- ✔ ದಂತಕ್ಷಯವನ್ನು ವಿರೋಧಿಸಲಾಗುವುದು
- ✔ ಹಲ್ಲುಗಳು ಪರಿಶುಭ್ರವಾಗಿ ಉಳಿಯುವವು




ಬಾಯಿಯ ದುರ್ಗಂಧವನ್ನು ನಿವಾರಿಸಲು ಮತ್ತು ಹಲ್ಲುಗಳು ಶುಭ್ರವಾಗಿರಲು... [illegible] ಇತರ ಡೆಂಟಲ್ ಕ್ರೀಮ್‌ಗಳಿಗಿಂತ ಅಧಿಕವಾಗಿ ಕಾಲ್ಗೇಟನ್ನೇ [illegible]

ಚೀನೀ ತುರ್ಕಸ್ತಾನದಿಂದ ಜಾವಾ
ವರೆಗೆ ಈತನ ಸಾಮ್ರಾಜ್ಯವಿದೆ!

# ಗಣಪತಿಯ ವಿದೇಶ ಸಂಚಾರ

ವಿ. ಥೋ. ವರ್ಘೆ

ಹಿಂದೂ ದೇವತೆಗಳ ಸಾಲಿನಲ್ಲಿ ಗಣಪತಿ ತಡವಾಗಿ ಪ್ರವೇಶಿಸಿದವನೆಂದು ಇಂದಿನ ವಿದ್ವಾಂಸರು ಹೇಳುತ್ತಾರೆ. ಆದರೆ ಬಹಳ ಕಡಿಮೆ ಸಮಯದಲ್ಲೇ ಆತ ಎಲ್ಲ ಕಾರ್ಯಗಳಲ್ಲಿಯೂ ಅಗ್ರ ಪೂಜೆ ಪಡೆಯುವಷ್ಟು ಹೇಗೆ ಮುಂದೊತ್ತಿದ ಎನ್ನುವುದು ಪಂಡಿತರಿಗೂ ಒಂದು ಸಮಸ್ಯೆಯೇ ಆಗಿದೆ. ಶೈವ, ವೈಷ್ಣವ ಶಾಕ್ತರು ಶಿವ ವಿಷ್ಣು ಶಕ್ತಿಗಳನ್ನು ಸರ್ವೋತ್ತಮರೆಂದು ಬಗೆಯುವ ಹಾಗೆ ಗಣಪತಿಯನ್ನೇ ಆದಿದೇವನಾಗಿ ಬಗೆಯುವ ಗಾಣಾಪತ್ಯ ಪಂಥವೂ ಒಂದಿದೆ. ಸಾಲದ್ದಕ್ಕೆ ಶೈವರೂ ವೈಷ್ಣವರೂ ಶಾಕ್ತರೂ ಗಣಪತಿಯನ್ನು ಆದಿಯಲ್ಲಿ ವಂದಿಸಿಯೆ ತಂತಮ್ಮ ಆರಾಧ್ಯ ದೇವತೆಗಳ ಕಡೆ ಸಾಗುತ್ತಾರೆ.

ಇದಕ್ಕೂ ಹೆಚ್ಚಿನ ಸೋಜಿಗವೆಂದರೆ ಗಣಪತಿ ಭಾರತ ಸಂಚಾರವನ್ನಷ್ಟೇ ಅಲ್ಲದೆ ವಿದೇಶ ಸಂಚಾರವನ್ನೂ ಮಾಡಿದ್ದು. ಬರ್ಮಾದಿಂದ ಜಪಾನ್ ವರೆಗೆ ಅಲ್ಲಿಂದ ತುರ್ಕಸ್ತಾನದ ವರೆಗೆ ಗಣಪತಿ ದಿಗ್ವಿಜಯ ಮಾಡಿದ್ದರ ಹೆಗ್ಗುರುತುಗಳು ನಮಗೆ ಸಿಗುತ್ತವೆ.

ಗಣಪತಿಯ ವಿಜಯಯಾತ್ರೆ ಹೇಗಾಯಿತೆಂಬುದನ್ನು ವಿದ್ವಾಂಸರೀಗ ತೇಪೆಹಾಕಿ ಗೊತ್ತುಪಡಿಸಿದ್ದಾರೆ.

ಪ್ರಾಚೀನ ಕಾಲದಲ್ಲಿ ಭಾರತೀಯ ವರ್ತಕರು ವ್ಯಾಪಾರಕ್ಕಾಗಿ ಸಮುದ್ರ ಪರ್ಯಟನ ಮಾಡುತ್ತಿದ್ದರು. ಅವರು ತಮ್ಮ ಹಡಗುಗಳ ಮೇಲೆ ಗಣಪತಿಯ ಮೂರ್ತಿಯನ್ನು ಒಯ್ಯಲು ಮರೆಯುತ್ತಿರಲಿಲ್ಲ. ಆ ಕಾಲದಲ್ಲಿ ಸಮುದ್ರಯಾನ ಒಂದು ಕಠಿನತಮ ಕಾರ್ಯವೇ ಆಗಿತ್ತು. ಇಂತಹ ಪ್ರಸಂಗದಲ್ಲಿ, ಗಣಪತಿಯ ಈ ಮಂಗಲ ಮೂರ್ತಿಯ ಸಹಾಯ ಅವರಿಗೆ ಆಶಾದಾಯಕವಾಗಿತ್ತು. ಈ ರೀತಿ ಹಡಗುಗಳ ರಕ್ಷಕನಾಗಿ ಗಣ

ಜಾವಾದ ಗಣಪತಿಯ ಎರಡು ಮುಖಗಳು









(ಬಾಲಿಯ ಮಾರ್ಗದರ್ಶಕ) (ನೇಪಾಳದ ಗಣಪತಿಗೆ ಐದು ಮುಖ) (ಜಪಾನಿನ ಗಣೇಶ-ಗಣೇಶಿ)

ಪತಿ ಬರ್ಮಾ, ಇಂಡೋಚೀನ, ಸಯಾಮಗಳಲ್ಲಿ ಪ್ರವೇಶ ದೊರಕಿಸಿದ್ದಾನೆ.

ಗಣಪತಿಗೆ ಹೋದ ಹೋದಲ್ಲೆಲ್ಲ ಪೂಜೆ ಸ್ವಾಗತಗಳು ದೊರೆತಿವೆ. ಹಡಗುಗಳ ರಕ್ಷಣೆಗೆಂದು ಹೋದ ಅವನು ಸಂಗಡ ಬೌದ್ಧಧರ್ಮ ಮತ್ತು ವೈದಿಕಧರ್ಮ ಪ್ರಚಾರದಲ್ಲಿಯೂ ಭಾಗ ವಹಿಸಿದ್ದಾನೆ. ಗಣಪತಿ ತನ್ನ ಈ 'ಧರ್ಮ ಪ್ರಚಾರಕ-ಪ್ರಸಾರಕ'ನ ಪಾತ್ರವನ್ನು ಬಹಳ ಬುದ್ಧಿವಂತಿಕೆಯಿಂದ ನಿರ್ವಹಿಸಿದ್ದಾನೆಂಬುದರಲ್ಲಿ ಸಂದೇಹವಿಲ್ಲ. ಯಾವ ದೇಶಕ್ಕೆ ಅವನು ಹೋದನೋ ಅಲ್ಲಿಯ ಜನರ ವೇಷಭೂಷೆಗಳನ್ನು, ರೀತಿ ನಡಾವಳಿಯನ್ನು ಕೂಡಲೇ ಅವನು ಅನುಸರಿಸಿದನು! ಹೀಗಾಗಿ ಅವನಿಗೆ ಅಲ್ಲಿಯ ಜನಜೀವನದಲ್ಲಿ ಪ್ರವೇಶ ಮಾತ್ರವಲ್ಲ, ಗೌರವವೂ ಪ್ರಾಪ್ತವಾಯಿತು.

ಗಣಪತಿಯ ಪ್ರಥಮ ವಿಜಯ ಬೌದ್ಧ ಧರ್ಮದಲ್ಲಿ ಅವನು ಪ್ರವೇಶ ಪಡೆದದ್ದು. ಆ ಧರ್ಮದಲ್ಲಿ 'ಸಿದ್ಧಿದಾತಾ' ಎಂದು ಗಣಪತಿಯ ಮಾಹಾತ್ಮ್ಯವಿದೆ. ಗೌತಮಬುದ್ಧನು 'ಗಣಪತಿ ಹೃದಯಾ' ಎಂಬ ಮಂತ್ರವನ್ನು ತನ್ನ ಪಟ್ಟ ಶಿಷ್ಯ ಆನಂದನಿಗೆ ಹೇಳಿದನಂತೆ. ಎಲ್ಲ ಮನಃಕಾಮನೆಯನ್ನು ಪೂರ್ತಿಮಾಡುತ್ತದೆ ಈ ಮಂತ್ರ. ಅದು 'ನಮೋ ಗಣಪತೇ ಆರ್ಯಗಣಪತಿ ಹೃದಯಾಯ' ಎಂದು ಆರಂಭವಾಗುತ್ತದೆ. ಸಾರನಾಥದಲ್ಲಿ ಬುದ್ಧನಿರ್ವಾಣದ ದೃಶ್ಯದಲ್ಲಿ ಇಲಿಯ ಮೇಲೆ ಕುಳಿತ ಗಣಪತಿಯ ಚಿತ್ರವಿದೆ. ಬೌದ್ಧ ಧರ್ಮದಲ್ಲಿ ಸ್ಥಾನ ಪಡೆದ ಮೇಲೆ ಗಣನಾಥನ ಕೀರ್ತಿ ಏಶಿಯಾಖಂಡದಲ್ಲೆಲ್ಲ ಹರಡಲು ತಡವಾಗಲಿಲ್ಲ.

ಅವನು ಅನುಕ್ರಮವಾಗಿ ಚೀನಿ ತುರ್ಕಸ್ತಾನ, ಸಯಾಮ, ಕಾಂಬೋದಿಯಾ, ನೇಪಾಳ, ಜಾವಾ, ಜಪಾನ್ ಮತ್ತು ಚೀನಗಳಲ್ಲಿ ಸಂಚಾರಮಾಡಿದನೆಂಬ ವರದಿಯಿದೆ. ತುರ್ಕಸ್ತಾನದಲ್ಲಿ ಅವನಿಗೆ ಪಾಯಿಜಮಾ ತೊಡಿಸಲಾಯಿತು. ನೇಪಾಳದಲ್ಲಿ ಅವನನ್ನು 'ರಾಕ್ಷಸಾವತಾರ'ವೆಂದು ತಿಳಿದರು! ಸಯಾಮದಲ್ಲಿ ಅವನು ತನ್ನ ನಂಬಿಗೆಯ ವಾಹನ ಇಲಿಯನ್ನು ಬಿಟ್ಟುಕೊಡಬೇಕಾಯ್ತು. ಕಾಂಬೋದಿಯಾದಲ್ಲಿ ಅವನು ಸಂಪೂರ್ಣ ಬೌದ್ಧ ದೀಕ್ಷೆಯನ್ನು ಪಡೆದನು. ಜಪಾನದಲ್ಲಿ ಈ ಆಜೀವ ಬ್ರಹ್ಮಚಾರಿ ಮೋಹಪರವಶನಾಗಿ ವಿವಾಹಬದ್ಧನಾದರೆ, ಚೀನದಲ್ಲಿ ಆಧ್ಯಾತ್ಮವಾದಿಯಾಗಿದ್ದಾನೆ.

ತುರ್ಕಸ್ತಾನದಲ್ಲಿ ಒಂದು ಪ್ರಾಚೀನ ಭಿತ್ತಿಚಿತ್ರದಲ್ಲಿ ಅವನು ಸೊಂಟಕ್ಕೆ ಹುಲಿಯ ಚರ್ಮ ಸುತ್ತಿ ನಶ್ಯದ ಬಣ್ಣದ ಪಾಯಿಜಮಾ ಧರಿಸಿದ್ದಾನೆ. ಅಲ್ಲಿಯ 'ಬಾಝಾಕಲಿಕ್' ಗುಹೆಗಳಲ್ಲಿಯ ಗಣಪತಿ 'ವರಾಹಮುಖಿ'ಯಾಗಿ ಕೈಯಲ್ಲಿ ಸೂರ್ಯ-ಚಂದ್ರಧಾರಿಯಾಗಿರುವನು. ಇಲ್ಲಿ ಅವನನ್ನು ಗುರುತಿಸುವುದು ಕಷ್ಟ. ಆದರೆ ಇದ್ದೇ

ಚಿತ್ರದಲ್ಲಿ ಈಶ್ವರ ಮತ್ತು ಕಾರ್ತಿಕೇಯರ ಚಿತ್ರಗಳಿರುವುದರಿಂದ ಗಣಪತಿಯ ಪತ್ತೆ ಹಚ್ಚಬಹುದು.

ಸಯಾಮದಲ್ಲಿ ಸಿಕ್ಕ ಒಂದು ಪ್ರಾಚೀನ ಗ್ರಂಥದ ಪ್ರಕಾರ, ಅಲ್ಲಿ ಗಣಪತಿ ತನ್ನ ಇಲಿಯನ್ನು ಬಿಟ್ಟುಕೊಟ್ಟು, ಕೂರ್ಮ ಅಥವಾ ಆಮೆಯನ್ನು ಏರಬೇಕಾಯಿತು. ಕೈಯಲ್ಲಿ ಅನೇಕಾನೇಕ ಆನೆಗಳನ್ನೂ ಹಿಡಿದಿದ್ದಾನೆ. ಅದೇ ದೇಶದಲ್ಲಿ ಒಂದೇ ಮುಕುಟ ಮತ್ತು ನಾಲ್ಕು ಮೂರ್ತಿಗಳು ಒಂದಕ್ಕೊಂದು ಬೆನ್ನುಮಾಡಿರುವ ಗಣಪತಿಯ ವಿಗ್ರಹ ಸಿಗುತ್ತದೆ. ಬಹುಶಃ ಇಲ್ಲಿ ಅವನು ದಿಕ್ಪಾಲಕನಾಗಿರಬೇಕು. ಕಾಂಬೋದಿಯಾದಲ್ಲಂತೂ ಗಣಪತಿ ಸಂಪೂರ್ಣ ಬೌದ್ಧನಾಗಿದ್ದಾನೆ. ಬುದ್ಧನಂತೆ ವೇಷವಿದ್ದ, ಪದ್ಮಾಸನಹಾಕಿದ, ಬಲಗಾಲಮೇಲೆ ಧರ್ಮಚಕ್ರವಿರುವ ಮತ್ತು ಭೂಸ್ಪರ್ಶಮಾಡಿದ ಮೂರ್ತಿಯೊಂದು-ಲಭಿಸಿದೆ.

ನೇಪಾಳದಲ್ಲಿ ಗಣಾಧಿಪನಿಗೆ ಐದು ಮುಖಗಳಿವೆ. ಐದೂ ಮುಖಗಳಿಗೆ ಬೇರೆ ಬೇರೆ ಬಣ್ಣಗಳಿವೆ. ಬಹುಶಃ ಪಂಚಮಹಾಭೂತಗಳನ್ನು ಇವು ಸಂಕೇತಿಸುತ್ತಿರಬೇಕು. ಆದರೆ ಇಲ್ಲಿ ದೊರೆಯುವ ಮತ್ತೊಂದು ಮೂರ್ತಿಯಲ್ಲಿ ಅವನ ಸ್ಥಿತಿ ತೀರ ವಿಚಿತ್ರವಾಗಿದೆ. ಭದ್ರಕಾಲ ಮತ್ತು ಮಂಜುಶ್ರೀ ಈ ಬೌದ್ಧದೇವತೆಗಳ ಕಾಲಕೆಳಗೆ ಆತ ತುಳಿಯಲ್ಪಡುತ್ತಿದ್ದಾನೆ. ಬಹುಶಃ ಗಣಪತಿಯ ರಾಕ್ಷಸೀ ಸ್ವರೂಪವಾಗಿರಬಹುದು ಅದು. ಆದರೆ ಮುಖದಲ್ಲಿ ಅಭಯವಿದೆ. ಬಹುಶಃ ಅದು ತನ್ನ ಭಕ್ತರಿಗೆ ಹೀಗೆ ಹೇಳುತ್ತಿರಬಹುದು—"ತಾಳಿ, ನಾನು ಈ ರೀತಿ ತುಳಿಯಲ್ಪಟ್ಟರೂ ನಾಶವಾಗಲಿಕ್ಕಿಲ್ಲ. ಕೊನೆಗಾದರೂ ಎಲ್ಲರೂ ನನ್ನ ಪೂಜೆ ಮಾಡಲೇಬೇಕು—"

ಜಾವಾದಲ್ಲಿ ಅವನು ದ್ವಿರೂಪಧಾರಿಯಾಗಿದ್ದಾನೆ. ಕಾರಣ ಅವನಿಗೆ ಅಲ್ಲಿಯ 'ಯಕ್ಷ'ನ ಮೈತ್ರಿಯಾಗಿದೆ! ಮೂರ್ತಿಯ ಮುಂಭಾಗ ಗಣಪತಿ, ಹಿಂಭಾಗ ಘೋರಾಕೃತಿ ಯಕ್ಷನದು. ಜಾವಾ, ಬೋರ್ನಿಯೊ, ಬಾಲಿ ದ್ವೀಪಗಳಲ್ಲಿ 'ಯಕ್ಷ' ಸಹ ಗಣಪತಿಯಂತೆ ವಿಘ್ನನಾಶಕ ದೇವತೆ ಎಂದು ಖ್ಯಾತಿಯಿದೆ. ಅವರು ಈ ಹೊಸ ದೇವತೆಗೂ ಸ್ವಾಗತ ಬಯಸಿ ಒಂದೇ ಸಮಾನ ಗುಣವುಳ್ಳ ಈ ಎರಡೂ ದೇವತೆಗಳನ್ನು ಒಂದೇ ವಿಗ್ರಹದಲ್ಲಿ ಅಳವಡಿಸಿದರು. ಇವು ಹನ್ನೆರಡು ದ್ವೀಪಗಳಲ್ಲಿ ನದೀತೀರದ ಅಪಾಯ ಸ್ಥಳಗಳಲ್ಲಿ ಪ್ರತಿಷ್ಠಾಪಿಸಲ್ಪಟ್ಟಿವೆ.

ಜಪಾನಿಗೆ ಹೋದಾಗಂತೂ ಗಣಪತಿ ಬ್ರಹ್ಮಚರ್ಯತ್ಯಾಗ ಮಾಡಿ ಗ್ರಹಸ್ಥಾಶ್ರಮಿಯಾದನಂತೆ. ಅವನು ಮದುವೆಯಾದದ್ದಾದರೂ ಬೇರಾರೂ ಅಲ್ಲದೇ, ಸ್ವತಃ ಬೋಧಿಸತ್ವ*ನನ್ನೆ! ಇಲ್ಲಿಯ ಮೂರ್ತಿ ಬೇರೆಯೇ ವೈಶಿಷ್ಟ್ಯವುಳ್ಳದ್ದು. ಒಂದೇ ಗಣಪತಿಯಲ್ಲದೇ, ದಂಪತಿಗಳಾದ "ಗಣೇಶ—ಗಣೇಶಿ"ಯರ ಜೋಡಿಯಿದು. ಈ ದಂಪತಿಗಳ ಪೂಜೆಯನ್ನು ಬಹಳ ಗುಪ್ತವಾಗಿ ಮಾಡಲಾಗುತ್ತದೆ. ಇಷ್ಟೇ ಅಲ್ಲ. ಮೂರ್ತಿ ಸದಾ ಆಚ್ಛಾದಿತವಾಗಿದ್ದು, ಕೇವಲ ಪೂಜಾ ಸಮಯದಲ್ಲಿ ಆವರಣ ತೆಗೆಯುತ್ತಾರೆ. ಕಾರಣ ಈ ದಂಪತಿ-ಮೂರ್ತಿಯ ದೇಗುಲಗಳು ಕಾಣಸಿಗುವುದಿಲ್ಲ.

ಈ ವಿವಾಹವನ್ನು ಕುರಿತು ಸ್ವಾರಸ್ಯಮಯ ಕತೆ, ಬೌದ್ಧ ವಿನಾಯಕ ಸ್ತೋತ್ರದಲ್ಲಿದೆ. ಶಿವನಿಗೆ ಒಟ್ಟು ಮೂರು ಸಾವಿರ ಮಕ್ಕಳಿದ್ದರು. ಅವರಲ್ಲಿ ಒಂದು ಸಾವಿರ ಮಕ್ಕಳು ಪರೋಪಕಾರಿಗಳೂ ಸಾತ್ವಿಕರೂ ಆಗಿದ್ದರು. ಅವರ ಮುಖ್ಯಸ್ಥ 'ಸೇನಾಯಕ' ನೆಂಬುವನು. ಆದರೆ ಉಳಿದೆಲ್ಲ ಮಕ್ಕಳು ರಾಕ್ಷಸರೇ ಆಗಿದ್ದರು. ಅವರ ಒಡೆಯನೇ 'ವಿನಾಯಕ'. ಈ ವಿನಾಯಕ ಮತ್ತು ಅವನ ಸಂಗಡಿಗರಿಂದ ಜನರು ಸಂತ್ರಸ್ತರಾಗಿ ಬೋಧಿಸತ್ವನಿಗೆ ಮೊರೆಹೋದರು. ಅವನು ಜನರಿಗೆ ವಿನಾಯಕನ ಉಪದ್ರವವನ್ನು ನಾಶ ಮಾಡುವ ಆಶ್ವಾಸನವನ್ನಿತ್ತು, ತಾನೊಬ್ಬ ಸುಂದ

---

* ಬೋಧಿಸತ್ವರು ಎಂದರೆ ಬುದನ ಹಿಂದಿನ ಅವತಾರಗಳು

ರಿಯ ರೂಪಧರಿಸಿ ವಿನಾಯಕನಲ್ಲಿಗೆ ಹೋದನು. ಅವನನ್ನು ಹೀಗೆ ಕಂಡ ವಿನಾಯಕನು ಮೋಹಿಸಿ ಮದುವೆಯಾಗಬಯಸಿದ. ಸುಂದರಿ ರೂಪಧಾರಿ ಬೋಧಿಸತ್ವಒಪ್ಪಿದ. ಆದರೆ ಅವಳ ಹೇಳಿಕೆ ಯಂತೆ ವಿನಾಯಕ ಬೌದ್ಧಧರ್ಮ ಸ್ವೀಕರಿಸಿದ್ದಲ್ಲದೆ ಸಾತ್ವಿಕ ಮಾರ್ಗವನ್ನು ಅನುಸರಿಸಬೇಕಾಯಿತು. ಅಂದಿನಿಂದ ಈ ಗಣೇಶ-ಗಣೇಶಿಯರು ಆದರ್ಶಪ್ರಾಯರಾದರು.

ಚೀನದಲ್ಲಿ ಕೂಡ 'ಗಣೇಶ-ಗಣೇಶಿ'ಯ ಮೂರ್ತಿಗಳಿವೆ. ಆದರೆ ಈ ದಾಂಪತ್ಯಕ್ಕೆ ಒಂದು ಆಧ್ಯಾತ್ಮಿಕ ಅರ್ಥವಿದೆ. 'ಗಣೇಶ' ಅಂದರೆ 'ಬ್ರಹ್ಮ', 'ಗಣೇಶಿ'—'ಮಾಯೆ' ಅವರಿಬ್ಬರೂ ನಗುತ್ತ ಪರಸ್ಪರ ಆಲಿಂಗನದಲ್ಲಿದ್ದಾರೆ. ಇಂಥ ಮಿಲನವನ್ನು ತಮ್ಮ ಸಂಸಾರಗಳಲ್ಲಿ ಕಾಣುವುದೇ ಮಾನವನ ನಿಜವಾದ ಆಧ್ಯಾತ್ಮಿಕ ರಹಸ್ಯ.

ಈ ದಂಪತಿಗಳಲ್ಲಿ 'ಗಣೇಶಿ'ಯ ಬಾಯಿ ತೆರೆದಿದೆ. ತದ್ವಿರುದ್ಧ 'ಗಣೇಶ'ನದು ಮುಚ್ಚಿದೆ. 'ಅಹಂ'— ಈ ಶಬ್ದದುಚ್ಚಾರವನ್ನು ಮಾಯಾ ಮತ್ತು ಬ್ರಹ್ಮರು ಕೂಡಿ ಮಾಡುತ್ತಿರುವಂತಿದೆ ಈ ಪ್ರತೀಕ. 'ಅಹಂ' ದಲ್ಲಿಯ 'ಅ' ವನ್ನು ಉಚ್ಚರಿಸುವಾಗ ಬಾಯಿ ತೆರೆಯಬೇಕು. ಕಾರಣ ಗಣೇಶಿಯ ಬಾಯಿ ತೆರದಿದೆ. ಆದರೆ ಗಣೇಶ— 'ಹಂ' ಉಚ್ಚರಿಸಿದ್ದಾನೆ— ಅವನ ಬಾಯಿ 'ಹಂ' ಎಂದು ಮುಚ್ಚಿರುತ್ತದೆ. ಅದೆಷ್ಟು ಘನತರ ಆಧ್ಯಾತ್ಮಿಕ ತತ್ವವನ್ನು ಈ ಪ್ರತೀಕ ಪ್ರದರ್ಶಿಸುತ್ತದೆ! 'ಅಹಂ'— ನಾನೊಬ್ಬನೇ ಎನ್ನುವ ಅಧಿಕಾರ ಕೇವಲ ಬ್ರಹ್ಮನಿಗಿಲ್ಲ. ಅವನಿಗೆ ಮಾಯಾ ಮಿಲನದ ಅವಶ್ಯಕತೆ ಅನಿವಾರ್ಯ ವಿಶ್ವದ ನಿಜವಾದ ಪೂರ್ಣತೆಗೆ ಈರ್ವರ ಮಿಲನವೇ ಆಧಾರವಾಗಿದೆ

ಈ ಪ್ರತೀಕವನ್ನು ಮಾಡಿದ ಶ್ರೇಯಸ್ಸು ಜಪಾನದ ಶ್ರೇಷ್ಠ ಬೌದ್ಧ-ಭಿಕ್ಷು 'ಕೊಬಾದಾಯ'ನಿಗೆ ಸಲ್ಲುತ್ತದೆ. ಅವನು ಚೀನದ 'ಹುಯಿಕಚ್'— ಎಂಬ ಗುರುವಿನಿಂದ ಭಾರತದಲ್ಲಿಯ ಗೂಢ ಧರ್ಮಗ್ರಂಥದ ಅರ್ಥ ಮತ್ತು ಮಂತ್ರ ವಿದ್ಯೆಯನ್ನು ಕಲಿತನು. ಜೊತೆಗೆ ಅವನಿಗೆ ಮೇಲೆ ಹೇಳಿದ—'ಮಾಯಾಬ್ರಹ್ಮ-ಮಿಲನ'ದ ತತ್ವದ ಅರಿವೂ ಆಯಿತು.

ಭಾರತದ ಸಾಂಸ್ಕೃತಿಕ ಮತ್ತು ಧಾರ್ಮಿಕ ಜೀವನದಲ್ಲಿ ಗಣಪತಿಯ ಸ್ಥಾನ ವೈಶಿಷ್ಟ್ಯಪೂರ್ಣ ವೆಂಬುದರಲ್ಲಿ ಸಂದೇಹವೇ ಇಲ್ಲ. ಅವನ ಸ್ವರೂಪದಲ್ಲೇ ಒಂದು ಅದ್ಭುತತೆಯಿದ್ದರೆ, ಅವನ ಕರ್ತೃತ್ವಶಕ್ತಿ ಅಗಾಧವಾಗಿದೆ. ಅವನ ಕೃಪೆ ವಿಲಕ್ಷಣ ಸಾಮರ್ಥ್ಯಶಾಲಿ. ಆದ್ದರಿಂದಲೇ ಉಳಿದ ದೇವತೆಗಳಿಗಿಂತ ಅವನಿಗೆ ಅತ್ಯಧಿಕ ಅಂತರ್‌ರಾಷ್ಟ್ರೀಯ ಖ್ಯಾತಿ ದೊರೆತಿದೆ. ★

(ವಿವಿಧ ಮೂಲಗಳಿಂದ)



ಶೀತಜಿಯವರು ಒಂದು ರೇಡಿಯೊ ಕೊಂಡರು. ಎರಡು ಮೂರು ದಿನಗಳ ನಂತರ ಅವರು ರೇಡಿಯೊ ಅಂಗಡಿಗೆ ಹೋಗಿ ರೇಡಿಯೊ ಸರಿಯಾಗಿಲ್ಲ ಎಂದು ತಕರಾರು ಮಾಡಿದರು.

"ಯಾಕೆ? ರೇಡಿಯೊದಲ್ಲಿ ಸ್ಪಷ್ಟವಾಗಿ ಶಬ್ದ ಕೇಳಿಸುವುದಿಲ್ಲವೆ?" ಎಂದು ಅಂಗಡಿಕಾರ ಕೇಳಿದ.

"ಸರಿಯಾಗಿ ಕೇಳಿಸುತ್ತದೆ. ಆದರೆ ಅದರಲ್ಲಿರುವ ದೀಪ ಬಲು ಚಿಕ್ಕದು. ಅದರ ಬೆಳಕಿನಲ್ಲಿ ನನಗೆ ಓದಲಿಕ್ಕಾಗುವುದಿಲ್ಲ."

**ಅಮೇರಿಕದಲ್ಲಿರುವ ಒಬ್ಬ ಭಾರತೀಯ ಕಂಡ ಅಮೇರಿಕದ ಹೊಸ ಹುಚ್ಚಿನ ವರದಿ**



# ಅಮೇರಿಕನ್ ಕಟಿರೇಷೆ

ಅನಂತ ಲಾಭಸೇಟವಾರ

ರಾಮಾಯಣದಲ್ಲಿ ಹೇಳಿರುವ ಲಕ್ಷ್ಮಣರೇಷೆ, ಭೂಗೋಲದಲ್ಲಿ ಬರುವ ಭೂಮಧ್ಯ ರೇಷೆಗಳು ನಿಮಗೆ ಪರಿಚಯವಿರಬಹುದು. ಭಾಗ್ಯರೇಷೆಯ ವಿಚಾರ ಕೂಡ ನಿಮಗೆ ಗೊತ್ತಿರಬಹುದು. ಆದರೆ ಕಟಿರೇಷೆ-ಗೊತ್ತಿದೆಯೆ ನಿಮಗೆ ?

ಈಗೀಗಿನ ನವ್ಯಕಥೆಗಳನ್ನು ಓದುವ ಅಭ್ಯಾಸ ನಿಮಗಿದ್ದರೆ ನಿಮಗೆ ಈ ಕಟಿರೇಷೆ ತೀರ ಅಪರಿಚಿತವಾಗಿರಲಾರದು. ಹೇಗೆ ರಶಿಯನ್ ಲೇಖಕನಿಗೆ ಯುದ್ಧ ವಿಚಾರವನ್ನು ಬಿಟ್ಟು ಕಾದಂಬರಿಯನ್ನು ಬರೆಯಲು ಬರುವುದಿಲ್ಲವೋ ಹಾಗೆಯೆ ನವ್ಯಕಥಾ ಲೇಖಕನಿಗೆ ಕಟಿರೇಷೆಯನ್ನು ವರ್ಣಿಸದಿದ್ದರೆ ತನ್ನ ನವ್ಯಕಥೆಗೆ ಪೂರ್ಣತ್ವ ಪ್ರಾಪ್ತವಾಗುವುದಿಲ್ಲ ಎಂದು ಅನಿಸುತ್ತದೆ.

ಅಮೇರಿಕದಲ್ಲಿ ಕಟಿರೇಷೆ ( waist line ) ಎಂಬುದು ಅತ್ಯಂತ ಪ್ರಚಲಿತವಾಗಿರುವ ಶಬ್ದ. ಅಮೇರಿಕದ ಒಬ್ಬನನ್ನು ನೀವು ಊಟಕ್ಕೆ ಕರೆದು "ಇನ್ನಿಷ್ಟು ಪಕ್ವಾನ್ನ ತೆಗೆದುಕೊಳ್ಳಿ" ಎಂದು ಆಗ್ರಹ ಮಾಡಿದರೆ ಆತನೇನೂ ತನ್ನ ತಾಟನ್ನು ಮಣೆಯ ಕೆಳಗೆ ಸರಿಸುವುದಿಲ್ಲ. ತಾಟಿನ ಮೇಲೆ ಎರಡೂ ಕೈಗಳನ್ನು ಅಡ್ಡ ಹಿಡಿದು "ಬೇಡ ಬೇಡ" ಎನ್ನುವುದಿಲ್ಲ. ನಿಮ್ಮ ಆಗ್ರಹದಿಂದ ಪಾರಾಗುವ ಈ ಉಪಾಯ ಮಾವನ ಮನೆಗೆ ಬಂದಿರುವ ನಮ್ಮ ದೇಶದ ಅಳಿಯಂದಿರಿಗಷ್ಟೆ ಗೊತ್ತು. ಅಮೇರಿಕನ್ನನೋ ತನ್ನನ್ನು ಉಳಿಸಿಕೊಳ್ಳಲು ಒಂದೇ ಮಾತು ಹೇಳುತ್ತಾನೆ: "ನನ್ನ ಕಟಿರೇಷೆಯ ಕಾಳಜಿಯನ್ನು ನಾನು ತೆಗೆದುಕೊಳ್ಳಬೇಕು. (I have to watch my waist-line)" ಅವನ ಬಾಯಿಂದ ಈ ಮಾತು ಬಂತೆಂದರೆ ಮುಂದೆ ಅಪೀಲೇ ಇಲ್ಲ.

ಇದನ್ನೇ ಇನ್ನೊಂದು ಬಗೆಯಲ್ಲಿ ಹೇಳುವುದಾದರೆ ಅಮೇರಿಕನ್ ಮನುಷ್ಯ ಹೆಚ್ಚು ತಿಂದು ಲಠ್ಠನಾಗುವುದಕ್ಕೆ ಅಂಜುತ್ತಾನೆ. ಮನುಷ್ಯ ಲಠ್ಠ ಎಂದು ಯಾವಾಗ ಅನಿಸಿಕೊಳ್ಳುತ್ತಾನೆ ? ಅವನ ಹೊಟ್ಟೆಯ ಸುತ್ತಳತೆ ಹೆಚ್ಚಾದಾಗ; ಅಂದರೆ ಅವನ ಕಟಿರೇಷೆ ವಿಸ್ತಾರವಾದಾಗ.

ಕ್ರುಶ್ಚೇವರೊಮ್ಮೆ " ನಮ್ಮ ಏಳು ಟನ್ ಭಾರದ ಅಗ್ನಿಬಾಣಗಳೆದುರು ಅಮೇರಿಕನ್ ಅಗ್ನಿ ಬಾಣಗಳು ದ್ರಾಕ್ಷೆಯಂತೆ ಚಿಕ್ಕವಾಗಿವೆ " ಎಂದಿದ್ದರು. ಈ ಮಾತನ್ನು ಅಥವಾ ಅಂತರಿಕ್ಷ

ಯಾನ ಸ್ಪರ್ಧೆಯಲ್ಲಿ ರಶಿಯವು ಅಮೇರಿಕವನ್ನು ಸೋಲಿಸಿತು ಎಂಬ ಮಾತನ್ನು ಹೇಳಿದಾಗ ಅಮೇರಿಕನ್ ಮನುಷ್ಯ ಬಹಳ ದುಃಖಪಟ್ಟುಕೊಳ್ಳಲಿಕ್ಕಿಲ್ಲ. ಆದರೆ ಅದೇ ಅವನಿಗೆ "ನಿಮ್ಮ ಕಟಿರೇಷೆ ಬೆಳೆಯುತ್ತ ನಡೆದಿದೆಯಲ್ಲ!" ಎನ್ನಿ, ಆಗ ಅವನಿಗೆ ವಿಪರೀತ ದುಃಖವಾಗುವುದು. ನಾವು ಮತ್ತು ಅಮೇರಿಕನ್ನರು ತಕ್ಕಡಿಯ ಕಡೆ ನೋಡುವ ದೃಷ್ಟಿ ತುಂಬ ಭಿನ್ನವಾಗಿದೆ. ತಕ್ಕಡಿಯ ಮುಳ್ಳು ಬಲಕ್ಕೆ ತಿರುಗುವುದನ್ನೆ ನಾವು ಆತುರದಿಂದ ನಿರೀಕ್ಷಿಸುತ್ತಿದ್ದರೆ ಅವರು ಮುಳ್ಳು ಎಡಕ್ಕೆ ತಿರುಗುವುದನ್ನು ನಿರೀಕ್ಷಿಸುತ್ತಾರೆ. ನಮ್ಮ ತೂಕ ಒಂದಿಷ್ಟು ಕಡಿಮೆಯಾದರೆ ನಾವು ನೆಟ್ಟಗೆ ಆಸ್ಪತ್ರೆಯ ದಾರಿ ಹಿಡಿಯುತ್ತೇವೆ. ಅಮೇರಿಕನ್ ತೂಕ ಕಡಿಮೆಯಾದದ್ದು ತಿಳಿದಾಗ ಆನಂದದಿಂದ ಕುಣಿಯತೊಡಗುತ್ತಾನೆ.

ಹೆಂಡತಿಯೊಡನೆ ಜಗಳಾಡಿ ಬಂದಿದ್ದರೆ ನಾವು ಸಂಜೆ ಕಚೇರಿಯಿಂದ ಮನೆಗೆ ಹೋಗುವಾಗ ಒಂದು ಹೂವಿನ ಮಾಲೆಯನ್ನು ಹಿಡಿದುಕೊಂಡು ಹೋದರೆ ಅವಳ ಮುಖ ಅರಳುತ್ತದೆ. ಅಮೇರಿಕನ್ ಮನುಷ್ಯ ಇಷ್ಟು ಕೂಡ ಮಾಡಬೇಕಾಗುವುದಿಲ್ಲ. "ಇತ್ತಿತ್ತಲಾಗಿ ನೀನು ಎಷ್ಟು ಕೃಶಾಂಗಿಯಾಗಿ ಕಾಣಿಸುತ್ತಿರುವಿಯಲ್ಲ" ಎಂದು ಎಂದು ಆತ ಹೇಳಿದರೆ ಸಾಕು, ಅವನ ಹೆಂಡತಿಯ ಮುಖ ಎಷ್ಟೇ ಬಿಗಿದಿದ್ದರೂ ತತ್‍ಕ್ಷಣ ಅರಳುತ್ತದೆ. ತಾನು ಕೃಶಾಂಗಿ ಎಂದು ನಾಲ್ಕಾರು ಜನರ ಬಾಯಲ್ಲಿ ಕೇಳಿದಾಗ ಅಮೇರಿಕನ್ ಸ್ತ್ರೀಗೆ ಸ್ವರ್ಗ ಮೂರೇ ಬೆರಳುಳಿಯುತ್ತದೆ. ಕೃಶಾಂಗಿ ಎಂಬ ಸಂಭೋಧನೆಯಿಂದ ಜಗತ್ತಿನಲ್ಲಿ ಇನ್ನಾವ ಸ್ತ್ರೀಗೂ ಆಗದಷ್ಟು ಆನಂದ ಅಮೇರಿಕನ್ ಸ್ತ್ರೀಗಾಗುತ್ತದೆ. ಪತಿಯ ಚರಣಗಳ ಆಶ್ರಯವಿದ್ದರೆ ಭಾರತೀಯ ಸ್ತ್ರೀ ತಾನು ಸುಖಿಯೆಂದು ಕೊಳ್ಳುತ್ತಾಳೆ. ಗಂಡ ವಿಲಾಸಪ್ರಿಯನಾಗಿದ್ದರೆ ಜೀವಿಸಿದ್ದು ಸಾರ್ಥಕವಾಯಿತು ಎಂದು ಫ್ರೆಂಚ್ ಸ್ತ್ರೀ ತಿಳಿಯುತ್ತಾಳೆ. ಆದರೆ ಅಮೇರಿಕನ್ ಸ್ತ್ರೀಯ ಧನ್ಯ ಜೀವನದ ಕಲ್ಪನೆಯೆ ಬೇರೆ. ಯಾವ ಪುರುಷನೇ ಆಗಲಿ, ಮಾತಾಡುತ್ತಾಡುತ್ತ ಅವಳು ಕೃಶಾಂಗಿಯಾಗಿರುವುದನ್ನು ಬಣ್ಣಿಸಿದರೆ ಅವಳು ಜೀವನದ ಸಕಲ ಭಾಗ್ಯವೂ ಬಂದಂತೆ ಸುಖಿಯಾಗುತ್ತಾಳೆ. ಹೀಗಿರುವುದರಿಂದಲೇ ಜಗತ್ತಿನ ಉಳಿದೆಲ್ಲ ಕಡೆಗಳ ಸ್ತ್ರೀಯರಿಗಿಂತ ಅಮೇರಿಕನ್ ಸ್ತ್ರೀಯರು ತಮ್ಮ ಕಟಿರೇಷೆಯ ಬಗ್ಗೆ ಅಷ್ಟೊಂದು ಜಾಗ್ರತೆಯನ್ನು ವಹಿಸುತ್ತಾರೆ. ಅಮೇರಿಕದಲ್ಲಿ ಸ್ಥೂಲತ್ವದ ಭೀತಿ ಹೆಂಗಸರಿಗೆ ಮಾತ್ರ ಇಲ್ಲ, ಗಂಡಸರಿಗೂ ಇದೆ. ಗಂಡಸರು ಕೂಡ ಕೃಶಕಾಯರಾಗಿರಲು ನಾನಾ ಉಪಾಯಗಳನ್ನು ಯೋಜಿಸುತ್ತಾರೆ.

ಯಾವುದೋ ಒಂದು ಹಬ್ಬದ ದಿನ ನಾನೊಬ್ಬ ಮಾಸ್ತರರ ಮನೆಗೆ ಊಟಕ್ಕೆ ಹೋಗಿದ್ದೆ. ಹಬ್ಬಕ್ಕಾಗಿ ಬಗೆಬಗೆಯ ಅಡಿಗೆ ಮಾಡಿದ್ದರು. ಮಾಡಿದ್ದರಲ್ಲಿ ಕುದಿಸಿದ ಬಟಾಟೆಯ ಪದಾರ್ಥವೂ ಇತ್ತು. ಅಮೇರಿಕದಲ್ಲಿ ಹಬ್ಬದ ಊಟದಲ್ಲೂ ಈ ಪದಾರ್ಥ ಇರಲೇಬೇಕು.

ನಮ್ಮೆಲ್ಲರ ಊಟ ಮುಗಿದರೂ ಆ ಮಾಸ್ತರರ ೧೫-೧೬ ವರ್ಷದ ಹುಡುಗನ ಊಟ ಮುಗಿಯಲಿಲ್ಲ. ಅವನಿಗೆ ಇನ್ನೂ ಬಟಾಟೆಯ ಪದಾರ್ಥ ಬೇಕಿತ್ತು. ಆದರೆ ಬಟಾಟೆಗೂ ಲಠ್ಠತನಕ್ಕೂ ಇರುವ ಸಂಬಂಧ ಚೆನ್ನಾಗಿ ಗೊತ್ತಿದ್ದ ಮಾಸ್ತರರು "ಛೆ! ಛೆ! ಬಟಾಟೆಯನ್ನು ಹೆಚ್ಚಾಗಿ ತಿನ್ನಬಾರದು. ಬಹಳ ಬಟಾಟೆ ತಿಂದು ಲಠ್ಠಾಗಬೇಕೆನ್ನುವಿಯೇನು?" ಎಂದು ಮಗನಿಗೆ ಹೇಳಿ ಆಮೇಲೆ ನೆರೆಮನೆಯ ಮಿ. ಜಾನರ ಆದರ್ಶವನ್ನು ಅವನ ಮುಂದಿಟ್ಟರು. "ನೋಡು ಅವರಿಗೀಗ ೫೦ ವರ್ಷ. ಆದರೂ ಹೇಗೆ ತೆಳ್ಳಗೆ ನೂಲಿನಂತಿದ್ದಾರೆ" ಜಾನರ ತೆಳ್ಳನ್ನ ದೇಹ ಆ ಬೀದಿಯವರಿಗೆಲ್ಲ ಭೂಷಣಪ್ರಾಯವಾಗಿತ್ತು.

ಅಮೇರಿಕದ ತಂದೆ-ತಾಯಿಗಳು ಮಕ್ಕಳ ತಲೆಯ ಕಡೆಗಷ್ಟೇ ಲಕ್ಷ್ಯಪೀಯದೆ ಅವರ ಕಟಿರೇಷೆಯ ಬಗ್ಗೂ ಅಷ್ಟೇ ಲಕ್ಷ್ಯ ಪೂರೈಸುತ್ತಾರೆಂದು ಆ ದಿನ ನನಗೆ ತಿಳಿಯಿತು.

ಆದರೆ ಭಾರತದಲ್ಲಿ ಸ್ಥೂಲಕಾಯರಾಗುವುದು ಎಷ್ಟು ಕಠಿನವೋ ಅಷ್ಟೇ ಅಮೇರಿಕದಲ್ಲಿ ಬಡಕಲ ಶರೀರದವನಾಗಿರುವುದೂ ದುಷ್ಕರವಾಗಿದೆ. ಅತುಲ ಸಮೃದ್ಧಿಯ ಫಲ ಅದು. ಅನಿರ್ಬಂಧವಾಗಿ ತಿನ್ನಲು ತೊಡಗಿದರೆ ಅಮೇರಿಕನ್ನರ ದೇಹ ಅನಿರ್ಬಂಧವಾಗಿ ಸ್ಥೂಲವಾಗ ತೊಡಗುತ್ತದೆ. ನನ್ನ ದೇಹಯಷ್ಟಿಯೇನೂ ಭಾರತದ ಸೌಂದರ್ಯಶಾಸ್ತ್ರಕ್ಕೆ ಸುಸಂಗತವಾಗಿರಲಿಲ್ಲ. ನನ್ನ ತಾಯಿ ನನ್ನನ್ನು 'ಸುದಾಮ' ನೆನ್ನುತ್ತಾಳೆ. ಬೇಸಿಗೆ ರಜೆಯಲ್ಲಿ ನಾನು ಮನೆಗೆ ಹೋದಾಗ ಅವಳು ನನ್ನ ಮೈಯಲ್ಲಿ ಮಾಂಸವೇನಾದರೂ ಹೆಚ್ಚಿದೆಯೆ ಎಂದು ನೋಡುತ್ತಾಳೆ. ತೀರ ಇತ್ತೀಚಿನ ವರೆಗೆ ನನ್ನ ಮನೆಯಲ್ಲಿ ನಾನು ಎಲುವು ಚರ್ಮದವನೊ ಅಥವಾ ಕೃಶಾಂಗನೊ ಎಂಬುದು ವಾದಗ್ರಸ್ತ ಪ್ರಶ್ನೆಯಾಗಿತ್ತು. ಅಮೇರಿಕಕ್ಕೆ ನಾನು ಬಂದ ಮೇಲೆ ನನ್ನ ಕೃಶ ಶರೀರ ಒಂದು ಹೀನತ್ವವೆನಿಸುವ ಬದಲು ಅಭಿಮಾನದ ಸಂಗತಿಯಾಯಿತು.

ಒಮ್ಮೆ ನನ್ನ ಪ್ರೊಫೆಸರರ ಜೊತೆ ಊಟಕ್ಕೆ ಕುಳಿತಿದ್ದೆ. ಊಟದ ಕೊನೆಯಲ್ಲಿ ಸಾಮಾನ್ಯವಾಗಿ ಸೇವಿಸುವ ಸಿಹಿ ಪದಾರ್ಥವನ್ನು ಅವರು ಮುಟ್ಟಲಿಲ್ಲ. ಯಾಕೆ ಎಂದು ಕೇಳಿದರೆ "ನಾನು ನಿನ್ನಂತೆ ಕೃಶಾಂಗನಾಗಿರಬೇಕಾಗಿದೆ" ಎಂದು ಅವರು ಉತ್ತರವಿತ್ತರು. ನನ್ನ ಶರೀರ ಭಾರತೀಯ ಸೌಂದರ್ಯಕ್ಕೆ ವಿಸಂಗತವಾಗಿದ್ದರೂ ಅಮೇರಿಕನ್ ಸೌಂದರ್ಯಶಾಸ್ತ್ರಕ್ಕೆ ಅನುಗುಣವಾಗಿದೆಯಲ್ಲ ಎಂಬ ವಿಚಾರ ಬಂದು ನಾನು ಮನದಲ್ಲೆ ಬ್ರಹ್ಮದೇವನನ್ನು ಅಭಿನಂದಿಸಿದೆ.

ಸ್ತ್ರೀಯರು ಎಂದ ಮೇಲೆ ಅಲ್ಲಿಂದಿಲ್ಲಿಯವರೆಗೆ ಎಲ್ಲರೂ ಒಂದೇ. ವಿಜ್ಞಾನಶಾಸ್ತ್ರದಲ್ಲಿ ನ್ಯೂಟನ್ನನ ಗುರುತ್ವಾಕರ್ಷಣ ಸಿದ್ಧಾಂತ ಎಷ್ಟು ಸತ್ಯವೋ ವ್ಯವಹಾರಶಾಸ್ತ್ರದಲ್ಲಿ "ಇಬ್ಬರು ಅಥವಾ ಹೆಚ್ಚು ಸ್ತ್ರೀಯರು ಒತ್ತಟ್ಟಿಗೆ ಕಲೆತರೆ ಅವರು ಮೌನವಾಗಿರುವುದು ಅಶಕ್ಯ" ಎಂಬ ಸಿದ್ಧಾಂತ ಅಷ್ಟೇ ಸತ್ಯವಾಗಿದೆ. ಆದರೆ ಅಮೇರಿಕನ್ ಸ್ತ್ರೀಯರಿಬ್ಬರು ಕಲೆತರೆ ನಮ್ಮಲ್ಲಿಯ ಹಾಗೆ "ಇಂದು ಏನು ಅಡಿಗೆ ಮಾಡಿದ್ದಿರಿ?", "ನಿಮ್ಮ ನೆಕ್ಲೇಸ್ ಎಷ್ಟು ತೊಲೆಯದು?" ಎಂಬಿತ್ಯಾದಿ ಪ್ರಶ್ನೆಗಳು ಸಂಭಾಷಣೆಯ ವಿಷಯಗಳಾಗಿರದೆ "ನಮ್ಮ ಗುರುತಿನವರಲ್ಲಿ ಯಾರು ಹೆಚ್ಚು ತೂಕ ಕಳೆದುಕೊಂಡಿದ್ದಾರೆ?" ಎಂಬುದು ಚರ್ಚೆಯ ವಿಷಯವಾಗಿರುತ್ತದೆ. ಯಾವಳು ಎಲ್ಲರಿಗಿಂತ ಹೆಚ್ಚು ತೂಕ ಕಳೆದುಕೊಂಡಿದ್ದಾಳೊ ಅವಳು ಉಳಿದವರ ಆದರಕ್ಕೆ ಪಾತ್ರಳಾಗುತ್ತಾಳೆ. ತೂಕ ಕಡಿಮೆ ಮಾಡಿಕೊಳ್ಳಲು ಅವಳು ಯೋಜಿಸಿದ ಉಪಾಯಗಳನ್ನು ಕೇಳಿಕೊಂಡು ಎಲ್ಲರೂ ಅವುಗಳಂತೆಯೇ ಮಾಡತೊಡಗುತ್ತಾರೆ. ವರ್ತಮಾನ ಪತ್ರಗಳಲ್ಲಿ ತೂಕ ಕಳೆದುಕೊಂಡ ಈ 'ವೀರಾಂಗನೆ'ಯರ ಚಿತ್ರ ಪುಟ-ಪುಟದಲ್ಲೂ ಮುದ್ರಿತವಾಗಿರುತ್ತದೆ. ಅವರು ಮಾಡುವ ವ್ಯಾಯಾಮ, ತಿನ್ನುವ ಆಹಾರದ ಬಗ್ಗೆ ಕಾಲಂ, ಕಾಲಂಗಟ್ಟಲೆ ವಿವರಣೆಯಿರುತ್ತದೆ. ಅಲ್ಪಾವಧಿಯಲ್ಲಿ ಅವರ ಕೀರ್ತಿ ಅಮೇರಿಕದಲ್ಲೆಲ್ಲ ಪಸರಿಸುತ್ತದೆ.

ನಮ್ಮ ಭಾರತದಲ್ಲಿ ಅತ್ತೆಯ ಯಜಮಾನಿಕೆಯ ರುಚಿಯನ್ನು ಕಾಣದ ಸೊಸೆ ಅದೊಂದು ಚಮತ್ಕಾರ ಎಂದು ಗಣಿಸಲ್ಪಡುತ್ತಾಳೆ. ಅಮೇರಿಕದಲ್ಲೊ ಮೂರು ಹಡೆದ ನಂತರವೂ ಯಾವಳು ತನ್ನ ತೂಕವನ್ನು ೧೨೦ ಪೌಂಡುಗಳಿಗಿಂತಲೂ ಕಡಿಮೆ ಇಟ್ಟುಕೊಳ್ಳುವಳೊ ಅವಳು ಒಂದು ಚಮತ್ಕಾರ ಎಂದು ತಿಳಿಯುತ್ತಾರೆ. ನಮಗೆ ಸಂಬಳದ ದಿನವೆಂದು ೧ನೆಯ ತಾರೀಖಿಗೆ ಮಹತ್ವವಿರುತ್ತದೆ. ಅಷ್ಟೇ ಮಹತ್ವ ೧೨೦ ಪೌಂಡಿನ ತೂಕಕ್ಕೆ ಅಮೇರಿಕದ ಜೀವನದಲ್ಲಿರುತ್ತದೆ. ತಕ್ಕಡಿಯ ಮುಳ್ಳು ೧೨೦ ರ ಅಂಕೆಯನ್ನು ದಾಟಿತೋ, ಕೆಲಸದಿಂದ ಅಮೇರಿಕನ್ ಸ್ತ್ರೀಯ ಲಕ್ಷ್ಯ ಹಾರಿಹೋಗುತ್ತದೆ. ಸ್ಥೂಲಳಾಗುತ್ತಿರುವೆನಲ್ಲ ಎಂಬ ಚಿಂತೆ ಅವಳನ್ನು ಕಾಡತೊಡಗುತ್ತದೆ. ಚಿಂತೆಯಿಂದ ಮನುಷ್ಯನ ತೂಕ ಕಡಿಮೆಯಾಗುತ್ತದೆಂದು ನಾವು ತಿಳಿಯುತ್ತೇವೆ. ಆದರೆ ಅಮೇರಿಕದಲ್ಲಿ ಈ ಸ್ಥೂಲತನದ ವ್ಯಥೆಯಿಂದ

ತೂಕ ಕಡಿಮೆಯಾಗುವ ಬದಲು ಹೆಚ್ಚುತ್ತ ದೆಂದೇ ಅನುಭವವಾಗಿದೆ.

'ಕ್ಯಾಲರಿ' ಎಂಬ ಶಬ್ದದ ಅರ್ಥ ನಮ್ಮಲ್ಲಿ ಭೌತ ವಿಜ್ಞಾನದ ವಿದ್ಯಾರ್ಥಿಗಳನ್ನು ಬಿಟ್ಟರೆ ಉಳಿದವರಿಗೆ ಗೊತ್ತಿದೆಯೊ ಇಲ್ಲವೊ? ನಮ್ಮ ಅಡಿಗೆ ಮನೆಗಳಲ್ಲಿ ಈ ಶಬ್ದವು ಎಂದಿಗೂ ಉಪ ಯೋಗಿಸಲ್ಪಡುವುದಿಲ್ಲ. ಆದರೆ ಅಮೇರಿಕದಲ್ಲಿ 'ಕ್ಯಾಲರಿ' ಶಬ್ದ ಭೌತ ವಿಜ್ಞಾನ ಪ್ರಯೋಗ ಶಾಲೆಗಳಿಗಿಂತಲೂ ಹೆಚ್ಚಾಗಿ ಅಡಿಗೆ ಮನೆಗಳಲ್ಲೆ ಉಪಯೋಗದಲ್ಲಿದೆ. ಈ ಶಬ್ದ ಗೊತ್ತಿಲ್ಲ ದವನು ಒಬ್ಬನೂ ಇಲ್ಲ. ಯಾವ ತಿನ್ನುವ ಪದಾ-ರ್ಥವೇ ಆಗಲಿ, ಅದನ್ನು ಕೊಳ್ಳಬೇಕಾದರೆ ಅದ-ರಲ್ಲಿ 'ಕ್ಯಾಲರಿ' ಎಷ್ಟಿದೆ ಎಂದು ತಿಳಿಮಕೊಳ್ಳದ ವಿನಾ ಯಾರೂ ಅದನ್ನು ಕೊಳ್ಳುವುದಿಲ್ಲ. 'ಕ್ಯಾಲರಿ' ಹೆಚ್ಚಿದಂತೆ ಮೈ ದಪ್ಪವಾಗುವುದು ಎಂಬ ವಿಚಾರದಿಂದ ತೀರ ಕಡಿಮೆ ಕ್ಯಾಲರಿ ಇರುವ ಪದಾರ್ಥಗಳನ್ನೆ ತಿನ್ನಲು ಎಲ್ಲರೂ ಬಯ ಸುತ್ತಾರೆ. ತಿನ್ನುವ ಪದಾರ್ಥಗಳನ್ನು ಕೊಳ್ಳು ವಾಗ ಅದು ತಾಜಾ ಇದೆಯೆ, ತಂಗಳವೇ ಎಂದು ಎಂಬ ಪ್ರಶ್ನೆಯನ್ನು ಅಮೇರಿಕನ್ನರು ಒಂದು ವೇಳೆ ಕೇಳಲಿಕ್ಕಿಲ್ಲ. ಆದರೆ ಅದರಲ್ಲಿರುವ ಕ್ಯಾಲ ರಿಯ ಬಗ್ಗೆ ಅತ್ಯಂತ ಸೂಕ್ಷ್ಮ ಪ್ರಶ್ನೆಗಳನ್ನು ಖಂಡಿತ ಕೇಳುತ್ತಾರೆ

ನಿತ್ಯ ಹಾಲು ಮೊಸರು ತುಪ್ಪ ತಿನ್ನಲು ಸಿಕ್ಕರೆ ನಾವು ಭಾಗ್ಯವಂತರು ಎಂದು ಭಾರತದಲ್ಲಿ ತಿಳಿ ದರೆ ಅಮೇರಿಕದಲ್ಲಿ ಹಾಗಿಲ್ಲ. ಅಮೇರಿಕದಲ್ಲಿ ಬೆಣ್ಣೆ ಬಲು ಅಗ್ಗದಲ್ಲಿ ಸಿಗುತ್ತದೆ. ಯಾರೂ ಅದನ್ನು ತಿನ್ನುವುದೇ ಇಲ್ಲ. ಬೆಣ್ಣೆ ತಿಂದರೆ ಮೈ-ಲಠ್ಠವಾಗುತ್ತದಲ್ಲ! ಕೆನೆ ತೆಗೆಯದ ಶುದ್ಧ ಹಾಲು ಸಿಗಲಿ ಎಂದು ನಾವು ಹರಕೆ ಹೇಳಿ ಕೊಳ್ಳುವ ಪ್ರಸಂಗವಿದ್ದರೆ ಕೆನೆಯಿರದ ಹಾಲಿಗೇ ಅಮೇರಿಕದಲ್ಲಿ ಬೇಡಿಕೆ ಹೆಚ್ಚಿದೆ.

ತೀರ ಕಡಿಮೆ ಕ್ಯಾಲರಿ ಇರುವ ಅನ್ನವನ್ನು ಹೇಗೆ ತಯಾರಿಸಬಹುದು ಎಂಬುದೇ ಅಮೇರಿ-ಕದ ಆಹಾರ ಶಾಸ್ತ್ರಜ್ಞರ ಮುಂದಿರುವ ಪ್ರಶ್ನೆ ಯಾಗಿದೆ. ನಮ್ಮ ಭಾರತದ ಗವಳಿಗರೇನಾ ದರೂ ಅಮೇರಿಕಕ್ಕೆ ಬಂದರೆ ಅವರ ಉದ್ಯೋಗ ಭರದಿಂದ ನಡೆದೀತು. ಏಕೆಂದರೆ ಅಮೇರಿಕದ ಹಾಲಿನ ಕಂಪನಿಗೆ ಹಾಲಿನಲ್ಲಿರುವ ಕ್ಯಾಲರಿಯ ಸಂಖ್ಯೆಯನ್ನು ಶೂನ್ಯಕ್ಕಿಳಿಸುವ ನಮ್ಮ ಗವಳಿ ಗರಿಗೆ ಗೊತ್ತಿರುವ ಅತಿ ಸರಳ ಸುಲಭ ಮಾರ್ಗ ಗೊತ್ತಿಲ್ಲ. ಒಂದು ಹಾಲಿನ ಕಂಪನಿ ಹತ್ತು ವರ್ಷದ ದೀರ್ಘ ಸಂಶೋಧನೆಯ ನಂತರ ಕೇವಲ ೬೦ ಕ್ಯಾಲರಿಗಳಿರುವ ಹಾಲನ್ನು ಶೋಧಿಸಿತು. ಅನೇಕ ಅಮೇರಿಕನ್ನರು ಎಷ್ಟೋ ದಿನಗಳ ವರೆಗೆ ಬರೀ ಈ ಹಾಲನ್ನು ಕುಡಿದು ಬದುಕಿದರು. ಮತ್ತಾವ ಬಗೆಯ ಅನ್ನವನ್ನೂ ಅವರು ಮುಟ್ಟಲಿಲ್ಲ.

ನಮ್ಮ ತಾಯಿ ಕೊನೆಯ ಪಕ್ಷಕ್ಕೆ ಆಷಾಢ ಏಕಾದಶಿಯ ದಿನವಾದರೂ ನಾವು ಉಪವಾಸ ವಿರುವಂತೆ ನೋಡಿಕೊಳ್ಳುತ್ತಾಳೆ. ಆದರೆ ಆ ದಿನವೂ ನಾನು ರಾತ್ರಿ ೧೨ ಯಾವಾಗ ಹೊಡೆ ಯುತ್ತದೆ, ಏಕಾದಶಿ ಎಂದು ಮುಗಿಯುತ್ತದೆ ಎಂದು ಕಾಯುತ್ತಿರುತ್ತೇನೆ. ಆದರೆ ಅಮೇ-ರಿಕದ ಜನರ ಈ ವಾರಗಟ್ಟಲೆ ಏಕಾದಶಿಯನ್ನು ಕಂಡು ಅವರ ಉಪವಾಸ ನಿಷ್ಠೆಯ ಬಗ್ಗೆ ಆಶ್ಚರ್ಯವೆನಿಸುತ್ತದೆ. ಯಾಕೆ ಇಷ್ಟೊಂದು ಕಠೋರ ಏಕಾದಶಿ ವ್ರತ ಎನ್ನುತ್ತೀರಾ? ಅವರ ಕಟರೇಷೆ ಅಳತೆಯೊಳಗೆ ಇರುವುದು ಬೇಡವೇ?

ಮನುಷ್ಯ ಸದಾ ಕಾಮಿನಿ, ಕಾಂಚನ ಮತ್ತು ಕೀರ್ತಿಗಳ ಹಿಂದೆ ಓಡುತ್ತಿರುತ್ತಾನೆ. ಅದ-ಕ್ಕಿಂತಲೂ ಹೆಚ್ಚಾಗಿ ಈ ಕಟರೇಷೆಯ ಹಿಂದೆ ಆತ ಯಾಕೆ ಓಡಬೇಕು ಎಂಬುದು ನನಗಿನ್ನೂ ಬಗೆಹರಿಯದ ಸಮಸ್ಯೆಯಾಗಿದೆ. *





★ ಈ ಹಕ್ಕಿಗಳನ್ನೇ
ಮಾನವ ಬಹಳವಾಗಿ
ಹೋಲುತ್ತಾನೆ! ★

ರಾಧಾಕೃಷ್ಣ ರಾವ್

# ವರಟೆ ಹಕ್ಕಿಗಳ ಸಾಮಾಜಿಕ ಜೀವನ

ಆಕಾಶದಲ್ಲಿ ಕಾಣಬಹುದಾದ ದೃಶ್ಯಗಳಲ್ಲಿ ವರಟೆ ಅಥವಾ ವರಲೆ ಎಂಬ ಪಕ್ಷಿಜಾತಿಯ ಹಾರಾಟಕ್ಕಿಂತ ಮನೋರಮವಾದುದು ಬೇರೊಂದಿಲ್ಲ. ಕವಿಗಳು ಹಂಸವೆಂದು ಮನವಾರೆ ಹೊಗಳಿರುವವು ವರಟೆ (ಗೂಸ್) ಜಾತಿಗೆ ಸೇರಿದವು-ಗಳೇ. ದಕ್ಷಿಣ ಭಾರತದಲ್ಲಿ ಅವುಗಳ ಗಮನಾಗಮನ ಕಡಿಮೆ. ಆದರೆ ಒಮ್ಮೊಮ್ಮೆ V ಆಕಾರದಲ್ಲಿ ಇಲ್ಲವೆ ರಿಬ್ಬನ್ನಿನ ರೀತಿಯಲ್ಲಿ ಗುಂಪಾಗಿ, ತೆರೆ ತೆರೆಯಾಗಿ ಹಾರುವ ಅವುಗಳನ್ನು ಕಾಣಬಹುದು. ಅವುಗಳ "ಆಂಗ್ ಆಂಗ್" ಎಂಬ ಮಧುರ ಸ್ವರ ಅತ್ಯಂತ ಉತ್ತೇಜಕವಾಗಿದೆ.

ಹೆಚ್ಚಾಗಿ ಬಿಳಿ ವರ್ಣದ, ಕೋಳಿಯ ಗಾತ್ರದ ಈ ಪಕ್ಷಿಗಳ ದೃಶ್ಯವಷ್ಟೇ ಹೃದ್ಯವಾದುದಲ್ಲ. ಅವುಗಳ ಜೀವನವೂ ಅನಿರೀಕ್ಷಿತ ವೈಶಿಷ್ಟ್ಯಗಳಿಂದ ಕೂಡಿದೆ.

ತಮ್ಮ ನೈಸರ್ಗಿಕ ಕಾಡು ಅವಸ್ಥೆಯಲ್ಲಿದ್ದಾಗ ವರಟೆ ಜಾತಿಯ ಪಕ್ಷಿಗಳು ಮನುಷ್ಯನಷ್ಟೇ ಅಥವಾ ಅದಕ್ಕೂ ಹೆಚ್ಚು ದೀರ್ಘಾಯುಗಳಾಗಿರಬಹುದು. ಅಪಘಾತಗಳಿಗೀಡಾಗುವ ಸಂಭವ ಧಾರಾಳವಾಗಿರುವ ಅವುಗಳ ಜೀವನಪದ್ಧತಿಯಲ್ಲಿ ಅಪಮೃತ್ಯುವಿನಿಂದ ಅರ್ಧಾಯುಷ್ಯದಲ್ಲಿ ಅನೇಕ ವರಟೆಗಳು ಸಾಯುತ್ತವೆಂಬ ಮಾತು ಬೇರೆ. ಆದರೆ ಕೆನಡಾ ವರಟೆ (ಕೆನೇಡಿಯನ್ ಗೂಸ್) ಯೊಂದು ಅರವತ್ತು ವಯಸ್ಸಿನಲ್ಲಿ ತಂದೆಯಾದ ಒಂದು ಉದಾಹರಣೆ ಪಕ್ಷಿಶಾಸ್ತ್ರಗಳ ಹತ್ತಿರ ಇದೆ.

ಮನುಷ್ಯರಲ್ಲಿ ಕೂಡ ಅಪರೂಪವಾದ ಈ ದಾಖಲೆಯನ್ನು ಇನ್ನೂ ಗಮನಾರ್ಹವಾಗಿ ಮಾಡುವ ಒಂದು ಅಂಶವೆಂದರೆ, ವರಟೆಗಳ ಗೃಹಸ್ಥಜೀವನ ಬಲು ಎಳವೆಯಲ್ಲೇ ಪ್ರಾರಂಭವಾಗುವುದು. ಹುಟ್ಟಿ ಒಂದು ವರ್ಷದೊಳಗೇ "ಮದುವೆ"ಯಾದ ವರಟೆಗಳೂ ಇವೆ. ಎರಡು ಮೂರನೇ ವಯಸ್ಸುಗಳಲ್ಲಂತೂ ಹೆಚ್ಚು ಕಡಿಮೆ ಎಲ್ಲ ವರಟೆಗಳು ಸಂಸಾರ ಹೂಡಿಬಿಡುತ್ತವೆ.

ಮದುವೆ, ಸಂಸಾರ ಎಂಬ ಶಬ್ದಗಳನ್ನು ಈ ಪಕ್ಷಿ ಜಾತಿಯ ವಿಷಯದಲ್ಲಿ ಪ್ರಯೋಗಿಸುವುದು ಉತ್ಪ್ರೇಕ್ಷೆಯಲ್ಲ. ಮನುಷ್ಯರಿಗಿಂತಲೂ ಸಾರ್ಥಕವಾಗಿ ಈ ಪದಗಳು ಹಂಸಾದಿ ವರಟೆ ಪಕ್ಷಿಗಳಿಗೆ ಅನ್ವಯಿಸಲ್ಪಡಬಹುದಾಗಿದೆ. ಪ್ರಣಯಯಾಚನೆ, ವಿವಾಹ ನಿಶ್ಚಯ, ವಿವಾಹ ಮತ್ತು ಗಾರ್ಹಸ್ಥ್ಯ ಇವೆಲ್ಲ ಮಾನವೀ "ಶಾಸ್ತ್ರ"ಗಳು ವರಟೆಗಳಲ್ಲಿ ನಡೆಯುತ್ತವಷ್ಟೇ ಅಲ್ಲ. ಅವು ಏಕಪತ್ನೀ ವ್ರತವನ್ನು ನಿಷ್ಠೆಯಿಂದ ಪಾಲಿಸುತ್ತವೆ.

ಕಳೆದ ಹತ್ತು ವರ್ಷಗಳಿಂದ ಆಸ್ಟ್ರಿಯದ ಪ್ರಮುಖ ಪ್ರಾಣಿಸ್ವಭಾವ ತಜ್ಞರಾದ ಪ್ರೊ. ಕೊನ್ರಾಡ್ ಲೋರೇಜರು ಬವೇರಿಯದ ಸಮೀಪದ ಸೀವೀಸೆನ್ ಸರೋವರದಲ್ಲಿ ವರಟೆಗಳ ಜೀವನವನ್ನಭ್ಯಸಿಸಿ ಕಂಡುಕೊಂಡಿರುವ ತಥ್ಯಗಳಲ್ಲಿ ಕೆಲವು ಬಲು ಸ್ವಾರಸ್ಯ ತೀರ್ಮಾನಗಳಿಗೆಡೆಗೊಟ್ಟಿವೆ. ಈ ಪಕ್ಷಿಗಳೊಡನೆಯೇ ಹಗಲಿರುಳು ವರ್ಷಕ್ಕೆಂಟು ತಿಂಗಳು (ವರಟೆಗಳು ವರ್ಷಕ್ಕೆಂಟು ತಿಂಗಳು ಶೀತ ದೇಶಗಳಲ್ಲಿ ಮತ್ತು ಉಳಿದ ಕಾಲವನ್ನು ಉಷ್ಣ ದೇಶಗಳಲ್ಲಿ ಕಳೆಯುತ್ತವೆ.) ಬಾಳಿದ ಪ್ರೊ. ಕೊನ್ರಾಡರು "ಪ್ರಾಣಿಗಳಲ್ಲಿಯೂ ಮನುಷ್ಯತ್ವವಿದೆ ಎನ್ನುವುದಕ್ಕಿಂತ ಮನುಷ್ಯರಲ್ಲಿಯೂ ಪ್ರಾಣಿತ್ವವಿದೆ ಎನ್ನುವುದೇ ಸರಿಯಾದೀತು" ಎಂದು ಸಾರಿದ್ದಾರೆ. ಅವರ ಮಾತಿಗೆ ಬೆಲೆಯಿರಲೇಬೇಕು. ಏಕೆಂದರೆ ಅವರು "ಗ್ರೇಲ್ಯಾಗ್" ಹಂಸ (ಭಾರತಕ್ಕೆ ಚಳಿಗಾಲದಲ್ಲಿ ಭೆಟ್ಟಿ ಕೊಡುವ ಎರಡು ವರಟೆ ಜಾತಿಗಳಲ್ಲಿ ಒಂದು), ಕೆನೇಡಿಯನ್, ಹಿಮ ಹಂಸ, ರಾಜಹಂಸ ಮೊದಲಾದ ಎಂಟು ಹತ್ತು ಜಾತಿಗಳನ್ನು ಪ್ರಯತ್ನಪೂರ್ವಕ ಸಂಗ್ರಹಿಸಿ ಪರೀಕ್ಷಿಸುತ್ತಿದ್ದಾರೆ.

ಹೆಡ್ಡನನ್ನು "ಗೂಸ್" (ವರಟೆ) ಎಂದು ಕರೆಯುವ ವಾಡಿಕೆ ಇಂಗ್ಲೀಷಿನಲ್ಲಿದೆ. ಹಂಸಗಳ ಬಗ್ಗೆ ಕವಿಗಳೇನೇ ಹೇಳಲಿ (ಉದಾ— ನಳ ದಮಯಂತಿಯರೊಳಗೆ ಪ್ರಣಯ ಸಂದೇಶದ ಸಾಗಾಟ), ಅವಾಗಲಿ ಅವುಗಳ ಅಣ್ಣತಮ್ಮಂದಿರಾದ ಇತರ ವರಟೆಗಳಾಗಲಿ ಬುದ್ಧಿಶಾಲಿಗಳೆಂದು ಹೇಳಲು ಸಾಧ್ಯವಿಲ್ಲವೆಂಬುದು ಸತ್ಯ. ಹೋಲಿಕೆಗಾಗಿ ನಾಯಿಯು ಪ್ರಾಣಿಜಾತಿಯಲ್ಲಿ ಪ್ರಚಂಡ ಬುದ್ಧಿಶಾಲಿಯಲ್ಲ. ಆದರೆ ವರಟೆಗಳು ಹೊಸ ವಿಷಯಗಳನ್ನು ನಾಯಿಗಳಷ್ಟು ಕೂಡ ಚೆನ್ನಾಗಿ ಕಲಿತುಕೊಳ್ಳಲಾರವು. ಇದು ವರಟೆಗಳ ಸ್ನೇಹ ಬೆಳೆಸುವ ಮನುಷ್ಯನ ಕೆಲಸವನ್ನು ಕಷವಾಗಿ ಮಾಡುತ್ತದೆ.

ಆದರೂ ಈ ಹೆಡ್ಡ ಪ್ರಾಣಿಗಳಲ್ಲಿ ಕಾಣಿಸುವ ಎಷ್ಟೋ ಸ್ವಭಾವಗಳು ಮನುಷ್ಯರ ಪ್ರಕೃತಿಯ ಯಾವುದೋ ಮೂಲೆಗಳಲ್ಲಿ ಹುದುಗಿದ್ದು ನಿಶ್ಚಿತವೇಳೆಯಲ್ಲಿ ಹೊರಹಣಕುತ್ತವೆ. ಅವುಗಳ ಸ್ಪರ್ಧಾಬುದ್ಧಿಯನ್ನೇ ತೆಗೆದುಕೊಳ್ಳಿ. ಎರಡು ಗಂಡು ವರಟೆಗಳು ಮೊಟ್ಟಮೊದಲು ಸಂಧಿಸಿದಾಗ ಅವು ಮಾಡುವ ಪ್ರಥಮ ಕಾರ್ಯವೆಂದರೆ ಹೋರಾಟ. ಸೋತ ಗಂಡಿನ ಮೇಲೆ ಗೆದ್ದ ಗಂಡು ಶಾಶ್ವತವಾಗಿ ಸಮಾಜದಲ್ಲಿ ಶ್ರೇಷ್ಠತ್ವವನ್ನು ಸಂಪಾದಿಸುತ್ತದೆ. ಅನಂತರ ಆ ಎರಡು ಯಾವಾಗ ಎದುರುಬದುರಾದರೂ ಸೋತದ್ದು ಗೆದ್ದದ್ದಕ್ಕೆ ದಾರಿಬಿಡಬೇಕು. ಈ ಶ್ರೇಷ್ಠತ್ವವನ್ನು ಸ್ಥಾಪಿಸಿದ ಹಕ್ಕಿಗಳು ರಕ್ಕೆ ಬಡಿದು ಕುತ್ತಿಗೆ ನೀಡಿ "ವಿಜಯಧ್ವನಿ" ಹೊರಡಿಸುವುದು ವರಟೆಯ ಹಿಂಡುಗಳಿದ್ದಲ್ಲೆಲ್ಲ ಕಾಣಿಸುವ ದೃಶ್ಯವಾಗಿದೆ.

ಹೀಗೆ ವರಟೆ ಸಮಾಜದಲ್ಲಿ ಹೋರಾಟದಿಂದ ನಿರ್ಣಯವಾದ ಬಲು ಗಡುಚಾದ ಉಚ್ಚನೀಚ ಅಂತಸ್ತುಗಳಿವೆ. ಒಂದು ಹಿಂಡಿನಲ್ಲಿರುವ ಎಲ್ಲ ಗಂಡುಗಳನ್ನು ಸೋಲಿಸಿದ ಹಕ್ಕಿ ನಾಯಕನಾಗುತ್ತದೆ. ಆದರೆ ಇದು ಶಾಶ್ವತವಲ್ಲ. ಇನ್ನಾವುದಾದರೂ ಗಂಡು ಅದನ್ನು ಯುದ್ಧಕ್ಕೆ ಕರೆದು ಸೋಲಿಸಿದರೆ ಅದು ಪದಚ್ಯುತವಾಗುತ್ತದೆ.

ಇದಕ್ಕೂ ಹೆಚ್ಚಿನದೆಂದರೆ ಅವುಗಳ ವೀರಧರ್ಮ. ಶರಣಾಗತರ ಮೇಲೆ ವಿಜಯಿಗಳು ಕೈಮಾಡುವುದಿಲ್ಲ. ಕಾದಾಟದಲ್ಲಿ ಸೋಲುತ್ತಿರುವ ವರಟೆ ಯುದ್ಧ ಕೊನೆಗೊಳಿಸಬೇಕಾದರೆ

ತನ್ನ ತಲೆಯ ಹಿಂಭಾಗವನ್ನು ತನ್ನ ಶತ್ರುವಿನೆದುರಿಗೆ ಒಡ್ಡುತ್ತದೆ. ಅದು ವರಟೆಯ ಮರ್ಮಸ್ಥಾನ. ಅದನ್ನೊಡ್ಡುವುದೆಂದರೆ "ಕುಂಬಳವೂ ನಿನ್ನ ಹತ್ತಿರವಿದೆ ಕತ್ತಿಯೂ ನಿನ್ನ ಹತ್ತಿರವಿದೆ. ಇಚ್ಛೆ ಬಂದಂತೆ ಮಾಡು" ಎಂದ ಹಾಗೆ. ಅನಂತರ ಗೆದ್ದ ಹಕ್ಕಿ ಒಂದು ಹೊಡೆತವನ್ನೂ ಕೊಡದು.

"ಹೆಂಡತಿ"ಗೆ ಗಂಡನ ಸಾಮಾಜಿಕ ಅಂತಸ್ತು ಸ್ವತಃಸಿದ್ಧವಾಗಿ ದೊರೆಯುತ್ತದೆ. ಅವುಗಳ ವಿವಾಹಪೂರ್ವ ಸಿದ್ಧತೆಗಳು ಸುದೀರ್ಘವಾಗಿರುತ್ತವೆ. ಪ್ರಥಮ ದರ್ಶನದಲ್ಲಿ ಪ್ರಣಯ, ಎಳವೆಯಲ್ಲೇ ಪ್ರೀತಿ, ವಿಧವಾವಿವಾಹ— ಎಲ್ಲ ತರದ ಮಾನವೀ ಕ್ರಮಗಳೂ ಅವುಗಳಲ್ಲುಂಟು. ಒಂದೇ ವರ್ಷದ ಒಂದು ಗಂಡು ಇಪ್ಪತ್ತು ವರ್ಷದ ವಿಧವೆ ಹಕ್ಕಿಯನ್ನು ಆರಾಧಿಸಿ ಮದುವೆಯಾದ ಉದಾಹರಣೆಯೊಂದನ್ನು ಪ್ರೊ. ಕೊನ್ರಾಡರು ಉಲ್ಲೇಖಿಸುತ್ತಾರೆ.

ಸಾಮಾನ್ಯವಾಗಿ, ಹುಟ್ಟಿದ ಒಂದು ವರ್ಷದಲ್ಲಿಯೆ ಗಂಡು ಹೆಣ್ಣಿನ ವಿಷಯದಲ್ಲಿ ಆಸಕ್ತಿ ತೋರಿಸುತ್ತದೆ. ಇದು ನೀವು ಎಣಿಸಿದಷ್ಟು ಸುಲಭವಾಗಿಲ್ಲ. ಆತನಿಗಿರುವ ಮೊದಲ ಕಷ್ಟವೆಂದರೆ ಹೆಣ್ಣಾವುದೆಂದು ಗುರುತಿಸುವುದು. ಹೆಚ್ಚು ಕಡಿಮೆ ಎಲ್ಲ ಜಾತಿಯ ವರಟೆಗಳಲ್ಲಿಯೂ ಗಂಡು ಹೆಣ್ಣು ನೋಡಲು ಒಂದೇ ತೆರನಾಗಿರುತ್ತವೆ. ಎಷ್ಟು ಮಟ್ಟಿಗೆಂದರೆ ಒಂದು ಹಿಂಡಿನಲ್ಲಿ ಕೆಲ ಗಂಡು ಹಕ್ಕಿಗಳೇ ಬೇರೆ ಕೆಲ ಗಂಡು ಹಕ್ಕಿಗಳನ್ನು ಹೆಣ್ಣೆಂದು ಭಾವಿಸಿ ಅವುಗಳನ್ನೊಲಿಸಿಕೊಳ್ಳುವ ಹವಣಿಕೆಯಲ್ಲಿ ಜೀವಮಾನವನ್ನು ಸವೆಯುವುದುಂಟು ಪ್ರಣಯಾಭಿವ್ಯಕ್ತಿಯ ಕಾಲದಲ್ಲಿ ಗಂಡು ಮಾತ್ರ ಕುತ್ತಿಗೆಯನ್ನು V ಆಕೃತಿಗೆ ಬಗ್ಗಿಸುತ್ತದೆ. ಆದರೆ ಈ ಗುರುತು ಎಷ್ಟೋ ಸಲ ವರಟೆಗಳ ಲಕ್ಷ್ಯಕ್ಕೇ ಬಾರದೆ ಮೋಜಿನ ಪರಿಸ್ಥಿತಿಗಳುತ್ಪನ್ನವಾಗುತ್ತವೆ.

ಮೊದಲನೇ ವರ್ಷದಲ್ಲಿ ಗಂಡು ಹೆಣ್ಣಿನ ಸಂಗಡ ಹಾರುವುದು, ಅದರ ರೆಕ್ಕೆಗೆ ರೆಕ್ಕೆತಾಗಿಸಿ ನಿಲ್ಲುವುದು ಇಷ್ಟರಿಂದಲೇ ತೃಪ್ತವಾಗುತ್ತದೆ. ಎರಡನೇ ವರ್ಷದಲ್ಲಿ ಅದು ಹೆಚ್ಚು ಬಲಿತು ಹೆಚ್ಚು ರಭಸದಿಂದ ಜೀವನಸಂಗಾತಿಯನ್ನರಸತೊಡಗುತ್ತದೆ. ತನ್ನ ಆಯ್ದ ಮನಮೋಹಿನಿಯ ಮುಂದೆ ಅದು ಕೊಂಕು ಕೊರಳಿನ ಸಂಕೇತದಿಂದ ಅಭಿಮತವನ್ನು ವ್ಯಕ್ತಪಡಿಸುತ್ತದೆ. ಅವಳಾದರೋ ಸುಲಭ ಗ್ರಾಹ್ಯಳಲ್ಲ. ಸಾಭಿಪ್ರಾಯ ದೃಷ್ಟಿಯಿಂದ ಅವಳು ತನ್ನಅರ್ಥಾನುಮತಿಯನ್ನು ವ್ಯಂಜಿಸಬಹುದು. ಅವಳ ಪ್ರೇಮಾಭಿಲಾಷಿಗಳಾದ ಇತರ "ಪುರುಷ"ರ ಕಡೆ ಸಂಕೇತ ಮಾಡಬಹುದು. ಆಗ ಆತ ಅವುಗಳೊಡನೆ ಹೋರಾಡಿ ತನ್ನ ಮೇಲ್ಮೆಯನ್ನು ಸಿದ್ಧಪಡಿಸಿ ತೋರಿಸಬೇಕಾಗುವುದು. ಅನಂತ-ರವೂ ಅವಳ ಅನುಗ್ರಹಕ್ಕಾಗಿ ಆತ ಒಂದೆರಡು ವಾರ ಕಾಯಬೇಕಾದೀತು. ಆತ ಅವಳ ಮುಂದೆ ಕುತ್ತಿಗೆಯನ್ನು ನೀರಲ್ಲಿ ಮುಳುಗಿಸಿದಾಗ ಅವಳೂ ಅದೇ ಮೇರೆಗೆ ಮಾಡಿದರೆ ಮಾತ್ರ ಅವಳು ಅವನನ್ನು ವರಿಸಲು ನಿರ್ಧರಿಸಿದ್ದಾಳೆಂ-ದರ್ಥ. ಅನಂತರ ಎರಡೂ ಒಟ್ಟೊಟ್ಟಿಗೆ ಈಸುವುದು, ಕೊರಳಿಂದ ಕೊರಳನ್ನು ಬಳಸುವುದು, ವಿಜಯ ಧ್ವನಿಗಳನ್ನು ಮಾಡುವುದು ಆರಂಭವಾಗುತ್ತದೆ. ಕಡೆಗೆ ಚೈತ್ರ ಮಾಸದಲ್ಲೊಂದು ದಿನ– ಹೆಚ್ಚಾಗಿ ಅಭಿಜನ್ಮುಹೂರ್ತದಲ್ಲಿ – ನಡುನೀರಲ್ಲಿ ವಿವಾಹವಾಗುವುದು. ಆಮೇಲೆ ಆಜೀವ "ನಾನಿನ್ನು ನಿನ್ನವಳು, ನೀನಿನ್ನು ನನ್ನವನು."

ಹಂಸಸಮಾಜದಲ್ಲಿ ಗಾರ್ಹಸ್ಥ್ಯಕ್ಕೆ ಎಲ್ಲಕ್ಕೂ ಹೆಚ್ಚಿನ ಸ್ಥಾನಮಾನವಿದೆ. ಸುಖದಾಂಪತ್ಯದಲ್ಲಿ ಬಹುಪುತ್ರ-ಪೌತ್ರ ಸಂಪತ್ತುಳ್ಳ ದಂಪತಿಗಳಿಗೆ ಎಲ್ಲಕ್ಕೂ ಮಿಗಿಲಾದ ಗೌರವ ಬ್ರಹ್ಮಚಾರಿಗಳ ಸ್ಥಾನ ಕೆಳಗೆ; ಬ್ರಹ್ಮಚಾರಿಣಿಯರದು ಇನ್ನೂ ಕೆಳಗೆ!

ದುರ್ದೈವದಿಂದ ಭಾರತದಲ್ಲಿ ನಮಗೆ ಈ ಹಕ್ಕಿಗಳ ಜೀವನದ ಈ ಮುಖವನ್ನು ಪೂರ್ಣವಾಗಿ ಕಾಣುವ ಯೋಗ ದುರ್ಲಭವಾಗಿದೆ. ನಮ್ಮಲ್ಲಿ ಕಾಣಿಸುವ ಎಲ್ಲ ಜಾತಿಯ ಹಂಸಪಕ್ಷಿ

ಗಳೂ ಚಳಿನಾಡಿನಿಂದ ಚಳಿಗಾಲದಲ್ಲಿ ಇಲ್ಲಿ ಬರುವವು. ಚಳಿಗಾಲದಲ್ಲಿ ಚಳಿನಾಡಿನಲ್ಲಿ ಆಹಾರ ದುರ್ಲಭವಾಗುವುದರಿಂದ ನೂರಾರು, ಸಾವಿರಾರು ಮೈಲು ಹಾರಿ ನಮ್ಮ ಸೆಕೆನಾಡಿಗೆ ಅವು ಬಂದು ಇಲ್ಲಿನ ನದೀ ನಿರ್ಝರ ಸರೋವರ ಗಳಲ್ಲಿ ವಸತಿ ಹೂಡಿ, ಇಲ್ಲಿನ ಗೋದಿ, ಕಡಲೆ ಹೊಲಗಳಲ್ಲಿ ಎಳೆ ಚಿಗುರನ್ನು ಮೆದ್ದು ಬದುಕಿ, ಬೇಸಗೆ ಬಂದೊಡನೆ ಹಿಮಾಲಯದಾಚೆಗಿರುವ ತಮ್ಮ ಮೂಲ ನೆಲೆಗಳಿಗೆ ಹೋಗುತ್ತವೆ. ಅವು ಗಳ ಪ್ರೇಮ ಜೀವನವನ್ನು ನೋಡಬೇಕಾದರೆ ನಾವು ಅತಿ ಹತ್ತಿರವೆಂದರೆ ಕಾಶ್ಮೀರದ ಲಡಕ್, ಅಥವಾ ಟಿಬೇಟಿಗೆ ಎಪ್ರಿಲ್-ಜೂನ್ ನಡುವೆ ಹೋಗಬೇಕಾಗುತ್ತದೆ.

ಆದರೆ ಅವುಗಳ ದಾಂಪತ್ಯ ಆದರ್ಶವಾಗಿದೆ ಯೆಂದು ಪ್ರಾಣಿಶಾಸ್ತ್ರಿಗಳು ಹೇಳುತ್ತಾರೆ. ಮನುಷ್ಯರ ಕೈಗೆ ಸಿಲುಕಿ ತಮ್ಮ ಸಹಧರ್ಮಿ ಅಥವಾ ಸಹಧರ್ಮಿಣಿಯನ್ನು ಕಳೆದುಕೊಂಡಿದ್ದ ಹಕ್ಕಿಗಳಿಗೆ ಇನ್ನೊಂದು ಹಕ್ಕಿಯನ್ನು ಜತೆಮಾಡಲು ಮಾಡಿದ ಪ್ರಯತ್ನಗಳು ಯಶಸ್ವಿಯಾಗಿಲ್ಲ. ಗಂಡು ಹಕ್ಕಿ ಪತಿಯ ಕರ್ತವ್ಯಗಳನ್ನು ಜೋಕೆಯಿಂದ ಪೂರೈಸುತ್ತದೆ ತನ್ನ ಹೆಂಡತಿಯಿಟ್ಟ ತತ್ತಿಗಳನ್ನು ಕಾಯುವುದರಲ್ಲೂ ಮರಿಗಳನ್ನು ಸಾಕುವುದರಲ್ಲಿಯೂ ಅದು ಅತ್ಯಂತ ಆಸ್ಥೆಯಿಂದ ಸಹಕರಿಸುತ್ತದೆ *



## ಜನಪದ ವೇದ

ಕೇಳುವುದರಿಂದ ಜ್ಞಾನ ಪ್ರಾಪ್ತಿಯಾಗುತ್ತದೆ, ಮತ್ತು ಮಾತನಾಡುವುದರಿಂದ ಪಶ್ಚಾತ್ತಾಪ ಬರುತ್ತದೆ.

ಇಟಾಲಿಯನ್ ಗಾದೆ




"ನೋಡಪ್ಪಾ, ನನಗೆ ರೇನ್‌ಕೋಟು ಬೇಡ. ಇಂಥಾ ಕೊಡೆ ಕೊಡಿಸಿಬಿಡಪ್ಪಾ!"

ಪತಿಘಾತಕನ ಮಗುವನ್ನು ಕಾಪಾಡುವ ಪ್ರೇರಣೆ
ಅದು ಹೇಗೊ ಅವಳಿಗಾಯಿತು

# ಅಸಾಮಾನ್ಯೆಯ ಅಸಾಮಾನ್ಯ ಕಥೆ

ಕೆ. ಎನ್. ಭಟ್ ಶಿರಾಡಿಪಾಲ್

ಸುರಾಜುದ್ದೌಲ ೧೭೫೬ ರಲ್ಲಿ ಬಂಗಾಲದ ನವಾಬ ಗದ್ದುಗೆಯನ್ನೇರಿದಾಗ ಬರಿ ಇಪ್ಪತ್ತರ ತರುಣನಾಗಿದ್ದ. ಅಜ್ಜನ ಅಚ್ಚುಮೆಚ್ಚಿನ ಮೊಮ್ಮಗನಾಗಿ ಬೆಳೆದ ಆತ, ಎಲ್ಲ ರಾಜವಂಶಗಳ ಕೊನೆಯ ಅರಸರಂತೆ ವಿಲಾಸಿ, ಕಾಮುಕ, ವಿಷಯ ಲೋಲುಪ ಮತ್ತು ಮೂರ್ಖ ತರುಣನಾಗಿದ್ದ. ತನ್ನ ಶಕ್ತಿಗೆ ಮೀರಿದು ಏನೂ ಇಲ್ಲವೆಂದಾತ ಬಗೆದಿದ್ದ

ಬಂಗಾಲದ ನವಾಬಶಾಹಿಯ ರಾಜಧಾನಿ ಮುರ್ಶಿದಾಬಾದಿನಲ್ಲಿ ಮಾತಬಚಂದ ಶ್ರೇಷ್ಠಿಯೆಂಬ ಶ್ರೀಮಂತ ವ್ಯಾಪಾರಿಯಿದ್ದ. ಅವನ ಮಗಳು ಅಸಾಮಾನ್ಯೆಯ ಅಸಾಮಾನ್ಯ ರೂಪಲಾವಣ್ಯವನ್ನು ಕೇಳಿ ಮೋಹಿತನಾಗಿದ್ದ ಸುರಾಜುದ್ದೌಲನಿಗೆ ಅವಳನ್ನು ಹೇಗಾದರೂ ತನ್ನವಳನ್ನಾಗಿ ಮಾಡಿಕೊಳ್ಳಬೇಕೆಂಬ ಹಂಬಲ ಹಿಡಿದಿತ್ತು. ಆದರೆ ಅವಳನ್ನು ಅವಳ ತಂದೆ ಯೋಗ್ಯ ವರನೊಬ್ಬನ ಕೈಯಲ್ಲಿ ಹಾಕಿದ ವಾರ್ತೆ ಕೇಳಿ ಸುರಾಜುದ್ದೌಲನಿಗೆ ಮುಳ್ಳು ಚುಚ್ಚಿದಂತಾ-



ಯಿತು. ಕಾಮಾತುರನಾಗಿದ್ದ ಆತ ರಾಜ್ಯಾಧಿಪತಿಯೊಬ್ಬ ಮಾಡಬಹುದಾದ ಅತ್ಯಸಾಧಾರಣ ಅಪಾಯ ಕೃತಿಯೊಂದನ್ನು ಕೈಕೊಂಡ. ಸ್ತ್ರೀವೇಷ ಧರಿಸಿ ಹೇಗೋ ಮಾಡಿ ಅಸಾಮಾನ್ಯೆಯ ಗಂಡನ ಮನೆಯ ಉದ್ಯಾನದಲ್ಲಿ ಪ್ರವೇಶ ಪಡೆದು ಹೂಗಳ ನಡುವೆ ವಿಹರಿಸುತ್ತಿದ್ದ ಅವಳ ರೂಪಲಾವಣ್ಯವನ್ನು ಕಣ್ಣುಗಳಿಂದ ಕುಡಿದ. ವಿವಾಹಿತಳಾದ ಈ ರೂಪಸಿ ತನಗೆ ಅಲಭ್ಯಳೆಂಬ ತಿಳಿವಳಿಕೆಯಿಂದ ಅವನ ಕಾಮುಕತೆಗೆ ಪ್ರಚೋದನೆಯ ದೊರೆಯಿತು. ತನ್ನ ಸ್ಥಾನಮಾನ, ತನ್ನ ಛದ್ಮವೇಷ ಎಲ್ಲವನ್ನೂ ಮರೆತು ಅವಳಿದ್ದಲ್ಲಿಗೆ ಧಾವಿಸಿ ತಬ್ಬಿಕೊಳ್ಳಲು ಹೋದ. ಗದ್ದಲವೆದ್ದಿತು. ಸುರಾಜುದ್ದೌಲ ಸಿಕ್ಕಿಬಿದ್ದ. ಅಸಾಮಾನ್ಯೆಯ ಗಂಡ ಅಲ್ಲಿ ಬಂದ. ಸ್ತ್ರೀವೇಷಧಾರಿ ನವಾಬನನ್ನು ಚೆನ್ನಾಗಿ ಥಳಿಸಿ ತೋಟದಿಂದ ಹೊರತಳ್ಳಲಾಯಿತು.

ಅವಮಾನದ ಗಾಯಗಳನ್ನು ನೆಕ್ಕಿಕೊಳ್ಳುತ ನವಾಬ ಪ್ರತೀಕಾರದ ಹಂಚಿಕೆ ಹೂಡಿದ. ಒಂದು ದಿನ ಅಸಾಮಾನ್ಯೆಯ ಪತಿ ಒಂಟಿಯಾಗಿ ನಿರ್ಜನವಾದ ಸಂದಿಯಲ್ಲಿ ಹೋಗುತ್ತಿದ್ದಾಗ ಸುರಾಜುದ್ದೌಲನ ಸಶಸ್ತ್ರ ಬಂಟರು ಹಿಂದಿನಿಂದ ಬಂದು ಅವನ ರುಂಡ ಹಾರಿಸಿದರು. ಕ್ರೌರ್ಯಕ್ಕೆ ಒಪ್ಪವೀಯಲು ಸುರಾಜುದ್ದೌಲ ರಕ್ತ ಸೂಸುತ್ತಿರುವ ರುಂಡವನ್ನು ಒಂದು ತಟ್ಟೆಯಲ್ಲಿರಿಸಿ ಮುಚ್ಚಿ "ಅಸಾಮಾನ್ಯೆಗೆ ಕಾಣಿಕೆ" ಎಂದು ಕಳಿಸಿದ

ಈ "ಕಾಣಿಕೆ" ಬಂದೊಡನೆ ಅಸಾಮಾನ್ಯೆಗೆ ವಜ್ರಾಘಾತವಾಗಿ ಅವಳು ಮೂರ್ಛಿತಳಾದಳು ಆಘಾತದಿಂದ ಅವಳ ಪ್ರಾಣ ಹೋಗದಿದ್ದರೂ ಬುದ್ಧಿ ಮಾತ್ರ ಸಂಪೂರ್ಣ ಭ್ರಮಣಹೊಂದಿಬಿಟ್ಟಿತು.

ದೈವೀ ಪ್ರತೀಕಾರ ಬರುವುದರಲ್ಲಿ ವಿಲಂಬವಾಗಲಿಲ್ಲ. ಪಟ್ಟಕ್ಕೆ ಬಂದ ಒಂದು ವರ್ಷದೊಳಗೆ ಸುರಾಜುದ್ದೌಲ ತನ್ನ ಪೀಡಕ ರಾಜ್ಯಭಾರದಿಂದ ಎಷ್ಟು ಜನದ್ವೇಷ ಗಳಿಸಿದ್ದನೆಂದರೆ ದಂಗೆಗಳು ಪ್ರಾರಂಭವಾದವು. ಕಲಕತ್ತೆಯಲ್ಲಿದ್ದ ಇಂಗ್ಲೀಷರನ್ನು ಕೆರಳಿಸುವ ಕೃತಿಗಳನ್ನೂ ಆತ ಈ ನಡುವೆ ಮಾಡಿದ. ಮೀರ್ ಜಾಫರ್ ಇಂಗ್ಲೀಷರೊಡನೆ ಒಳಸಂಚು ಮಾಡಿ ನವಾಬನ ಪತನಕ್ಕೆ ದಾರಿಮಾಡಿಕೊಟ್ಟಾಗ ಜನ ಸಮಾಧಾನದ ನಿಟ್ಟುಸಿರನ್ನೇ ಎಳೆಯುವಂತಾಯಿತು. ಪ್ಲಾಸಿಯ ಕದನದಲ್ಲಿ (೧೭೫೭) ಇಂಗ್ಲೀಷರ ಮುಂದೆ ಸೋತು ಓಡುತ್ತಿದ್ದಾಗ ಕೈಸೆರೆಯಾದ ಸುರಾಜುದ್ದೌಲನನ್ನು ಮುರ್ಶಿದಾಬಾದಿಗೆ ಎಳೆತಂದರು. ಅಸಾಮಾನ್ಯೆಯ ಪತಿಯನ್ನು ಎಲ್ಲಿ ಕೊಲ್ಲಿಸಲಾಗಿತ್ತೊ ಅದೇ ಸ್ಥಳದಲ್ಲಿ ಅವನನ್ನು ಚಿತ್ರಹಿಂಸೆಗೊಳಪಡಿಸಿ ಮೀರ್ ಜಾಫರನ ಮಗನು ಕೊಲ್ಲಿಸಿದನು.

ಪ್ರಜಾಪೀಡನೆ ಮತ್ತೆ ಅದರ ಪ್ರಾಯಶ್ಚಿತ್ತದ ಈ ಕಥೆ ಇಲ್ಲಿಗೇ ಮುಕ್ತಾಯವಾಗಿದ್ದರೆ ಅದು ಒಂದು ಒಳ್ಳೇ ನೀತಿ ಕಥೆಯಾಗಬಹುದಿತ್ತಾದರೂ ಅಸಾಮಾನ್ಯವಾಗುತ್ತಿರಲಿಲ್ಲ. ಇದರ ನಂತರ ಜರುಗಿದ ಘಟನೆಗಳು ದೈವೀ ಪ್ರತೀಕಾರದ ಇನ್ನೊಂದು ಮುಖವನ್ನು ತೋರಿಸಿದವು— ಅದು ಇನ್ನೂ ಹೃದಯಸ್ಪರ್ಶಿಯಾಗಿದೆ.

ಅಸಾಮಾನ್ಯೆಗೆ ಅವಳ ದಾಸಿ ಸುರಾಜುದ್ದೌಲನ ಮೃತ್ಯುವಿನ ಸುದ್ದಿಯನ್ನು ಹೇಳಿದಾಗ ಅದರ ತಾತ್ಪರ್ಯವನ್ನು ಗ್ರಹಿಸಲು ಅವಳ ಭ್ರಾಂತಮತಿಗೆ ಸ್ವಲ್ಪ ಸಮಯವೇ ಹಿಡಿಯಿತು. ಆ ಮೇಲೆ ಅವಳು "ನಾನೇ ಮಾಡಬೇಕಾಗಿದ್ದುದನ್ನು ದೇವರು ಮಾಡಿಸಿದ," ಎಂದು ಹೇಳಿ ಸುಮ್ಮನಾದಳು. ಅದು ಅವಳ ಬುದ್ಧಿಯ ಸ್ಥಿತಿಯನ್ನು ವಿಶೇಷ ಸುಧಾರಿಸಲಿಲ್ಲ

ಸುರಾಜುದ್ದೌಲನಿಗೆ ಗುಲ್ಲು ಎಂಬ ತರುಣಿಯಾದ ಮಡದಿಯಿದ್ದಳು. ಗಂಡನೊಡನೆ ಅವಳು ಪ್ಲಾಸಿಗೆ ಹೋಗಿದ್ದಳು. ಆಗ ಅವಳು ತುಂಬಿದ ಗರ್ಭಿಣಿ ಸುರಾಜುದ್ದೌಲ ಸೋತು ಪಲಾಯನ ಮಾಡುತ್ತಿದ್ದಾಗ ಅವಳು ಅವನೊಡನಿದ್ದಳು. ವಾಸ್ತವಿಕವಾಗಿ, ಆತ ಸಿಕ್ಕಿಬೀಳಲು ಅದೊಂದು ಕಾರಣವಾಗಿತ್ತು. ಕೋಮಲೆಯೂ ಗರ್ಭಿಣಿಯೂ

ಆಗಿದ್ದ ಗುಲ್ಲುವಿಗಾಗಿ ಸುರಾಜುದ್ದೌಲ ಪ್ರಯಾಣವನ್ನು ನಡುವೆ ನಿಲ್ಲಿಸಬೇಕಾಯಿತು. ಆ ನಡುವೆ ಅವಳಿಗೆ ಪ್ರಸವವೇದನೆ ಪ್ರಾರಂಭವಾಗಿ ಬಿಟ್ಟಿತು. ಈ ಗಡಿಬಿಡಿಯಲ್ಲೇ ಸುರಾಜುದ್ದೌಲ ಶತ್ರುಗಳ ಕೈಗೆ ಬಿದ್ದುದು. ಅತ್ತ ಗಂಡ ಮೃತ್ಯು ಮುಖದಲ್ಲಿದ್ದಾಗ ಇತ್ತ ಇವಳು ಹೆಣ್ಣುಮಗುವೊಂದನ್ನು ಹಡೆದಳು.

ಅದೃಷ್ಟಗಳ ಪರಿವರ್ತನೆ ಬಹು ಕ್ರೂರವಾಗಿದ್ದ ಆ ಕಾಲದಲ್ಲಿ ಉಪ್ಪರಿಗೆಯಿಂದ ತಿಪ್ಪೆಗುರುಳಿದ ಈ ಬಡ ರಮಣಿಯ ಯೋಚನೆ ಯಾರಿಗೆ ಬರಬೇಕು? ಅವಳ ದುರವಸ್ಥೆಯನ್ನು ನೋಡಿ ಹಿಂದೂ ಗೃಹಸ್ಥನ ಹೆಂಡತಿಯೊಬ್ಬಳು ಸಹಜ ಮಾತೃಭಾವದಿಂದ ಅವಳಿಗೂ ಅವಳ ಶಿಶುವಿಗೂ ತನ್ನ ಮನೆಯಲ್ಲಿ ಆಶ್ರಯವಿತ್ತಳು.

ಈ ಸಮಾಚಾರ ಹೇಗೋ ಅಸಾಮಾನ್ಯೆಯ ಕಿವಿಯನ್ನು ಮುಟ್ಟಿತು. ಅವಳ ಭ್ರಂಶಗೊಂಡ ಮನಸಿನಲ್ಲಿ ಅದು ಕನಿಕರವನ್ನು ಬಿತ್ತಿತು. ಹುಚ್ಚು ಹಿಡಿದವರಲ್ಲಿ ಮಾತ್ರವೇ ಕಾಣಬರುವ ಅಕ್ಷುಣ್ಣವಾದ ನಿರ್ಧಾರದಿಂದ ಅವಳು ತನ್ನ ಮುಂದಿನ ದಾರಿಯನ್ನು ಗೊತ್ತುಪಡಿಸಿಕೊಂಡಳು.

ಅಸಾಮಾನ್ಯೆ ಒಂದು ದಿನ ಮನೆಯಿಂದ ಕಣ್ಮರೆಯಾದಳು. ಅನಾಥಳಾದ ಗುಲ್ಲು ಎಲ್ಲಿದ್ದಾಳೆಂದು ಹುಡುಕುವುದು ಅವಳ ಉದ್ದೇಶವಾಗಿತ್ತು. ಓಣಿಯಿಂದ ಓಣಿಗೆ ಮನೆಯಿಂದ ಮನೆಗೆ ಗುಲ್ಲುವನ್ನು ವಿಚಾರಿಸುತ್ತ ಹೊರಟಳು. ಗುಲ್ಲು ಆಶ್ರಯ ಪಡೆದಿದ್ದ ರಸ್ತೆಯಲ್ಲಿ ಅವಳು ವಿಚಾರಣೆಯನ್ನು ಪ್ರಾರಂಭಿಸಿದಾಗ ಅವಳಿಗೆ ಈ ಸುದ್ದಿ ಮುಟ್ಟಿತು. ಗುಲ್ಲು ಭಯಭ್ರಾಂತಳಾದಳು. ತನ್ನ ಪತಿ ಅಸಾಮಾನ್ಯೆಗೆ ಮಾಡಿದ ಅಪರಾಧದ ಅರಿವಿದ್ದ ಅವಳು ಈ ಭ್ರಮಿಷ್ಠ ಹೆಂಗಸಿನ ಪ್ರತೀಕಾರದ ಕಲ್ಪನೆಯಿಂದಲೇ ನಡುಗಿದಳು. ಅಲ್ಲಿ ಉಳಿದರೆ ಉಳಿಗಾಲವಿಲ್ಲೆಂದುಕೊಂಡು ತನ್ನ ಅಮೂಲ್ಯವಾದ ಶಿಶುವಿನೊಡನೆ ಹೊರಬಿದ್ದು ಪಲಾಯನ ಮಾಡಿದಳು.

ಆದರೆ ಅಷ್ಟರಲ್ಲಿ ಅಸಾಮಾನ್ಯೆ ಅವಳನ್ನು ಕಂಡುಬಿಟ್ಟಳು. ಅನಂತರ ಒಂದು ವಿಚಿತ್ರ ಸನ್ನಿವೇಶ ಉತ್ಪನ್ನವಾಯಿತು. ಕೋಮಲೆಯಾದ ಯವನ ತರುಣಿಯೊಬ್ಬಳು ಮುಂದೆ ಮುಂದೆ ಸಾಗಿದ್ದಾಳೆ, ಇನ್ನೊಬ್ಬ ಸುಂದರಿ–ಆದರೆ ಹುಚ್ಚು ನೋಟದ ತರುಣಿ ಅವಳನ್ನು ಬೆನ್ನಟ್ಟಿದ್ದಾಳೆ. ಅಸಾಮಾನ್ಯೆ ಗುಲ್ಲುವನ್ನು ಸಮೀಪಿಸಿದಂತೆ ಅವಳ ಅಂಜಿಕೆ ಮೇರೆ ಮೀರಿತು. ತನ್ನನ್ನೂ ತನ್ನ ಎಳೆಗೂಸನ್ನೂ ಕೊಲ್ಲದಿರಳೆಂದು ಆ ಯವನ ರಮಣಿ ಓಟವನ್ನೇ ಪ್ರಾರಂಭಿಸಿದಳು. ದಿಲ್ಲಿಯ ದಾರಿ ಹಿಡಿದು ಓಡುತ್ತ ಅವಳು ಗಂಗಾನದಿಯನ್ನು ತಲುಪಿದಳು.

ನದಿ ಆಗ ದಾಟುವ ಪರಿಸ್ಥಿತಿಯಲ್ಲಿ ಇದ್ದಿಲ್ಲ. ಗಾಳಿ ಬಿಟ್ಟಿತ್ತು. ಆದರೆ ಗುಲ್ಲುವಿಗೆ ಜೀವದ ಭಯ ಹಿಡಿದಿತ್ತು. ಅವಳು ತನ್ನ ಬೆರಳ ಬೆಲೆ ಬಾಳುವ ಉಂಗುರವನ್ನು ಕಳಚಿ ಅಂಬಿಗನೊಬ್ಬನ ಕೈಯಲ್ಲಿಟ್ಟು ಹೇಗಾದರೂ ತನ್ನನ್ನು ಆ ದಡಕ್ಕೆ ಮುಟ್ಟಿಸೆಂದು ಅಂಗಲಾಚಿದಳು. ಅಂಬಿಗ ಹಣದಾಶೆಯಿಂದ ಸಂಶಯಾಸ್ಪದ ಹವೆಯಲ್ಲಿ ದೋಣಿಯನ್ನು ಹೊರಡಿಸಿದ. ಹುಚ್ಚಿ ಅಸಾಮಾನ್ಯೆ ಗಂಗೆಯ ದಡವನ್ನು ಸೇರಿದಾಗ ಹಕ್ಕಿ ಹಾರಿ ಬಿಟ್ಟಿತ್ತು.

ಆದರೆ ಗಂಗೆ ಒಮ್ಮೆಲೇ ಹೆಚ್ಚು ಪ್ರಕ್ಷೋಭಗೊಂಡಳು. ತೆರೆಗಳು ಉಬ್ಬಿದವು. ಅಸಾಮಾನ್ಯೆ ಉನ್ಮತ್ತ ದೃಷ್ಟಿಯಿಂದ ನೋಡುತ್ತಿದ್ದಂತೆ ದೋಣಿ ಬುಡಮೇಲಾಗಿ ಹೋಯಿತು. ಮಗುವನ್ನು ಎದೆಗವಚಿಕೊಂಡಿದ್ದ ಗುಲ್ಲು ನೀರಿನ ಪಾಲಾದಳು.

ಯಾವ ಅಂಬಿಗನೂ ಅಪಘಾತಕ್ಕೀಡಾದ ಅಬಲೆಯ ಮತ್ತು ಕೂಸಿನ ಪ್ರಾಣ ಉಳಿಸಲು ನದಿಗಿಳಿಯುವ ಸಾಹಸ ಮಾಡಲಿಲ್ಲ. ತಮ್ಮ ಗಂಗೆಯ ಆಟೋಪದ ಪರಿಚಯು ಅವರಿಗೆ ಚೆನ್ನಾಗಿತ್ತು. ಹುಚ್ಚಿಗೆ ಮಾತ್ರ ನಿರ್ಧಾರಕ್ಕೆ ಬರಲು ತಡ ಹಿಡಿಯಲಿಲ್ಲ. ಅವಳು ಸೆರಗನ್ನು ಟೊಂಕಕ್ಕೆ ಬಿಗಿದು ನೀರಿಗೆ ಧುಮುಕಿದಳು. ತದೇಕ ಚಿತ್ತದಿಂದ ಈಸಿ ಅವಳು ದೋಣಿ ಮುಳುಗಿದಲ್ಲಿ

ಸೇರಿ ಗುಲ್ಲುವಿನ ಮುಂದಲೆ ಹಿಡಿದು ಎಳೆಯುತ್ತ ದಡದತ್ತ ಬಂದಳು. ಅಮಾನುಷವಾದ ಪ್ರಯತ್ನದಿಂದ ಗಂಗೆಯನ್ನು ಗೆದ್ದು ಅವಳು ದಡವನ್ನು ಸಮೀಪಿಸಿದಳು. ಚಕಿತರಾದ ಅಂಬಿಗರು ಅವಳ ನೆರವಿಗೆ ಬಂದರು. ಗುಲ್ಲುವನ್ನು ನದಿಯಿಂದೆತ್ತಿ ದಡಕ್ಕೆ ತಂದರು.

ಜೀವನದಲ್ಲಿ ಕಷ್ಟವನ್ನು ಕಂಡರಿಯದ ಗುಲ್ಲುವಿನ ಜೀವ ಉಳಿಸುವ ಮಾತು ಕೈಮೀರಿ ಹೋಗಿತ್ತು. ಆದರೆ ವಿಧಿವಿಲಾಸದಿಂದ ಅವಳ ಟೊಂಕಕ್ಕೆ ಬಿಗಿದಿದ್ದ ಮಗು ಇನ್ನೂ ಬದುಕಿತ್ತು. ಹೆಂಗಸರಲ್ಲಿ ಮಾತ್ರವೇ ಇರುವ ಯಾವುದೋ ಅಸಂಬದ್ಧ ಮನೋವ್ಯಾಪಾರದ ಪ್ರೇರಣೆಯಿಂದ ಅಸಾಮಾನ್ಯೆ ತನ್ನ ಪತಿಘಾತಕನ ನಿರ್ಗತಿಕ ಹೆಂಡತಿಯನ್ನೂ ಮಗುವನ್ನೂ ಕಾಪಾಡಬೇಕೆಂಬ ಹಂಬಲದಿಂದ ಅವಳನ್ನು ಹುಡುಕಿಕೊಂಡು ಬಂದಿದ್ದಳು. ಈಗ ತಾಯಿಯನ್ನು ಕಾಪಾಡುವ ಪ್ರಶ್ನೆ ಉಳಿದಿರಲಿಲ್ಲ. ಆದರೆ ತನ್ನ ಅನಾಥತೆಯಿಂದ ಇನ್ನಷ್ಟು ಅಸಹಾಯವಾಗಿದ್ದ ಮಗುವಿನ ಮೇಲೆ ಅವಳ ಪ್ರೇಮವೆಲ್ಲ ಹರಿಯಿತು.

ಅಸಾಮಾನ್ಯೆ ಆ ಮಗುವನ್ನು ಕಾಪಾಡಲು ನಿಶ್ಚಯಿಸಿದಳು. ಪೂರ್ವ ಬಂಗಾಲದ ಒಂದು ಹಳ್ಳಿಯಲ್ಲಿ ನೆಲಸಿ ಮಗುವಿನ ಪಾಲನೆಗಾಗಿ ಜೀವನವನ್ನೇ ಧಾರೆಯೆರೆದಳು. ಶತ್ರುವಿನ ಮಗುವನ್ನು ಸಾಕುತ್ತಿರುವ ಇವಳು ದೇವಾಂಶ ಸಂಭೂತಳೆಂದು ಜನ ಭಾವಿಸಿದರು. ಇಂದಿಗೂ ಪೂರ್ವ ಬಂಗಾಲದಲ್ಲಿ ಅಸಾಮಾನ್ಯೆಯ ಈ ಅಸಾಮಾನ್ಯ ಕಥೆ ಜನರ ಬಾಯಲ್ಲಿದೆ. *



ವಿಜ್ಞಾನಿಯೊಬ್ಬ ಅಣುಶಕ್ತಿಯಿಂದ ವಿದ್ಯುತ್ ಉತ್ಪಾದಿಸುವ ಅರ್ಥ ಶಾಸ್ತ್ರವನ್ನು ಹೀಗೆ ವಿವರಿಸಿದ್ದಾರೆ: "ಹತ್ತು ರೂಪಾಯಿಯ ಶಿಗಡಿಯಲ್ಲಿ ಹತ್ತು ರೂಪಾಯಿಯ ಕಲ್ಲಿದ್ದಲು ಉರಿಸಿದರೆ ಹತ್ತು ರೂಪಾಯಿಯ ಉಷ್ಣತೆ ದೊರೆಯುವುದು. ಕಲ್ಲಿದ್ದಲಿಯ ಬದಲು ಹತ್ತು ರೂಪಾಯಿಯ ಯುರೇನಿಯಂ ಉಪಯೋಗಿಸಿದರೆ ೧೦,೦೦೦ ರೂಪಾಯಿಗಳ ಉಷ್ಣತೆ ದೊರಕುವುದು. ಅದಕ್ಕಾಗಿ ನೀವು ಒಂದು ಲಕ್ಷ ರೂಪಾಯಿ ಬೆಲೆಯ ಒಲೆ ತಯಾರಿಸಬೇಕಾಗುವುದು. ಹತ್ತು ರೂಪಾಯಿಯ 'ಭಾರ ಜಲ' ವನ್ನು ಉಪಯೋಗಿಸಿದರೆ ಒಂದು ಲಕ್ಷ ರೂಪಾಯಿಗಳ ಉಷ್ಣತೆಯು ದೊರೆಯುವುದು ನಿಜವಾದರೂ ಅದಕ್ಕಾಗಿ ಒಂದು ಕೋಟಿ ರೂಪಾಯಿ ಬೆಲೆಯ ಒಲೆ ಬೇಕಾಗುವುದು."

* * *

## ಬಾರ್ನ್ ವಿಡೊ

'ಟೊಳ್ಳುಗಟ್ಟಿ' ನಾಟಕದಲ್ಲಿ ಕೈಲಾಸಂ 'ಪರಮ ಪವಿತ್ರ' ಳಾಗಿರುವ ಮಡೀ ಹೆಂಗಸಿನ ಪಾತ್ರವನ್ನು ವಹಿಸಿದ್ದರು. ಅಂದು ಅವರ ಅಭಿನಯಕ್ಕೆ ಮೆಚ್ಚಿದ ಒಬ್ಬಾನೊಬ್ಬರು ಕೈಲಾಸವಿನ ಪಾರ್ಟನ್ನು ಕಂಡು "ಒಳ್ಳೇ born widow ಹಾಗೆ act ಮಾಡ್ತಾರೆ" ಎಂದಿದ್ದರಂತೆ.

ಸಂಗ್ರಹ: "ಚಿರಂಜೀವಿ"

# ಇದುವೆ ಜೀವ, ಇದು ಜೀವನ

ನಾನಾಗ ಲೈಬ್ರರಿ ಚಟುವಟಿಕೆ, ಸಾಹಿತ್ಯ ಸಭೆಗಳು ಮೊದಲಾದ ಸಾರ್ವಜನಿಕ ಚಟುವಟಿಕೆಗಳಲ್ಲಿ ಅಷ್ಟಿಷ್ಟು ಭಾಗ ವಹಿಸುತ್ತಿದ್ದೆ. ವಯಸ್ಸು ಇನ್ನೂ ತೀರ ಎಳಕ. "ಜನಸೇವೆ"ಯ ವಿಷಯ ತುಂಬ ಹುಚ್ಚು ಹುಚ್ಚು ವಿಚಾರಗಳನ್ನಿಟ್ಟುಕೊಂಡು ಕಡೆಗೊಂದು ದಿನ ನಾನೂ ಗಾಂಧಿ ನೆಹರೂ ಆಗುತ್ತೇನೆಂದು ಕನಸು ಕಟ್ಟುತ್ತಿದ್ದೆ.

ಸಾರ್ವಜನಿಕ ಸೇವೆ, ರಾಜಕಾರಣ ಇವುಗಳಲ್ಲಿ ಸ್ವತಃ ಸಾಕಷ್ಟು ಸವೆದಿದ್ದ ನನ್ನ ಆಗಿನ ಆಫೀಸ್ ಯಜಮಾನರು ನನ್ನ ಚಟುವಟಿಕೆಗಳನ್ನು ಕೆಲ ದಿನ ಮೌನವಾಗಿ ಅನುಸರಿಸುತ್ತಿದ್ದು ಒಂದು ದಿನ ನನ್ನನ್ನು ಕರೆದು ಹೇಳಿದ ಮಾತು ಸೇವೆಯ ಬಗ್ಗೆ ಭ್ರಾಮಕ ಮನೋರಾಜ್ಯದಲ್ಲಿ ವಿಹರಿಸುವ ತರುಣರಿಗೆಲ್ಲ ಗಮನಾರ್ಹವಾದದ್ದು :

"ನಿನ್ನ ಸಾರ್ವಜನಿಕ ಕಾರ್ಯಗಳನ್ನೆಲ್ಲ ನಾನು ನೋಡುತ್ತಿದ್ದೇನೆ. ಆಫೀಸ್ ವೇಳೆಯ ಹೊರಗೇ ನೀನಿವುಗಳನ್ನು ಮಾಡುತ್ತಿರುವುದರಿಂದ ನನಗೇನೂ ನಷ್ಟವಿಲ್ಲ. ಆದರೆ ನಿನ್ನ ಆರ್ಥಿಕ ಸ್ಥಿತಿ ನನಗೆ ಗೊತ್ತು. ಆದ್ದರಿಂದ ಸಾರ್ವಜನಿಕ ಜೀವನದಲ್ಲಿ ಹಳೇ ಹುಲಿಯಾದ ನಾನೊಂದು ಮಾತು ಹೇಳಲೆ?" ಎಂದವರು ಕೇಳಿದರು.

"ಹೇಳಿ," ಎಂದೆ.

"ನೀನು ದೋಸೆ ಮಾಡುವುದನ್ನು ನೋಡಿದ್ದೀಯಾ?"

"ಹೌದು."

"ದೋಸೆ ಹೊಯ್ಯುವ ಮೊದಲು ಏನು ಮಾಡುತ್ತಾರೆ? .... ಹಂಚಿಗೆ ಎಣ್ಣೆ ಹಚ್ಚುತ್ತಾರಲ್ಲವೆ?"

"ಹೌದು."

"ಹಚ್ಚದಿದ್ದರೆ ಏನಾಗುತ್ತದೆ?"

"ದೋಸೆ ಏಳುವುದಿಲ್ಲ" ಎಂದೆ.

"ಎಷ್ಟು ಸಲ ಹಚ್ಚಬೇಕಾಗುತ್ತದೆ?" ಎಂದವರು ಕೇಳಿದರು.

"ಪ್ರತಿ ದೋಸೆಗೊಮ್ಮೆ."

"ಅಲ್ಲವೆ?" ಅವರು ಮುಂದುವರಿಸಿದರು. "ಜನಸೇವೆ ಎಂದರೂ ಹಾಗೆಯೆ ಎಂದು ತಿಳಿದುಕೋ. ಪ್ರತಿದೋಸೆಗೊಮ್ಮೆ ಎಣ್ಣೆ ಹಚ್ಚಬೇಕು. ಪ್ರತಿ ಸೇವೆಗೊಮ್ಮೆ ತ್ಯಾಗ ಮಾಡಬೇಕು. ತ್ಯಾಗದ ಎಣ್ಣೆ ಹಚ್ಚದೆ ಸೇವೆಯ ದೋಸೆ— ನೀನೆಣಿಸುವ ಕೀರ್ತಿ— ಏಳುವುದಿಲ್ಲ. ಮೊದಲನೇ ದೋಸೆಗೆ ಹಚ್ಚಿದ ಎಣ್ಣೆಯಿಂದ ಎರಡನೇ ದೋಸೆ ಏಳುವುದಿಲ್ಲ. ಮೊನ್ನೆ ಮಾಡಿದ ತ್ಯಾಗ ಇಂದು ಜನಕ್ಕೆ ನೆನಪುಳಿಯುವುದಿಲ್ಲ. ಆದರ ಮೇಲಿಂದ ಇಂದು ನಿನ್ನ ಪ್ರಭಾವ ಉಳಿಯುವುದಿಲ್ಲ. ಎಣ್ಣೆಹಚ್ಚದೆ ಹೊಯ್ದ ದೋಸೆ ಎಬ್ಬಿಸುವಾಗ ಹರಿಹರಿದು ಹೋಗುವ ಹಾಗೆ ತ್ಯಾಗವಿಲ್ಲದ ಸಾರ್ವಜನಿಕ ಕಾರ್ಯ ನಿಷ್ಫಲವಾಗುತ್ತದೆ. ನಿರಂತರ ತ್ಯಾಗ ಮಾಡುವ ಧೈರ್ಯ ಮತ್ತು ಯೋಗ್ಯತೆ ಇದ್ದರೆ ಮಾತ್ರ ಸಾರ್ವಜನಿಕ ಕಾರ್ಯ ಒಳ್ಳೇದು. ನಿನಗೂ ಜನರಿಗೂ."

— ರಾ. ವಿ. ಉಡುಪಿ

ಸುಮಾರು ಮೂವತ್ತು, ಮೂವತ್ತೈದು ವರ್ಷಗಳ ಹಿಂದಿನ ಮಾತು. ಆಗ 'ರಿಪೀಟಿಂಗ್ ಅಲಾರ್ಮ್' ಆಗುವ ಗಡಿ

ಯಾರಗಳು ಬಳಕೆಯಲ್ಲಿದ್ದವು. ನಮ್ಮ ತಂದೆಯವರು ಬಿ. ಎ. ಪರೀಕ್ಷೆಗೆ ಕಟ್ಟಿದ್ದರು. ಪರೀಕ್ಷೆ ಬಹಳ ಹತ್ತಿರ ಬಂದದ್ದರಿಂದ, ಬೇಗನೇ ಎದ್ದು ಓದುವುದಕ್ಕಾಗಿ ದಿನಾಲು 'ಅಲಾರ್ಮ್' ಇಟ್ಟು ಮಲಗಿಕೊಳ್ಳುತ್ತಿದ್ದರು. ಪರೀಕ್ಷೆ ಒಂದು ತಿಂಗಳು ಮಾತ್ರ ಇದ್ದಾಗ ನಮ್ಮ ಅಜ್ಜಿಯವರು ತಮ್ಮ ಹಳ್ಳಿಯಿಂದ ನಮ್ಮ ಮನೆಗೆ ತಂದೆಯವರಿಗೆ ಕೆಲಸದಲ್ಲಿ ನೆರವಾಗುವುದಕ್ಕಾಗಿ ಬಂದರು. ಆಗ ಅವರ ಹಳ್ಳಿಯಲ್ಲಿ ಕಳ್ಳರ ಹಾವಳಿ ಬಹಳವಾಗಿದ್ದಿತು. ಯಾವ ಸಮಯದಲ್ಲಿಯಾದರೂ ಕಳ್ಳರು ಬಾಗಿಲು ಒಡೆದು ಪ್ರವೇಶಿಸುವ ಭಯವಿತ್ತು.

ಅಂದು ಅಜ್ಜಿಯವರು ಬಂದ ಮೊದಲನೆ ದಿನವಾಗಿತ್ತು. ನಮ್ಮ ತಂದೆಯವರು ಎಂದಿನಂತೆ ಬೆಳಿಗ್ಗೆ ನಾಲ್ಕು ಗಂಟೆಗೆ ಅಲಾರ್ಮ್ ಇಟ್ಟು ಮಲಗಿದರು. ಸರಿಯಾಗಿ ಬೆಳಿಗ್ಗೆ ನಾಲ್ಕು ಗಂಟೆಗೆ ನಮ್ಮ ಅಜ್ಜಿ ಭಯದಿಂದ "ಮಾಧೂ, ಮಾಧೂ" ಎಂದು ಕೂಗುತ್ತ ಬರುವುದನ್ನು ನೋಡಿ ನಮ್ಮ ತಂದೆಯವರು ಏನು ಸಮಾಚಾರವೆಂದು ಕೇಳಲು ಅವಳು ಒಂದೇ ಉಸಿರಿನಲ್ಲಿಯೇ ಉತ್ತರಿಸಿದಳು: "ಒಳಗೆ ಕಳ್ಳರು ಬಂದು ದೇವರ ಪೂಜೆ ಮಾಡ್ತಾ ಇದಾರೆ, ಬೇಗ ಏಳು! ಗಂಟೆ ಬಾರಸ್ತಾ ಇರೊ ಸಪ್ಪಳ ಹೇಗೆ ಕೇಳಸ್ತಾ ಇದೆ ನೋಡು."

— ಎಮ್. ಸಾವಿತ್ರಿ

ಈ ಘಟನೆ ನಡೆದುದು ಮಂಗಳೂರಿನ ಸಮೀಪ ಒಂದು ಸ್ಥಳದಲ್ಲಿ. ಅಲ್ಲೊಂದು ಗೂಡಿನಂಗಡಿ ಇದೆ. ಅದೇ ಊರಿನ ಸಂಕಪ್ಪ ಎಂಬವರು, ಅಂಗಡಿಯ ವೆಂಕಪ್ಪನಿಗೆ ಮೂರು ರೂಪಾಯಿ ಕೊಡುವುದಿತ್ತು. ಹಲವು ಸಮಯದಿಂದ ಈ ಸಾಲವನ್ನು ಸಂಕಪ್ಪನವರು ಮರುಪಾವತಿ ಮಾಡದ್ದರಿಂದ, ವೆಂಕಪ್ಪ ಅದರ ಆಶೆಯನ್ನೇ ತೊರೆದಿದ್ದ.

ಮೊನ್ನೆ ಶನಿವಾರ ಸಂಕಪ್ಪನವರು ಒಂದೇ ಸವನೆ ಅಂಗಡಿಯತ್ತ ಧಾವಿಸುತ್ತಿರುವುದನ್ನು ಕಂಡು ವೆಂಕಪ್ಪ ಚಕಿತನಾದನು. ಏಕೆಂದರೆ ಸಾಲ ಕೊಂಡಂದಿನಿಂದ ಆ ದಾರಿಯಲ್ಲಿ ಅವರು ಹೋಗುತ್ತಿದ್ದಿಲ್ಲ. ಇಂದು ತನ್ನ ಮೂರು ರೂಪಾಯಿ ಮರುಪಾವತಿಯಾದೀತೆಂದೆಣಿಸಿದನು ವೆಂಕಪ್ಪ.

ಅಂಗಡಿಯನ್ನು ಸಮೀಪಿಸುತ್ತಾ ಸಂಕಪ್ಪನವರು "ವೆಂಕಪ್ಪಾ" ಎಂದು ಕರೆದರು. ಆತ್ಯಾಶ್ಚರ್ಯದಿಂದ "ಏನು ಸ್ವಾಮಿ" ಎಂದ ವೆಂಕಪ್ಪ. ತನ್ನ ಬಲಗೈಯನ್ನು ಕಿಸೆಯೊಳಗೆ ತುರುಕಿಸುತ್ತಾ "ನನ್ನದೆಷ್ಟು ಬಾಕಿ?" ಎಂದರು. "ಮೂರು ರೂಪಾಯಿ ಸ್ವಾಮಿ" ಎಂದ ವೆಂಕಪ್ಪ ಹಗುರವಾಗಿ. ಆ ಕೂಡಲೇ "ಎರಡು ರೂಪಾಯಿ ಇಲ್ಲಿ ಕೊಡು" ಎಂದರು ಏರು ಸ್ವರದಲ್ಲಿ ಸಂಕಪ್ಪನವರು. ಐದು ರೂಪಾಯಿಯ ನೋಟನ್ನು ಕೊಟ್ಟು ತನ್ನ ಸಾಲ ತೀರಿಸುತ್ತಾರೆಂದೆಣಿಸಿದ ವೆಂಕಪ್ಪ, ಕೂಡಲೇ ಎರಡು ರೂಪಾಯಿಯನ್ನು ಕೊಟ್ಟ. ಸಂಕಪ್ಪನವರು ಎರಡು ರೂಪಾಯಿಯನ್ನು ಕಿಸೆಯಲ್ಲಿಡುತ್ತಾ ವೆಂಕಪ್ಪನೆ, "ಐದು ರೂಪಾಯಿ ಬಾಕಿ" ಎಂದು ನುಡಿದು ನೆಟ್ಟಗೆ ಹೊರಟುಹೋದರು.

— ಕೆ. ನಾಗಪ್ಪಶೆಟ್ಟಿ, ಮಂಗಳೂರು






# ಮುಂಡದ ಮಹಾತ್ಮೆ

(ಸಂಪಾದಕೀಯ ಅಡಿ ಟಿಪ್ಪಣಿಗಳೊಡನೆ)

ಎ. ಆರ್. ವಿ. ರಾವ್

ಎಲ್ಲಾ ಬಿಟ್ಟು ಈ ಮುಂಡಿನ (ಅಥವಾ ಉತ್ತರ ಕರ್ನಾಟಕದವರ ಹಾಗೆ ನಿಮಗೆ ಅಕಾರಾಂತವೇ ಪ್ರಿಯವಾಗಿದ್ದರೆ ಮುಂಡದ[1]) ವಿಷಯ ಹೇಳುತ್ತಾನಲ್ಲ ಎಂದು ಮುಖ ತಿರುಗಿಸಬೇಡಿ. ಇದೊಂದಿದ್ದರೆ ಸಾಕು, ಉಳಿದ ಎಲ್ಲ ಬಟ್ಟೆಗಳನ್ನು ಬಿಸಾಡಿದರೂ ಪರವಾಗಿಲ್ಲ. ಏಕೆಂದರೆ ಇದು ಅವೆಲ್ಲವುಗಳ ಕೆಲಸ ಮಾಡಬಲ್ಲದು. ಇದರಿಂದ ವೀ. ಸೀ. ಯವರ "ಮೈಸೂರು ರುಮಾಲನ್ನು" ಸುತ್ತಬಹುದು ಪ್ರೊ. ಸಂಪದ್ಗಿರಿ ರಾಯರ "ಇಜಾರ"ದ ಬದಲೂ ಇದನ್ನುಪಯೋಗಿಸಬಹುದು. ಗೋವಿನ ಹಾಡನ್ನು ಇದಕ್ಕೆ ಅನ್ವಯಿಸಿ ಹಾಡಿದರೆ ಹೀಗೊಂದು ಕವಿತೆಯಾದೀತು:

ಉಟ್ಟರೆ ಧೋತರವಾದೆ,<br>
ಹೊದ್ದರೆ ಛಾದರವಾದೆ,<br>
ಸುತ್ತಿದರೆ ಮೇಲೆ ರುಮಾಲವಾದೆ;<br>
ಮತ್ತೆ ಮೈ ಒರಸಿದರೆ<br>
ಅಪ್ಪಟ ಟೊವೆಲ್ಲಾದೆ<br>
ನೀನ್ಯಾತಕಾದೆಯೋ<br>
ಎಲವೊ ಪ್ಯಾಂಟೆ?

ಹೇಳುತ್ತಾ ಹೋದರೆ ಒಂದೆರಡು ಪದ್ಯಗಳನ್ನಲ್ಲ ಒಂದು ಮಹಾ ಕಾವ್ಯವನ್ನೇ ಬರೆದೇನು! ಇದರ ಉಪಯೋಗ ನಿಮ್ಮ ಅವಶ್ಯಕತೆಯನ್ನು ಅನುಸರಿಸುತ್ತದೆ. ಟೇಬಲ್ ಕ್ಲಾತ್ ಆಗುತ್ತದೆ, ಉತ್ತರೀಯವಾಗುತ್ತದೆ, ಡೋರ್ ಕರ್ಟನ್ ಆಗುತ್ತದೆ, ಬೆಡ್‌ಶೀಟ್ ಆಗುತ್ತದೆ. ಒಂದೇ

[1] ಇದನ್ನು ಉತ್ತರ ಕರ್ನಾಟಕದಲ್ಲಿ ಲುಂಗಿಯೆಂದು ಕರೆಯುತ್ತಾರೆ. "ಲುಂಗಿ" ಎಂಬುದು "ಲಂಗ" ದ ಪುಲ್ಲಿಂಗ ರೂಪವೆಂದು ನಂಬಲಾಗಿದೆ. ಇದು ನಿಜವಾಗಿದ್ದರೆ ಅಕಾರಾಂತ ಸ್ತ್ರೀಲಿಂಗ ಶಬ್ದವೊಂದು ಪುಲ್ಲಿಂಗದಲ್ಲಿ ಇಕಾರಾಂತವಾಗುವ ಏಕಮಾತ್ರ ಉದಾಹರಣೆ ಇದಾಗುತ್ತದೆ. ಭಾಷಾಶಾಸ್ತ್ರಿಗಳಿಗೆ ಇದು ಸಂಶೋಧನೆಗೆ ಉತ್ತಮ ವಸ್ತುವಾಗಬಲ್ಲದು.

ಮಾತಿನಲ್ಲಿ, ಇದು ನಮ್ಮ ಮಂತ್ರಿಪದಾಕಾಂಕ್ಷಿಗಳಂತೆ ಯಾವ ಪೋರ್ಟ್‌ಫೋಲಿಯೋ ಆದರೂ ಅಡ್ಡಿಯಿಲ್ಲ ಎನ್ನುತ್ತದೆ. ಆದರೆ ಅದರ ಕೆಲಸ ಮಾತ್ರ ಮಂತ್ರಿಗಳ ಕೆಲಸದಂತಲ್ಲ. ನೀವು ಅದರ ಮೇಲೆ ಎಂದೂ ಅವಿಶ್ವಾಸ ಠರಾವು ತರಲಾರಿರಿ. ಪ್ಯಾಂಟು, ಕೋಟು ಇವೆಲ್ಲ ವಿಶ್ವವಿದ್ಯಾಲಯ ಪ್ರೊಫೆಸರುಗಳಂತೆ, ಒಂದೇ ಕೆಲಸಕ್ಕೆ ಯೋಗ್ಯ. ಮುಂಡು ನಮ್ಮ ಪ್ರೈಮರಿ ಶಾಲಾ ಮಾಸ್ತರುಗಳ ಹಾಗೆ. ಎಲ್ಲಾ ವಿಷಯಗಳಿಗೂ ಹೊಂದಿಕೊಳ್ಳುತ್ತದೆ.[2] ಈಗ ನಿಮಗೆ ಅರ್ಥವಾದೀತು, ಎಲ್ಲಾ ಬಿಟ್ಟು ನಾನು ಈ ಉಡುಪನ್ನೇ ಏಕೆ ಅಷ್ಟಾಗಿ ಮೆಚ್ಚುತ್ತೇನೆಂದು.

ಇದರ ಉಪಯೋಗಗಳ ಯಾದಿ ಸಿದ್ಧ ಪಡಿಸುವುದೆಂದರೆ ಪಬ್ಲಿಕ್ ಸರ್ವಿಸ್ ಕಮಿಶನ್‌ನವರು ಇಂಟರ್ವ್ಯೂ ಮಾಡಿದಂತೆಯೆ. ಒಂದು ಕೆಲಸಕ್ಕೆ ಸಾವಿರ ಅರ್ಜಿಗಳು. ಹಾಂ, ನೋಡಿ ಅರ್ಜಿ ಎಂದ ತತ್‌ಕ್ಷಣ ನೆನಪಾಯಿತು. ಮುಂಡನ್ನು ಕೊಂಡರೆ ದರ್ಜಿಯ ಅಗತ್ಯವಿಲ್ಲ. ಪ್ಯಾಂಟ್, ಪೈಜಾಮಾದಿಗಳಾದರೆ ಬಟ್ಟೆ ತೆಗೆದುಕೊಂಡು ದರ್ಜಿಯ ಹತ್ತಿರ ಹೋಗಿ, ನಾಳೆಯೇ ಊರಿಗೆ ಹೋಗಬೇಕೆಂದು ದಮ್ಮಯ್ಯ ಹಾಕಿ, ಹೇಳಿದ ಸುಳ್ಳನ್ನು ಸತ್ಯವಾಗಿ ಮಾಡಲು ಅವನು ಬಟ್ಟೆ ಕೊಟ್ಟ, ಒಂದೆರಡು ದಿನ ತಲೆ ಮರೆಸಿಕೊಂಡು ತಿರುಗಬೇಕು.[3] ಇಷ್ಟಾಗಿ ನಾವು ಅವನಿಂದ ಬಟ್ಟೆ ತರಹೋದಾಗ ಪ್ಯಾಂಟಿಗೆ ಗುಂಡಿಯನ್ನೇ ಹೊಲಿದಿರುವುದಿಲ್ಲ.

ಒಂದು ಅತಿ ಕ್ಷೇಮದ ಸಂಗತಿಯೆಂದರೆ ಮುಂಡಕ್ಕೆ ಗುಂಡಿಯೆ ಬೇಡವಾಗಿರುವುದು. ನಾಲ್ಕು ಮಂದಿಯ ಮುಂದೆ ನಗೆಗೀಡಾಗುವ ಪ್ರಸಂಗವೇ ಇಲ್ಲ. ಇದೇನು ಮಹಾ ? ದೊಡ್ಡ ಧೋತರಕ್ಕೂ ಗುಂಡಿ ಬೇಡ, ಅಂತೀರ ? ಆದರೆ ಅದನ್ನು ಉಟ್ಟ ಮೇಲೆ ಕಚ್ಚೆ ಹಾಕಲೇಬೇಕಲ್ಲ. ಅದು ತೊಂದರೆಗೇ ಆಮಂತ್ರಣ. ನೀವು ಶಿಕ್ಷಕರಾಗಿದ್ದರೆ ಶಿಷ್ಯರು, ಇಲ್ಲದಿದ್ದರೆ ಮಕ್ಕಳೋ ಮೊಮ್ಮಕ್ಕಳೋ, ನಿಮ್ಮ ಗಮನ ಸೆಳೆಯಲೆಂದೋ ಅಥವಾ ಶುದ್ಧ ಕುಚೋದ್ಯಕ್ಕೆಂದೋ "ಗುರುಗಳೇ", "ಅಪ್ಪಾ" ಇಲ್ಲವೆ "ಅಜ್ಜಾ" ಎಂದು ಜಗ್ಗಿದರೆ ?[4] ಅಲ್ಲದೆ ಒಂದು ಧೋತರದಲ್ಲಿ ಎರಡು ಮುಂಡಗಳಾಗುತ್ತವೆ.

ಪ್ರವಾಸದಲ್ಲಂತೂ ಇದು ಕಲ್ಪವೃಕ್ಷ. ಒಂದನ್ನು ಉಟ್ಟರೆ ಇನ್ನೊಂದು ಹಾಸಿಗೆಯಾಯಿತು. ಒಯ್ಯಲು ಬೇರೆ ಚೀಲವೂ ಬೇಡ. ಹೊದ್ದರಾಯಿತು. ಒಗೆದು ಹರವಿದರೆ ಅರ್ಧ ತಾಸಿನಲ್ಲಿ ಒಣಗುತ್ತದೆ. ಎಲ್ಲಕ್ಕೂ ಹೆಚ್ಚಿನದಾಗಿ ಇದಕ್ಕೆ ಇಸ್ತ್ರಿ ಇದ್ದರೂ ಒಂದೇ. ಇಲ್ಲದಿದ್ದರೂ ಒಂದೇ.

ಇಂದಿನ ಆರ್ಥಿಕ ಮುಗ್ಗಟ್ಟಿನ ಕಾಲದಲ್ಲಿ ಎರಡರಿಂದ ನಾಲ್ಕು ರೂಪಾಯಿ ಬೆಲೆಯಲ್ಲಿ ಪಾದದ ವರೆಗೂ ನಿಮ್ಮ ಮಾನ ಮುಚ್ಚುವುದಕ್ಕೆ ಮುಂಡವನ್ನು ಬಿಟ್ಟರೆ ಮತ್ತಾವುದು ಆದರ್ಶ ಬಟ್ಟೆ, ಹೇಳಿ ?— ನೀವು ಕೇಳಬಹುದು, ಇದನ್ನುಟ್ಟು ನಡೆಯುವಾಗ ಬಸ್ ಬಂದರೆ, ನಾಯಿ ಬೊಗಳಿದರೆ, ಮಳೆ ಬಂದರೆ, ಚಂದದ ಮಿತ್ರ (ಅರ್ಥಾತ್ ಚಂದಾ ಎತ್ತುವ ಮಿತ್ರ) ಕಂಡರೆ ಓಡುವುದು ಹೇಗೆ ಅಂತ? ನೀವು ಆಂಧ್ರದ ಚಾಂಪಿಯನ್ ಪಿಚ್ಚಯ್ಯ ಬ್ಯಾಡ್‌ಮಿಂಟನ್ ಆಡುವುದನ್ನು ಎಂದಾದರೂ ನೋಡಿದ್ದರೆ ಈ

2 ಪೋಸ್ಟ್‌ಮಾಸ್ತರ್, ಪೋಸ್ಟ್‌ಮನ್, ಜನಗಣನಾ ಪರಿವ್ರಾಜಕ - ಯಾವ ವಿಷಯಕ್ಕೂ.

3 ಆದರೆ ದರ್ಜಿಯನ್ನು ಔಟ್-ದರ್ಜೀಕರಿಸುವ ಸುಳ್ಳನ್ನು ಹೇಳಿ ಪ್ಯಾಂಟನ್ನು ಸಕಾಲದಲ್ಲಿ ಹೊಲಿಸುವ ಕಲೆ ಲೇಖಕರಿಗೆ ಕರಗತವಾಗಿದರೆ ನಮಗೂ ಆ ಗುಟ್ಟು ಕಲಿಸುವರೇ ?

4 ಕಚ್ಚೆಯ ಇನ್ನೊಂದು ದೋಷವೆಂದರೆ ಅದು ನಮ್ಮ ಭೂತಪೂರ್ವ ಮಂಗತನವನ್ನು ನೆನಪಿಗೆ ತರುತ್ತದೆ. ದೇವರು ಕಳಚಿಹಾಕಿದ ನಮ್ಮ ಬಾಲವನ್ನು ನಾವು ಬಟ್ಟೆಯಿಂದ ಪುನರ್ನಿರ್ಮಿಸಿಕೊಳ್ಳಬೇಕೆ ?

ಪ್ರಶ್ನೆಯನ್ನು ಕೇಳುತ್ತಲೇ ಇರಲಿಲ್ಲ. ಕೆಲವೊಮ್ಮೆ ಆತ ಈ ಮಹಾವಸ್ತ್ರಧಾರಿಯಾಗಿಯೇ ಆಡುತ್ತಾನೆ. ಮುಂಡವನ್ನು ಮೊಳಕಾಲ ವರೆಗೆ ಎತ್ತಿ ಕಟ್ಟಿದರೆ ದೂರದಿಂದ ನೋಡುವವರಿಗೆ ಹಾಫ್ ಪ್ಯಾಂಟಿನಂತೆಯೆ ಕಾಣುತ್ತದೆ. ದಕ್ಷಿಣ ಭಾರತದಲ್ಲೊಮ್ಮೆ ಪ್ರವಾಸ ಮಾಡಿ ಬನ್ನಿ. ಆಗ ನಿಮಗನಿಸುತ್ತದೆ ನಿಕ್ಕರಿಗಿಂತ ಇದೇ ಉತ್ತಮ ಅಂತ. ಅಲ್ಲಿ ಮುಂಡಧಾರಿಗಳು ಕ್ರಿಕೆಟ್, ಫುಟ್‌ಬಾಲ್, ಬಾಸ್ಕೆಟ್ ಬಾಲ್‌ನಂಥ ಆಟಗಳನ್ನು ನಿರಾಯಾಸವಾಗಿ ಆಡುತ್ತಾರೆ.[5]

"ದಕ್ಷಿಣ ಇಂಡಿಯದಲ್ಲಿ" ಎಂದು ಹೇಳಿದಾಕ್ಷಣ ಮುಂಡು ಅಲ್ಲಿ ಮಾತ್ರ ಪ್ರಸಾರದಲ್ಲಿರುವ ವೇಷವೆಂದು ಬಗೆಯಬೇಡಿ. ಅದು ನಿಮ್ಮ ಧೋತರಕ್ಕಿಂತ ಅಂತರ್-ರಾಷ್ಟ್ರೀಯ ಸ್ಥಾನಮಾನ ಪಡೆದಿದೆ. ನೀಲಕಂಠಶಾಸ್ತ್ರಿ ಅಥವಾ ಸಾಲೆತ್ತೂರರ ಅಭಿಪ್ರಾಯಗಳೇನೇ ಇರಲಿ ನನ್ನ ದೃಢಾಭಿಪ್ರಾಯದಲ್ಲಿ ದಕ್ಷಿಣ ಭಾರತದ ಅರಸರು ಹೊರದೇಶಗಳಲ್ಲಿ ಆಧಿಪತ್ಯ ನಡೆಸುತ್ತಿದ್ದಾಗ ಅಲ್ಲಿ ಅವರ ಮುಂಡವು ಪ್ರಸಾರಹೊಂದಿತು; ಅವರ ರಾಜ್ಯ ನಿರ್ನಾಮವಾಗಿ ಹೋದರೂ ಇದು ವಿಜಯ ಧ್ವಜವಾಗಿ ಇನ್ನೂ ಹಾರಾಡುತ್ತಿದೆ. ಬರ್ಮಾದ ಉ ನು, ಘಾನಾದ ಎನ್‌ಕ್ರುಮ ಇವರ ವೇಷ ಭೂಷಣಗಳೆಲ್ಲ ಈ ಮುಂಡದ ವಂಶಜರು. ನಾವು ಶಾಂತಿಪ್ರಿಯರು, ಬಿಳಿ ವಸ್ತ್ರ ಉಪಯೋಗಿಸುತ್ತೇವೆ. ಆಫ್ರಿಕನ್ನರು ತಮ್ಮ ಕ್ರಾಂತಿಕಾರಿ ಮನೋಭಾವನೆಗ ತಕ್ಕಂತೆ ಬಣ್ಣಬಣ್ಣದ ವಸ್ತ್ರ ಉಪಯೋಗಿಸುತ್ತಾರೆ. ನಾವು ಉಡುವ ರೀತಿ ಅವರಿಗೆ ತಿಳಿಯದೆ ಮುಂಡದ ಎರಡೂ ತುದಿಗಳನ್ನು ಸೇರಿಸಿ ಹೊಲಿದು ಕೊಳವೆಯಂತೆ ಮಾಡಿ ಅದರ ವಿವಿಧೋದ್ದೇಶ ಉಪಯೋಗವನ್ನು ಹಾಳು ಮಾಡಿಕೊಂಡಿದ್ದಾರೆ.

ದಕ್ಷಿಣ ಇಂಡಿಯದಲ್ಲಾದರೂ ಮುಂಡದಲ್ಲಿ ಏಕರೂಪತೆಯಿಲ್ಲ. ಜಾನ್‌ಸನ್ ಹೇಳಲಿಲ್ಲವೇ–ವೈವಿಧ್ಯವೇ ಜೀವನದ ಸಾರ––ಎಂದು. ತಮಿಳರದು ಸ್ವಲ್ಪ ಅವರ ಮಾತಿನಂತೆಯೇ ಅಸ್ತವ್ಯಸ್ತ. ನಾಡಾರರ ಉಡುಗೆ ನೋಡಿದರೆ ಇದು ತಿಳಿಯುತ್ತದೆ. ಕೇರಳೀಯರದು ಅವರಿಗಿಂತ ತುಸು ಬೇರೆ ಬಗೆ— ಸ್ವಲ್ಪ ಉತ್ತಮ. ಉಟ್ಟಾಗ ಇವರ ಮುಂಡದ ಎರಡು ತುದಿಗಳು ಕಾಲಿನ ಉದ್ದಕ್ಕೂ ಬಂದಿದ್ದು ಗಾಳಿ ಬಂದಾಗ ಹಾರಾಡಿ ಕಾಲಿನ ಸ್ವಲ್ಪ ಭಾಗವನ್ನು ತೋರಿಸುತ್ತದೆ. ಮೈಸೂರು ಮತ್ತು ಆಂಧ್ರರದು ಬೇರೆ ರೀತಿ. ಮುಂಡದ ಒಂದು ತುದಿ ಮಾತ್ರ ಹೊರಗೆ ಕಾಣಿಸುತ್ತದೆ. ಕನ್ನಡಿಗರನ್ನು ತೆಲುಗರಿಂದ ಗುರುತಿಸುವುದು ಬಹು ಸುಲಭ. ಕನ್ನಡಿಗರ ಮುಂಡದ ತುದಿ ಅವರ ಎಡಗೈ ನೇರದಲ್ಲಿರುತ್ತದೆ. ತೆಲುಗರದು ಬಲಗೈ ನೇರದಲ್ಲಿ. ಈ ನಿಯಮಗಳು ಈಚೆಗೆ ಕೊಂಚ ಸಡಿಲಾಗಿವೆ. ಎಲ್ಲರೂ ಎಲ್ಲ ರೀತಿಯಲ್ಲೂ ಉಟ್ಟು ಅರಾಜಕತೆಯಲ್ಲೂ ಒಂದು ಐಕ್ಯವನ್ನು ತೋರಿಸುತ್ತಾರೆ!

ಸರಿಯಾಗಿ ಉಡಲು ಕಲಿತವನಿಗೆ ಮುಂಡ ಉಡಲು ಎರಡು ನಿಮಿಷಗಳೂ ಬೇಡ. ಎರಡು ಮಿನಿಟುಗಳಲ್ಲಿ ಹತ್ತು ಸಾರಿ ಉಟ್ಟು ಬಿಚ್ಚಬಹುದು. ಬೆಲ್ಟ್ ಹಾಕುವುದು ಅಥವಾ ದಾರ ಬಿಗಿಯುವುದು ಪರಿಣತರ ಲಕ್ಷಣವಲ್ಲ. ಗಂಟು ಹಾಕಿದರಂತೂ ಮುಂಡದ ವೈಶಿಷ್ಟ್ಯವೇ ಹೋಗುತ್ತದೆ. ಅದನ್ನು ಸುತ್ತಿಕೊಳ್ಳಬೇಕು, ಅಷ್ಟೇ. ಇದೂ ಬಲು ಸುಲಭ. ನಿಮಗೆ ಬಾರದಿದ್ದರೆ ಈಗಾದರೂ ಕಲಿಯಿರಿ. ಮೊದಮೊದಲು ಮನೆಯಲ್ಲಿದ್ದಾಗ ನೈಟ್ ಪೈಜಾಮದ ಬದಲು ಉಪಯೋಗಿಸಿರಿ. ಒಂದೇ ಬಾರಿಗೆ ರಸ್ತೆಗೆ ಹೋಗಬೇಡಿ !

ಮುಂಡಧಾರಿಗಳಾಗಬೇಕೆಂಬ ಅಮೆಚೂರರಿಗೆ ಕೆಲ ಸಲಹೆಗಳು: ಒಂದು ಮುಂಡವನ್ನು ತೆಗೆದುಕೊಂಡು ಅದನ್ನು ನಿಮ್ಮ ಸುತ್ತಲೂ

---

[5] ವಿಧಾನಸಭೆಗಳಲ್ಲಿ ಮಂತ್ರಿಗಳು ಕೂಡ ಮುಂಡದಲ್ಲೇ ತಮ್ಮ ತಿಪ್ಪರಲಾಗಗಳನ್ನು ಹಾಕುತ್ತಾರೆಂದ ಮೇಲೆ ಅದನ್ನುಟ್ಟರೆ ನಿಮ್ಮ ಚಲನ ಕಾರ್ಯಕ್ಕೆ ಯಾವ ಆತಂಕವೂ ಇಲ್ಲೆಂದು ಬೇರೆ ಹೇಳಬೇಕೆ ?

ಸೊಂಟಕ್ಕೆ ಸುತ್ತಿಕೊಳ್ಳಿ. ಅದರ ಎರಡು ಮೂಲೆಗಳನ್ನು (ಒಂದೇ ಅಂಚಿನ!) ನಿಮ್ಮ ಎರಡು ಕೈಗಳಲ್ಲಿ ಹಿಡಿದು ಕೈಗಳನ್ನು ಮುಂದೆ ಚಾಚಿ. ಬಲಗೈ ಹಾಗೇ ಹಿಡಿದು ಎಡಗೈಯನ್ನು ಅಂಚಿನ ಸಹಿತ ಒಳಗೆಳೆದುಕೊಂಡು ಆ ಅಂಚನ್ನು ಬಿಗಿಯಾಗಿ ಬಲಸೊಂಟದಲ್ಲಿಯ ಮುಂಡದ ಭಾಗಕ್ಕೆ ಸಿಕ್ಕಿಸಿ. ಈಗ ಬಲಗೈಯ ಅಂಚನ್ನು ಅದೇ ರೀತಿ ಎಡಸೊಂಟಕ್ಕೆ ಸಿಕ್ಕಿಸಿ. ಒಂದು ವಿಷಯ ಲಕ್ಷ್ಯದಲ್ಲಿಡುವುದಗತ್ಯ: ಶರೀರಕ್ಕೆ ಎರಡು ಸುತ್ತಾಗಬಾರದು.[6] ಅಂಚುಗಳನ್ನು ಸಿಗಿಸುವಾಗ ಕಾಲಿಗೆ ಸುತ್ತು ಬೀಳದಂತೆ ಜಾಗ್ರತೆ ವಹಿಸಿ.

ಸ್ವಲ್ಪ ಕಷ್ಟಪಟ್ಟರೂ ಚಿಂತೆಯಿಲ್ಲ. ಈಗಿನ ಜನಸಂಖ್ಯಾ ಹೆಚ್ಚಳದ ಕಾಲದಲ್ಲಿ ಮುಂಡವೇ ಹಿತ. ಇದನ್ನೇ ನಮ್ಮ ರಾಷ್ಟ್ರೀಯ ಉಡುಪನ್ನಾಗಿ ಏಕೆ ಮಾಡಬಾರದು? (ಈಗಿನ ಉತ್ಪಾದನೆಯಿಂದಲೇ ಇದರ ಇಮ್ಮಡಿ ಜನರನ್ನು ಸುಧಾರಿಸಬಹುದು.) ಹೋಗಲಿ ಬಿಡಿ, ಅವರು ಮಾಡದಿದ್ದರೂ ಇದೇ ಆಗುತ್ತದೆ. ಇಡ್ಲಿ ಮಸಾಲೆ ದೋಸೆಗಳಾದಂತೆ. *

ಕೊನೆ ಟಿಪ್ಪಣಿ: ಮುಂಡದ ಒಂದು ಮಹಾ ಹಿರಿಮೆ ಲೇಖಕರ ಗಮನದಿಂದ ಪೂರ್ತಿ ತಪ್ಪಿ ಹೋದದ್ದು ಆಶ್ಚರ್ಯ. ಮುಂಡವು ಸ್ತ್ರೀ-ಪುರುಷ ಸಮಾನತೆಗೆ ಪೋಷಕವಾಗಿದೆ. ಸೆರಗು ಮಾತ್ರ ವರ್ಜಾ.

[6] ಈ ಭಯ ಅಕಾರಣವಾದದ್ದು. ಮುಂಡದ ಒಟ್ಟು ಉದ್ದವು— ನಿಮ್ಮ ಮಧ್ಯ ಪ್ರದೇಶ ಅತಿ ಕ್ಷಾಮಗ್ರಸ್ತವಾಗಿರದ ಹೊರತು — ಎರಡು ಸುತ್ತು ಬರುವಷ್ಟು ಇಲ್ಲ; ಇಲ್ಲಿದೆ ಮುಂಡದ ವಿಶೇಷ.



## ಇದು ನಾಗರಿಕತೆ, ಇದಕ್ಕಾಗಿ ಯುದ್ಧ!

ಐರ್ಲಂಡಿನ ಜನರು ಇಂಗ್ಲೀಷರ ಆಕ್ರಮಣದ ವಿರುದ್ಧ ದಂಗೆಯೆದ್ದಾಗ ನಡೆದಂತಹ ಅಸಹ್ಯ ಕೃತಿಗಳು ಇನ್ನು ಮುಂದೆ ಎಂದೂ ನಡೆಯಲಾರವು.

ಈ ಯುದ್ಧದಲ್ಲಿ ಇಂಗ್ಲೀಷ್ ಸೈನಿಕರು ಐರಿಷ್ ಮಕ್ಕಳನ್ನು ಭರ್ಜಿಯಲ್ಲಿ ಚುಚ್ಚಿ ಆಕಾಶದಲ್ಲಿ ಎತ್ತಿ ಹಿಡಿದು ಗರಗರ ತಿರುಗಿಸಿ ವಿನೋದಗೊಳ್ಳುತ್ತಿದ್ದರು. ಇದೇ ಕಾಲದಲ್ಲಿ ಆಹಾರಾಭಾವ ಬಂದು ಹಸಿವಿನಿಂದ ಕಂಗೆಟ್ಟ ಐರಿಷ್ ಹೆಂಗಸರು ಅಲ್ಲಲ್ಲಿ ಬೆಂಕಿ ಹಾಕಿಕೊಂಡು ಮಕ್ಕಳನ್ನು ಆಕರ್ಷಿಸಿ, ಸಿಕ್ಕವರನ್ನು ಕೊಂದು ತಿನ್ನುತ್ತಿದ್ದರು.

## ಸ್ವರ್ಣ ಕರ್ಣಾಟಕ

೧೮೫೦-೬೦ ರ ಮಧ್ಯೆ ಧಾರವಾಡ ಜಿಲ್ಲೆಯಲ್ಲಿ ಅಮೇರಿಕಾ ಮಾದರಿ ಹತ್ತಿ ಬೆಳೆಯೊಂದರಿಂದಲೇ ೯ ಕೋಟಿ ರೂಪಾಯಿಗಳ ಉತ್ಪತ್ತಿ (ಈಗಿನ ಲೆಕ್ಕದಲ್ಲಿ ಸುಮಾರು ಮುವ್ವತ್ತು ಕೋಟಿ) ಬಂದಿತು. ಅದನ್ನು ಕುರಿತು ಓರ್ವ ಅರ್ಥಶಾಸ್ತ್ರಜ್ಞರು (Dr. R. D. Choksi in Econamic History of Deccan and Bombay Karnataka) "ಇಲ್ಲಿಯ ಜನರು ಈ ಅಪಾರವಾದ ಸಂಪತ್ತಿಯಿಂದ ಹುಚ್ಚರಾಗಿದ್ದಾರೆ. ಬಂಡಿಯ ಗಾಲಿಗಳಿಗೂ, ಎತ್ತಿನ ಗೊಣಸುಗಳಿಗೂ, ಬೆಳ್ಳಿಯ ತಗಡುಗಳನ್ನು ಹೊದೆಸುತ್ತಿದ್ದಾರೆ—" ಎಂದು ಉಲ್ಲೇಖಿಸಿದ್ದಾರೆ.

—ಸಂಗ್ರಹ: ರವೀಂದ್ರನಾಥ, ಎಸ್.

ಮಧ್ಯ ಆಫ್ರಿಕದ ಜಾನಪದ ಕಥೆ

# ಜಾಂಬೆ ಮಾಡಿದ ಸೃಷ್ಟಿ

ಎಂ. ಆರ್. ಗುರುರಾಜ

ಬಹಳ ಹಿಂದೆ ಈ ಭೂಮಿಯಲ್ಲಿ ಮಾನವರೇ ಇರಲಿಲ್ಲ. ಆಗ ಇದ್ದದ್ದು ದೊಡ್ಡ ದೇವರು ಜಾಂಬೆ.

ಒಂದು ದಿನ ಆ ದೇವರು ತನ್ನಷ್ಟಕ್ಕೆ ತಾನೆ, "ನಾನು ಇಲ್ಲಿ ಒಬ್ಬಂಟಿಗನಾಗಿದ್ದೇನೆ. ಆದ್ದರಿಂದ ಕೆಲವು ಮಾನವರನ್ನು ಸೃಷ್ಟಿಸಿ ಅವರೊಂದಿಗೆ ಬೆರೆತು ಬೇಟೆಯಾಡುತ್ತೇನೆ, ಹಾಡುತ್ತೇನೆ, ಉಣ್ಣುತ್ತೇನೆ" ಎಂದುಕೊಂಡ.

ಮಾರನೆಯ ದಿನ ಒಂದು ಚೀಲದ ತುಂಬ ಆಹಾರಯೋಗ್ಯವಾದ ತಿರುಳನ್ನು ಹೊಂದಿರುವ ಕಾಯಿಗಳನ್ನು ತೆಗೆದುಕೊಂಡು ದೇವರು ನದೀ ತೀರಕ್ಕೆ ಹೋದ. ಅಲ್ಲಿ ಒಂದು ಕಾಯನ್ನು ತೆಗೆದು ಬಾಯಲ್ಲಿ ಹಾಕಿಕೊಂಡು ತನ್ನ ಎಂಜಲಿನಿಂದ ಅದನ್ನು ಒದ್ದೆಮಾಡಿ ನೀರಿಗೆ ಎಸೆದ. ಆ ಮೇಲೆ ಈ ರೀತಿ ಹೇಳಿದ: "ತೀರವನ್ನು ಸೇರಿದಾಗ ನೀನು ಮೊದಲ ಮಾನವ" ಎಂದು. ಈ ರೀತಿ ಚೀಲದಲ್ಲಿದ್ದ ಎಲ್ಲ ಕಾಯಿಗಳನ್ನು ನೀರಿಗೆ ಎಸೆದು ಮೇಲೆ ಹೇಳಿದ್ದನ್ನು ಉಚ್ಚರಿಸಿದ. ಅನಂತರ ಜಾಂಬೆ ತನ್ನ ಸ್ಥಳಕ್ಕೆ ಹೋಗಲು, ಅಲ್ಲಿ ಆಗ ತಾನೆ ಆತ ಸೃಷ್ಟಿಸಿದ್ದ ಮಾನವರು ಎದುರುಗೊಳ್ಳಲು ಕಾಯುತ್ತಿದ್ದರು.

ಜಾಂಬೆ ಹಳ್ಳಿಯಲ್ಲಿ ತನ್ನ ಮಾನವರೊಂದಿಗೆ ಸಂತೋಷದಿಂದ ಇರುತ್ತಿದ್ದ. ಬೇಟೆ ಚೆನ್ನಾಗಿರುತ್ತಿತ್ತು. ಒಬ್ಬರಿಗೊಬ್ಬರು ಕತೆ ಹೇಳಿಕೊಳ್ಳುತ್ತಿದ್ದರು. ಹಾಡುತ್ತಿದ್ದರು. ಕೆಲವು ವೇಳೆ ಬೇಟೆಯ ದೃಶ್ಯಗಳನ್ನು ಅಭಿನಯಿಸುತ್ತಿದ್ದರು.

ಈ ರೀತಿಯ ಸುಖ ಅನೇಕ ವರ್ಷಗಳು ನಡೆದು ಬಂತು. ಆದರೆ ಒಂದು ದಿನ ದೇವರ ಬೇಟೆಗೆ ಬಂದ ಒಬ್ಬ ಬೇಟೆಗಾರ ದೇವರಿಗೆ ಈ ರೀತಿ ಕೇಳಿದ: "ಹೇ ಜಾಂಬೆ, ಮನುಷ್ಯರು ತೃಪ್ತಿ ಹೊಂದಿಲ್ಲ. ಮರದ ಬುಡದಲ್ಲಿ ವಾಸಿಸುವ ಮುಳ್ಳುಹಂದಿ ಹೆಂಡತಿಯನ್ನು ಹೊಂದಿದೆ. ಅದರಂತೆ ಚೇಳಿಗೂ ಸಹ ಹೆಂಡತಿ ಇದೆ. ಮಾನವರಾದ ನಾವು ಮಾತ್ರಹೆಂಡಿರನ್ನುಹೊಂದಿಲ್ಲ. ಹೇ ಜಾಂಬೆ, ನಮಗೂ ಹೆಂಡಿರನ್ನುಕೊಡು" ಎಂದ.

ದೇವರು "ಒಳ್ಳೆಯದು, ನೀವು ನಿಮ್ಮ ನಾಶದ ಕಡೆಗೆ ಹೊರಳಿದ್ದೀರಿ. ನಾನು ನಿಮಗೆ ಹೆಂಡತಿಯರನ್ನು ಕೊಡುತ್ತೇನೆ. ನಾಳೆ ಬೇಟೆಗೆ ಹೊರಡಿರಿ. ಒಬ್ಬಂಟಿಗರಾಗಿ ಹೋಗಿ ವಾಪಸು ಬಂದಾಗ ನೀವು ತರುವ ಪ್ರಾಣಿಗಳನ್ನು ನನ್ನ ಪಾದದ ಬಳಿ ಇಡಿ" ಎಂದು ಹೇಳಿದ.

ಮಾರನೇ ದಿನ ಎಲ್ಲರೂ ಒಬ್ಬಂಟಿಗರಾಗಿ ಬೇಟೆಗೆ ಹೊರಟರು. ಒಬ್ಬೊಬ್ಬರೂ ಒಂದೊಂದು ರೀತಿಯ ಪ್ರಾಣಿಯನ್ನು ತಂದಿದ್ದರು. ಯಾರೂ ಆನೆಯನ್ನು ಮಾತ್ರ ತಂದಿರಲಿಲ್ಲ. ಏಕೆಂದರೆ ಅದು ಒಬ್ಬೊಬ್ಬ ಬೇಟೆಗಾರನ ಬೇಟೆಗೆ ಸಿಲುಕದ ಪ್ರಾಣಿ. ಕೆಲವರು ಮುಳ್ಳು ಹಂದಿ, ಇನ್ನು ಕೆಲವರು ಕೋತಿ, ಈ ರೀತಿಯಾಗಿ ಒಬ್ಬೊಬ್ಬರೂ ಒಂದೊಂದು ರೀತಿಯ ಪ್ರಾಣಿಯನ್ನು ತೆಗೆದುಕೊಂಡು ದೇವರ ಗುಡಿಸಲಿನ ಮುಂದೆ ಬಂದು ಸೇರಿದರು

ದೇವರು ಗುಡಿಸಲಿನಿಂದ ಈಚೆಗೆ ಬಂದು ಜನರನ್ನು ಕುರಿತು, "ಹೇ ಮಾನವರೆ! ನನ್ನ ಮಾತುಗಳನ್ನು ಆಲಿಸಿರಿ. ನೀವು ಹೆಂಡಿರನ್ನು ಅಪೇಕ್ಷಿಸಿ ಕೇಳಿದಿರಿ. ನಾನು ಒಂದೊಂದು ಪ್ರಾಣಿಯನ್ನೂ ಬದುಕಿಸಿ, ಹೆಂಗಸನ್ನಾಗಿ ಪರಿವರ್ತಿಸುತ್ತೇನೆ. ಯಾವ ಪ್ರಾಣಿಯಿಂದ ಯಾವ ಹೆಂಗಸು ಬರುತ್ತಾಳೊ ಆಕೆ ಆ ಪ್ರಾಣಿಯನ್ನು ತಂದ ಮನುಷ್ಯನ ಹೆಂಡತಿ" ಎಂದು ಹೇಳಿದ.

ಆ ದಿನದಿಂದ ಹೆಂಗಸರು ವಿವಿಧ ಗುಣವುಳ್ಳವರಾದರು. ಕೆಲವರು ಆಮೆಯಷ್ಟು ಸೋಮಾರಿಗಳಾದರೆ ಇನ್ನು ಕೆಲವರು ಮಂಗಗಳಂತೆ ಅರಚುತ್ತಾರೆ. ಇನ್ನು ಕೆಲವರು ಮುಳ್ಳು ಹಂದಿಯಷ್ಟು ಕ್ರೂರಿಗಳು. ಒಳ್ಳೆಯ ಹೆಂಗಸು ಯಾರು? ಇದ್ದರೂ ಅಪರೂಪ. ಆಕೆಯನ್ನು ಕುರಿತು ಮಾತನಾಡುವವರೂ ಇಲ್ಲ. ಬುದ್ಧಿವಂತರಂತೂ ಇಲ್ಲೇ ಇಲ್ಲ. ಕಾರಣ, ಯಾವ ಬೇಟೆಗಾರನೂ ಆನೆಯನ್ನು ತಂದಿರಲಿಲ್ಲ. ✶

# ದಿನೇ ದಿನೇ
## ಅಧಿಕ ಸುಂದರ ಚರ್ಮ–
## ಹೊಸ ರೆಕ್ಸೋನ
## ಆದರಮರ್ಮ

ನೀವು ರೆಕ್ಸೋನವನ್ನು ಬಳಸುವಾಗ ಅದರ ಅದ್ಭುತ ಗುಣ ನಿಮಗೆ ಕಂಡುಬರುವುದು. ಅದರ ಮೃದುವಾದ ನೊರೆಯಲ್ಲಿ ಕ್ಯಾಡಿಲ್—ಚರ್ಮವನ್ನು ಸುಂದರಗೊಳಿಸುವ ಎಣ್ಣೆಗಳ ಒಂದು ವಿಶಿಷ್ಟ ಮಿಶ್ರಣ—ಇದೆ. ಅದರ ಪ್ರಭಾವ ಚರ್ಮದ ಅಂತರ್ಭಾಗಕ್ಕೂ ಬೀಳುತ್ತದೆ ಮತ್ತು ಅದರಿಂದ ಚರ್ಮವು ಹೆಚ್ಚು ನುಣುಪಾಗಿ, ಹೆಚ್ಚು ಕೋಮಲವಾಗಿ ಸುಂದರವಾಗುವುದು !

ಬಹಳ ಹೊತ್ತಿನವರೆಗೆ ನಿಮಗೆ ಉಲ್ಲಾಸ ಪನ್ನೀಯುವ ವಿಶಿಷ್ಟ ಪರಿಮಳವಿರುವ ರೆಕ್ಸೋನ ನಿಮ್ಮ ಸ್ನಾನಕ್ಕೆ ಆದರ್ಶಪ್ರಾಯವಾದುದು.




ಹೊಸ ರ್‍ಯಾಪರ್ ಇರುವ, ಹೊಸ ಆಕಾರವಿರುವ, ಹೊಸ ಹಸುರು ಬಣ್ಣವಿರುವ ಹೊಸ ರೆಕ್ಸೋನ ನಿಮ್ಮ ಪ್ರೀತಿಗೆ ಪಾತ್ರವಾಗುವುದು.

**ಹೊಸ ರೆಕ್ಸೋನ–ನಿಮ್ಮ ಚರ್ಮಕ್ಕೆ ಹಿತಕರ**

RP. 169-50 KN

ಹಿಂದುಸ್ಥಾನ್ ಲೀವರ್ ಲಿಮಿಟೆಡ್ ಅವರಿಂದ ರೆಕ್ಸೋನ ಪ್ರೊಪ್ರೈಟರಿ ಲಿಮಿಟೆಡ್, ಆಸ್ಟ್ರೇಲಿಯಾ ಅವರಿಗಾಗಿ ಭಾರತದಲ್ಲಿ ತಯಾರಿಸಲ್ಪಟ್ಟಿದೆ.

ಈ ಕರುಣಾಧಾರೆ ಸಹಜ
ಮಾನವತೆಯ ಗುರುತು



# ಋಷಿಕಲ್ಪ ಶರತ್‌ಚಂದ್ರ

ವಿಷ್ಣು ಪ್ರಭಾಕರ

ಮಹಾನ್ ಕಥಾಶಿಲ್ಪಿ ಶರತ್‌ಚಂದ್ರ ಚಟ್ಟೋಪಾಧ್ಯಾಯರ ದಯಾಬುದ್ಧಿ ಕೇವಲ ಸ್ತ್ರೀ ಜಾತಿ ಅಥವಾ ಮನುಷ್ಯರ ಮಟ್ಟಿಗಷ್ಟೇ ಸೀಮಿತ ವಾಗಿರಲಿಲ್ಲ. ಸಕಲ ಜೀವರಾಶಿ ಅಷ್ಟೇ ಅಲ್ಲ, ಹೂಗಳ ವಿಷಯದಲ್ಲಿಯೂ ಅವರ ಮನದಲ್ಲಿ ಕೃಪಣತೆಯೆಂಬುದಿರಲಿಲ್ಲ. ಅವರ ನಾಯಿ "ಭೇಲಿ" ಅವರ ಸಾಹಿತ್ಯದಂತೆಯೆ ಅಮರವಾಗಿದೆ. ೧೯೨೬, ಏಪ್ರಿಲ್‌ನಲ್ಲಿ ಅದು ಸಾಯುವ ವರೆಗೂ ಯಾರು ಯಾರು ಶರತ್‌ಚಂದ್ರರ ಸಂಪರ್ಕದಲ್ಲಿ ಬಂದರೋ ಅವರೆಲ್ಲರಿಗೂ ಶರತ್ ಚಂದ್ರರು ಈ ನಾಯಿಯನ್ನು ಎಷ್ಟೊಂದು ಪ್ರೀತಿ ಸುತ್ತಿದ್ದರೆಂಬುದು ಗೊತ್ತು. ಈ ನಾಯಿಯ ಸಂಬಂಧದಿಂದಾಗಿ ಅದೆಷ್ಟೋ ವಿಶ್ವಸನೀಯ ಮತ್ತು ಅವಿಶ್ವಸನೀಯ ಕಥೆಗಳು ಪ್ರಚಲಿತ ವಾಗಿವೆ. ಶ್ರೀಮಂತರು ಷೋಕಿಗಾಗಿ ಶ್ರೇಷ್ಠ ಜಾತಿಯ ನಾಯಿಗಳನ್ನು ಸಾಕುತ್ತಾರಲ್ಲ, ಅಂಥ ಪ್ರಕರಣವೇನೂ ಇದಾಗಿರಲಿಲ್ಲ. ಬೀದಿ ಬೀದಿ ಗಳಲ್ಲಿ ಅಲೆಯುವ ಬಿಡಾಡಿ ಜಾತಿಯ, ಕೂದ ಲಿಲ್ಲದ ಒಂದು ಕುರೂಪ ನಾಯಿಮರಿಯನ್ನು ಶರತ್‌ಚಂದ್ರರ ಪತ್ನಿ ಹಿರಣ್ಮಯಿದೇವಿ ಎಂಟಾಣೆ ಕೊಟ್ಟು ಕೊಂಡುಕೊಂಡಿದ್ದರು. ಫಕೀರನೊಬ್ಬ "ಒಂದು ನಾಯಿಯನ್ನು ಕೊಂಡು ಪ್ರೀತಿಯಿಂದ ಸಾಕಿದರೆ ನಿಮ್ಮ ಭಾಗ್ಯ ತೆರೆಯು ವುದು" ಎಂದು ಅವರಿಗೆ ಹೇಳಿದ್ದನಂತೆ.

ಇದು ನಿಜವೊ ಸುಳ್ಳೊ ತಿಳಿಯದು. ಆದರೆ ಆ ಬಿಡಾಡಿ ನಾಯಿ ಎಂದು ಶರತ್‌ಚಂದ್ರರ ಮನೆಗೆ ಬಂತೋ ಅಂದಿನಿಂದ ಅವರ ಭಾಗ್ಯ ರೇಖೆ ನಿರಂತರವಾಗಿ ಬೆಳಗುತ್ತಲೇ ನಡೆಯಿತು ಎಂಬುದು ಮಾತ್ರ ಅದ್ಭುತ ಸಂಯೋಗದ ಮಾತು. ಹಿರಣ್ಮಯಿದೇವಿ ಪ್ರೀತಿಯಿಂದ ಮರಿಗೆ "ವಂಶಿವದನ" ಎಂದು ಹೆಸರಿಟ್ಟರು. ಆದರೆ ಶರತ್‌ಚಂದ್ರರು ಅದನ್ನು "ಭೇಲಿ" ಅಥವಾ "ಭೇಲು" ಎಂದೇ ಕರೆಯುತ್ತಿದ್ದರು. ಬರಬರುತ್ತ ಅವರ ಪ್ರೀತಿ ಈ ನಾಯಿಮರಿಯ ಮೇಲೆ ಎಷ್ಟು ಗಾಢವಾಯಿತೆಂದರೆ ಅವರ ಮಿತ್ರರು ಅದನ್ನು ಕಂಡು ಅಸೂಯೆಪಟ್ಟುಕೊಳ್ಳ ತೊಡಗಿದರು. ಜನರು ಈ ನಾಯಿಯ ನೆಪಮಾಡಿ ಅವರ ಮೇಲೆ ನಾನಾ ಬಗೆಯ ಆಕ್ರಮಣ

ಗಳನ್ನೂ ಮಾಡಿದರು. ಸಮಾಜಪತಿ ಮಹೋದಯರ "ಸಾಹಿತ್ಯ" ಮಾಸಪತ್ರಿಕೆಯ ವಿಮರ್ಶಾ ಸಂಪಾದಕರು ಒಮ್ಮೆ "ಲೇಖಕ ಶರತ್ ಚಟರ್ಜಿಯವರ ಮನದಲ್ಲಿ ತುಂಬ ಮಾಯಾ—ಮಮತೆಗಳಿವೆ. ಕಾರ್ನವಾಲೀಸ್ ರಸ್ತೆಯಲ್ಲಿ ಒಂದು ಬಿಡಾಡಿ ನಾಯಿಗೆ ಅವರು ಕಟ್‌ಲೆಟ್ಸ್ ತಿನ್ನಿಸುತ್ತಾರೆ. ಆದರೆ ಅಲ್ಲಿಯೆ ಸಮೀಪದಲ್ಲಿ ಒಂದೇ ಒಂದು ಬಿಲ್ಲಿಗಾಗಿ ಕಾತರಿಸಿ ಕುಳಿತಿರುವ ಭಿಕ್ಷುಕರ ಮೇಲೆ ಈ ದಯಾಳು ಶರತ್‌ಚಂದ್ರರ ದೃಷ್ಟಿ ಬೀಳುವುದೇ ಇಲ್ಲ" ಎಂದು ಬರೆದಿದ್ದರು.

ಝಾಂಸಿಯ ಮಾಜಿ ಪ್ರಿನ್ಸಿಪಾಲ ಶ್ರೀಯುತ ಪ್ರಫುಲ್ಲಕುಮಾರ ಚಟರ್ಜಿಯವರು ಕೂಡ ಇಂಥದೇ ಒಂದು ಘಟನೆಯನ್ನು ನನಗೆ ಹೇಳಿದ್ದರು. ೧೯೨೦—೨೧ ರಲ್ಲಿ ಶರತ್‌ಚಂದ್ರರು ಕಾಶಿಗೆ ಹೋಗಿದ್ದರು. ಒಂದು ದಿನ ಒಬ್ಬ ವಿದ್ಯಾರ್ಥಿ "ನಿಮ್ಮ ಕಾದಂಬರಿಯಲ್ಲಿ ವರ್ಣಿಸಲ್ಪಟ್ಟಿರುವ ಮಾನವತೆಯನ್ನು ಕಂಡು ನಾನು ತುಂಬ ಪ್ರಭಾವಿತನಾಗಿದ್ದೇನೆ. ಆದರೆ ನೀವು ನಾಯಿಗಳಿಗಾಗಿ ಬಹಳಷ್ಟು ಹಣವನ್ನು ವ್ಯರ್ಥವಾಗಿ ವ್ಯಯಿಸುತ್ತಿರುವುದರ ಅರ್ಥವಾಗುತ್ತಿಲ್ಲ" ಎಂದನು. ಆಗ ಶರತ್‌ಚಂದ್ರರು ಮುಗುಳ್ನಕ್ಕು "ನೀನನ್ನುವುದು ನಿಜ. ಆದರೆ ನಾನು ಮನುಷ್ಯರಿಗಾಗಿ ಇದಕ್ಕೂ ಹೆಚ್ಚು ವೆಚ್ಚಮಾಡಿರುವುದು ನಿನಗೆ ಬಹುಶಃ ಗೊತ್ತಿಲ್ಲವೆಂದು ಕಾಣುತ್ತದೆ" ಎಂದರು. ಬಳಿಕ ಕ್ಷಣಕಾಲ ತಡೆದು ಹೇಳಿದರು: "ಮನುಷ್ಯ ಮತ್ತು ನಾಯಿಯಲ್ಲಿ ನನಗೆ ಹೆಚ್ಚಿನ ಭೇದ ಕಾಣಿಸುವುದಿಲ್ಲ. ಎರಡೂ ಪ್ರಾಣಿಗಳೇ. ಈ ಎರಡು ಪ್ರಾಣಿಗಳಲ್ಲಿ ನಾನು ನಾಯಿಯನ್ನು ಹೆಚ್ಚಾಗಿ ಪ್ರೀತಿಸುತ್ತೇನೆ. ಏಕೆಂದರೆ ಅದು ಸಿಟ್ಟು ಬಂದಾಗ ಮಾತ್ರ ಬೊಗಳುವುದು, ಕಚ್ಚುವುದು ಮಾಡುತ್ತದೆ. ಆದರೆ ಮನುಷ್ಯ ಎಂಥ ಪ್ರಾಣಿಯೆಂದರೆ ಮನದಲ್ಲಿ ದ್ವೇಷ ಕುದಿಯುತ್ತಿದ್ದರೂ ಹೊರಗೆ ಮಾತ್ರ ನಗುತ್ತಿರುತ್ತಾನೆ."

ಶರತ್‌ಚಂದ್ರರನ್ನು ಕಾಣಲು ಬಂದವರ ಮೇಲೆಲ್ಲ ಭೇಲಿ ಜೋರಾಗಿ ಆಕ್ರಮಣ ಮಾಡುತ್ತಿತ್ತು. ಅದು ಎಷ್ಟು ಕುರೂಪಿಯೋ ಅಷ್ಟೇ ಅದರ ಸ್ವರವೂ ಕರ್ಕಶವಾಗಿತ್ತು. ಆದುದರಿಂದ ಅದರ ಈ ಆಕ್ರಮಣ ಇನ್ನಷ್ಟು ಅಸಹ್ಯವಾಗುತ್ತಿತ್ತು. "ದೇವರೇ, ಈ ನಾಯಿಯನ್ನು ಸಾಯಿಸಿ ಬಿಡಪ್ಪ" ಎಂದು ಎಷ್ಟೋ ಜನ ಪ್ರಾರ್ಥಿಸಿಕೊಳ್ಳುತ್ತಿದ್ದರು. ಆದರೆ ಭೇಲಿ ಯಾವ ದುರ್ಭಾವನೆಯಿಂದಲೂ ಬೊಗಳುವುದಿಲ್ಲ ಎಂದೇ ಶರತ್‌ಚಂದ್ರರ ನಂಬಿಕೆಯಾಗಿತ್ತು. ಅವರು ಪಂಡಿತ ಇಲಾಚಂದ್ರ ಜೋಶಿಯವರೊಡನೆ ಹೇಳಿದ್ದರು: "ನಾಯಿ ಪ್ರೀತಿಯಲ್ಲೂ ಕ್ರೋಧದ ಭಾವವನ್ನು ಪ್ರದರ್ಶಿಸಿ ಬೊಗಳುತ್ತದೆ. ಯಾರು ನಾಯಿಯನ್ನು ಪ್ರೀತಿಸಿ ಅದರ ಪ್ರೀತಿಯನ್ನು ಪಡೆದಿರುವರೊ ಅವರು ಮಾತ್ರ ಈ ಸತ್ಯವನ್ನು ಬಲ್ಲರು. ನಾನು ವರ್ಷಗಟ್ಟಲೆ ಒಂದು ನಾಯಿಯ ನಿಕಟ ಸಹವಾಸದಲ್ಲಿದ್ದೇನೆ. ನಾನು ಅದನ್ನು ಪ್ರೀತಿಸಿದ್ದೇನೆ. ಅದರ ಪ್ರೀತಿಯನ್ನು ಪಡೆದಿದ್ದೇನೆ. ಯಾರೊಬ್ಬರ ಅಂತರಂಗದ ರಹಸ್ಯವನ್ನು ಹೊರತೆಗೆಯುವ ಕೀಲಿಕೈ ಎಂದರೆ ಪ್ರೀತಿಯೊಂದೇ."

ನಿಜವಾಗಿಯೂ ಶರತ್ ಬಾಬುಗಳು ನಾಯಿ-ಯ ಅಂತರಂಗವನ್ನರಿತಿದ್ದರು. ಯಾವ ದೇಶದಲ್ಲಿ ಧರ್ಮರಾಜ ಯುಧಿಷ್ಠಿರನು ನಾಯಿಯನ್ನು ಬಿಟ್ಟು ಸ್ವರ್ಗದಲ್ಲಿ ಪ್ರವೇಶಿಸಲು ನಿರಾಕರಿಸಿದನೊ ಆ ದೇಶದಲ್ಲಿ ನಾಯಿಗಳ ದುರ್ದಶೆಯನ್ನು ಕಂಡು ಅವರಿಗೆ ಅಸಹ್ಯ ದುಃಖವಾಗುತ್ತಿತ್ತು. "ಭೇಲಿ" ಅವರನ್ನೆಂದೂ ಕಚ್ಚಲಿಲ್ಲ ಎಂಬ ಮಾತೂ ಇಲ್ಲ ಇಲ್ಲಿ. ಅದು ಅವರನ್ನು ಒಂದಲ್ಲ, ನಾಲ್ಕು ಸಲ ಕಚ್ಚಿತ್ತು. ಆದರೆ ಕಚ್ಚಿದ ಬಳಿಕ ಅದಕ್ಕೆ ತುಂಬ ನಾಚಿಕೆಯಾಗುತ್ತಿತ್ತು ಎಂದು ಅವರು ತಿಳಿದಿದ್ದರು. ಈ ವಿಚಾರವನ್ನು ಹೇಮೇಂದ್ರಕುಮಾರ ರಾಯರೊಡನೆ ಚರ್ಚಿಸುತ್ತಿದ್ದಾಗ ಅವರು "ಅಹಾ! ನನ್ನನ್ನು ಕಚ್ಚಿದ ಬಳಿಕ ಭೇಲಿಗೆ ಆಗುತ್ತಿದ್ದ ದುಃಖ ಮತ್ತು ನಾಚಿಕೆಯನ್ನು ಅದರ ಮುಖವನ್ನು ನೋಡಿ

ದೊಡನೆ ನೀವು ಅರಿತುಕೊಳ್ಳಬಹುದಾಗಿತ್ತು" ಎಂದಿದ್ದರು.

ಭೇಲಿಯಂಥ ಶಾಂತ ಮತ್ತು ಶಿಷ್ಟ ನಾಯಿ ಇನ್ನಾವುದೂ ಇಲ್ಲ ಎಂದು ಶರತ್ ಚಂದ್ರರಿಗೆ ನಂಬಿಗೆಯಿತ್ತು. ಅದು ಯಾರನ್ನಾದರೂ ಕಚ್ಚಿದರೆ ಅದು ತನ್ನ ಆದರವನ್ನು ವ್ಯಕ್ತಪಡಿಸುವುದಕ್ಕಾಗಿ ಅಷ್ಟೇ. ನಾಯಿಯ ಈ ಆದರ ಪ್ರದರ್ಶನದಿಂದ ಅವರು ಕೋರ್ಟಿಗೂ ಹೋಗಬೇಕಾಯಿತು. ಕಚ್ಚಿಸಿಕೊಂಡವರಿಗೆ ರೂಪಾಯಿಗಳನ್ನು ಕೊಡಬೇಕಾಯಿತು. ಪುನಃ ಪುನಃ ಅದರ ಜೊಲ್ಲನ್ನು ಪರೀಕ್ಷೆ ಮಾಡಿಸಬೇಕಾಯಿತು. ಹಾಗಿದ್ದರೂ ಅವರಿಗೆ ಭೇಲಿಯನ್ನು ತಿರಸ್ಕರಿಸುವುದಾಗಲಿಲ್ಲ. ಅದರ ಬದಲಿಗೆ ಅದನ್ನು ಬಲು ಪ್ರೀತಿಯಿಂದ, ಆದರದಿಂದ ಮಗ್ಗಲಲ್ಲಿ ಕೂಡ್ರಿಸಿಕೊಳ್ಳುತ್ತಿದ್ದರು. ಒಮ್ಮೊಮ್ಮೆ ಈ ನಾಯಿಯ ಕೂದಲು ಚಹದ ಕಪ್ಪಿನಲ್ಲಿ ಬೀಳುತ್ತಿತ್ತು. ಆ ಚಹವನ್ನು ಸ್ವತಃ ಕುಡಿಯಲು ಅಥವಾ ಇತರರಿಗೆ ಕೊಡಲು ಶರತ್ ಚಂದ್ರರು ಹಿಂದೆ ಮುಂದೆ ನೋಡುತ್ತಿರಲಿಲ್ಲ. ಎರಡನೆಯವರು ಆಕ್ಷೇಪವೆತ್ತಿದರೆ ಸಹಿಸಿಕೊಳ್ಳುತ್ತಿರಲಿಲ್ಲ ಎಂದು ಕೂಡ ಕೆಲವರು ಆರೋಪಿಸಿದ್ದಾರೆ. ಶರತ್‌ಚಂದ್ರರ ಈ ಅಪಾರ ಪ್ರೀತಿಯನ್ನು ಕಂಡೇ ಅವರ ಮಿತ್ರರು "ಭೇಲಿ ಶರತ್ ಚಂದ್ರರ ಮಗ, ಯುವರಾಜ" ಎಂದು ವ್ಯಂಗ್ಯೋಕ್ತಿಗಳನ್ನಾಡುತ್ತಿದ್ದರು. ಆದರೆ ಶರತ್‌ಚಂದ್ರರ ಮಟ್ಟಿಗೆ ಇದು "ವ್ಯಂಗ್ಯ" ವಾಗಿರದೆ "ಸತ್ಯ"ವೇ ಆಗಿತ್ತು. ಅದಕ್ಕಾಗಿಯೇ ಇರಬೇಕು, ಭೇಲಿ ಸತ್ತಾಗ, ಮಗ ಸತ್ತಾಗ ಕೂಡ ತಂದೆ ಪಡಲಾರದಷ್ಟು ವ್ಯಥೆಯನ್ನು ಶರತ್ ಚಂದ್ರರು ಅನುಭವಿಸಿದರು. ಅದು ಕಾಯಿಲೆ ಬಿದ್ದಾಗ ಅವರು ಔಷಧೋಪಚಾರಕ್ಕೆ ಎಳ್ಳಷ್ಟೂ ಕೊರತೆ ಮಾಡಲಿಲ್ಲ. ಆದರೂ ನಾಯಿ ಸತ್ತಿತು. ಶರತ್‌ಚಂದ್ರರು ಆಗ ಮಗುವಿನಂತೆ ಅತ್ತರು. ನೆರೆಯವರ ತೋಟದಲ್ಲಿ ತಮ್ಮ ಕೈಯಿಂದಲೇ ತಗ್ಗು ಅಗೆದು ಅದನ್ನು ಹೂಳಿದರು. ಸಮಾಧಿಯ ಮೇಲೆ ನಾಲ್ಕು ಸಾಲುಗಳ ಕವಿತೆ ಬರೆದರು. ಅವರ ಊಟ, ಸ್ನಾನ ಎಲ್ಲ ನಿಂತಿತು. ಸಮಾಧಿಯ ಬಳಿ ಕುಳಿತು ಅಳುವುದೊಂದೇ ಆಯಿತು. ಅವರ ಅತ್ತಿಗೆ ಎಷ್ಟು ಸಮಾಧಾನ ಪಡಿಸಿದರೂ ವ್ಯರ್ಥವಾಯಿತು. ಈ ಸುದ್ದಿ ಕೇಳಿದ "ಭಾರತವರ್ಷ"ದ ಸಂಪಾದಕ ರಾವಬಹಾದ್ದೂರ ಜಲಧರ ಸೇನರು ಬಂದರು. ಅವರನ್ನಪ್ಪಿಕೊಂಡು ಶರತ್ ಬಾಬುಗಳು ಅಳುತ್ತಲೇ ಹೇಳಿದರು: "ದಾದಾ, ನನ್ನ ಭೇಲು ನನ್ನನ್ನು ಅಗಲಿ ಹೋಯಿತು."

೧೯೩೬, ಎಪ್ರಿಲ್ ೨೮ ರಂದು ಸುರೇಂದ್ರ ಗಾಂಗುಲಿಯವರಿಗೆ ಬರೆದ ಪತ್ರದಲ್ಲಿ ಅವರು ಬರೆದರು: "ಭೇಲು ಸತ್ತಿತು. ಕಳೆದ ಬ್ರಹಸ್ಪತಿವಾರದ ಹಿಂದಿನ ಬ್ರಹಸ್ಪತಿವಾರ ನಾನು ಡಾಕ್ಕಾದಿಂದ ಮರಳಿದೆ. ಬಂದವನೇ ಬೇಲಿ ಗೃಥೆ ಆಸ್ಪತ್ರಿಯಿಂದ ಅದನ್ನು ಮನೆಗೆ ತಂದೆ. ಆದರೆ ಮನೆಗೆ ಬಂದೊಡನೆ ಆದರ ಬೇನೆ ಹೆಚ್ಚಿತು. ಎಕ್ಯೂಟ್ ಗೈಸ್ಟ್ರಾಇಟಿಸ್ ರೋಗ ಇದು ಎಂದು ಡಾಕ್ಟರರೆಂದರು. ಆರು ಗಂಟೆಗೆ ಆದರ ಪ್ರಾಣಪಕ್ಷಿ ಹಾರಿಹೋಯಿತು. ಕೊನೆಯ ದಿನ ಅದಕ್ಕೆ ಬಲು ವೇದನೆಯಾಯಿತು. ಬುಧವಾರ ಅದಕ್ಕೆ ಚಮಚೆಯಿಂದ ಔಷಧಿ ಕುಡಿಸಲು ಬಲು ಪ್ರಯತ್ನಿಸಿದೆ. ಆದರೆ ಔಷಧಿ ಹೊಟ್ಟೆಗೆ ಹೋಗಲಿಲ್ಲ. ಸಿಟ್ಟಿನಿಂದ ಅದು ನನ್ನನ್ನು ಕಚ್ಚಿತು. ಇಡೀ ರಾತ್ರಿ ನನ್ನ ಭುಜದ ಮೇಲೆ ತನ್ನ ಮುಖವನ್ನಿಟ್ಟು ಅದು ಅತ್ತಿತು. ಬೆಳಗಾದ ಮೇಲೆ ಅದರ ಅಳು ನಿಂತಿತು. ಅದು ನನ್ನನ್ನು ಕಚ್ಚಿದಾಗ ಎಲ್ಲರೂ ಅಂಜಿದರು. ಆಗ ನನ್ನ ಮನಸ್ಸಿನಲ್ಲಿ ರವಿಬಾಬುಗಳ ಈ ಮಾತು ಮೂಡಿತು, "ನಿನ್ನ ಪ್ರೇಮದಲ್ಲಿ ಆಘಾತವಿದೆ, ಆದರೆ ಅವಹೇಳನೆಯಿಲ್ಲ." ಇದಕ್ಕೂ ಮೊದಲು ನನಗೆ ಇಂಥ ವ್ಯಥೆಯೆಂದೂ ಆಗಿರಲಿಲ್ಲ"

ಚಾರುಚಂದ್ರ ವಂದ್ಯೋಪಾಧ್ಯಾಯರಿಗೆ ಎಪ್ರಿಲ್ ೨೭ ರಂದು ಬರೆದ ಪತ್ರದಲ್ಲಿ ಹೀಗೆ ಬರೆದರು: "ಬ್ರಹಸ್ಪತಿವಾರ ಮನೆಗೆ ತಂದೆ. ಮುಂದಿನ ಬ್ರಹಸ್ಪತಿವಾರ ಮುಂಜಾನೆ ಆರು ಗಂಟೆಗೆ

ಭೇಲು ಸತ್ತಿತು. ನನ್ನ ಇಪ್ಪತ್ತನಾಲ್ಕು ತಾಸಿನ ಸಂಗಾತಿ ಇನ್ನಿಲ್ಲ. ಜಗತ್ತಿನಲ್ಲಿ ಇಷ್ಟೊಂದು ಭೀಕರ ದುಃಖವಿದೆ ಎಂಬುದನ್ನು ನಾನು ಸರಿಯಾಗಿ ತಿಳಿದಿರಲಿಲ್ಲ. ಈ ಜಗತ್ತಿನಲ್ಲಿ ಎಲ್ಲವೂ ಭಾವ-ನಿಷ್ಠವಾಗಿದೆಯೆ ಹೊರತು ವಸ್ತುನಿಷ್ಠವಾಗಿಲ್ಲ ವೆಂದೇ ನಾನು ತಿಳಿಯುತ್ತೇನೆ. ಭೇಲು ಒಂದು ನಾಯಿ ಮಾತ್ರವಲ್ಲದೆ ಮತ್ತೇನೂ ಅಲ್ಲವಲ್ಲ. ರಾಜಾ ಭರತನ ಕಥೆ ಮಿಥ್ಯವಲ್ಲವೇ ಅಲ್ಲ."

ಭೇಲಿಯ ಕಥೆ ಕೇಳಿ ಯಾವುದೇ ಕಾರಣ ಕ್ಕಾಗಿ ಅವರು ಈ ನಾಯಿಯೊಂದನ್ನೇ ಪ್ರೀತಿಸು ತ್ತಿದ್ದರು ಎಂದು ತಪ್ಪುತಿಳುವಳಿಕೆಯಾಗಬಹುದು. ಆದರೆ ಹಾಗೇನೂ ಇಲ್ಲ. ಅವರಿಗೆ ಎಲ್ಲ ನಾಯಿ ಗಳ ಮೇಲೂ ಹೀಗೆಯೆ ಪ್ರೇಮವಿತ್ತು. ತಮ್ಮ ಮೋಟರ್ ಡ್ರಾಯವ್ಹರನಿಗೆ ಅವರು, "ನೋಡು ಬಾಪು, ಯಾವನಾದರೂ ಒಬ್ಬ ಮನುಷ್ಯನ ಮೇಲೆ ನೀನು ಮೋಟಾರ್ ಹಾಯಿಸಿದರೆ ಒಂದು ವೇಳೆ ನಾನು ಸುಮ್ಮನಿದ್ದೇನು. ಆದರೆ ನೀನೇನಾದರೂ ನಾಯಿಯ ಮೇಲೆ ಮೋಟಾರು ಹಾಯಿಸಿದರೆ ತತ್‌ಕ್ಷಣ ನಿನ್ನ ನೌಕರಿ ಹೋಯಿತೆಂದು ತಿಳಿ." ಎಂದು ಎಚ್ಚರಿಕೆಯಿತ್ತಿದ್ದರು.

ಶರತ್‌ಬಾಬುಗಳು ಭಾಗಲಪುರದ ಚಂದ್ರ-ಶೇಖರ ಘೋಷರಿಗೆ ಒಂದು ನಾಯಿಯನ್ನು ಕೊಟ್ಟಿದ್ದರು. ಯಾವುದೋ ಒಂದು ಕಾರಣ ಕ್ಕಾಗಿ ಶರತ್ ಮುಜುಮದಾರರ ಮಗ ಅದನ್ನು ಗುಂಡಿಕ್ಕಿ ಕೊಂದ. ಆಗ ಚಂದ್ರಶೇಖರರು ಬಂದೂಕನ್ನು ಕಸಿದುಕೊಂಡು ಆ ಹುಡುಗನನ್ನು ಥಳಿಸಿದರು. ಪ್ರಕರಣ ಕೋರ್ಟಿಗೆ ಹೋಗುವ ಲಕ್ಷಣವಿತ್ತು. ಆ ಸಮಯದಲ್ಲಿ ಭಾಗಲಪುರಕ್ಕೆ ಬಂದ ಶರತ್‌ಚಂದ್ರರು "ನೀವು ಒಳ್ಳೇದನ್ನೇ ಮಾಡಿದಿರಿ. ಅವರೇನಾದರೂ ಕೋರ್ಟಿಗೆ ಹೋದರೆ ಹೆದರಬೇಡಿ. ನಾನು ನಿಮಗೆ ಹಣ ಕೊಡುತ್ತೇನೆ. ನಮ್ಮ ಮಗನನ್ನು ಕೊಂದು ಹಾಕಿದ್ದಾರೆ ಅವರು" ಎಂದರು.

ಕಾಶಿಗೆ ಹೋಗುತ್ತಿದ್ದಾಗಲೊಮ್ಮೆ ಅವರು ಶ್ರೀಶೈಲೇಶ ವಿಶಿಯವರೊಡನೆ ಹೇಳಿದರು, "ಕಾಶಿಗೆ ಹೋದ ಮೇಲೆ ಬ್ರಾಹ್ಮಣ ಭೋಜನ ಮಾಡಿಸಬೇಕಾಗುತ್ತದಲ್ಲವೆ? ನಾನೇನು ನಿಶ್ಚಯ ಮಾಡಿಕೊಂಡಿದ್ದೇನೆ ಗೊತ್ತೆ? ನಾನು ನಾಯಿ ಗಳಿಗೆ ಭೋಜನ ಮಾಡಿಸುತ್ತೇನೆ. ಕಾಶಿಯಲ್ಲಿ ನಾಯಿಗಳು ಬಲು ದುಃಖದಲ್ಲಿವೆ. ಅಲ್ಲಿ ಸ್ಪೃಶ್ಯಾ ಸ್ಪೃಶ್ಯದ ಗದ್ದಲ ಬಹಳ. ನಾಯಿ ಮುಟ್ಟಿದ ಮಾತ್ರಕ್ಕೆ ಸ್ನಾನ ಮಾಡುತ್ತಾರೆ. ನಾಯಿಗಳು ಹೊಟ್ಟೆಗಿಲ್ಲದೆ ಸಾಯುತ್ತವೆ. ಅವಕ್ಕೇ ಊಟ ಹಾಕಬೇಕು."

ವಿಶಿ ಮಹಾಶಯರು ಕಾಶಿಯಲ್ಲಿ ಪ್ರತಿ ಯೊಂದು ರಸ್ತೆಯಲ್ಲೂ ನಾಯಿಗಳನ್ನು ಹುಡುಕ ಬೇಕಾಯಿತು. ನಾಯಿಗಳಿಗೆ ಅನ್ನ ಹಾಕಿದ ಹೊರತು ಯಾರೂ ಊಟ ಮಾಡಲಾರರು ಎಂದು ಶರತ್‌ಚಂದ್ರರು ಅಪ್ಪಣೆ ಮಾಡಿದ್ದರು.

'ದೇವಗಡದ ನೆನಹು'ಗಳಲ್ಲಿ ಅವರು ಒಂದು ನಾಯಿಯ ಕಥೆ ಹೇಳಿದ್ದಾರೆ. ಶರತ್‌ಚಂದ್ರರು ತಿರುಗಾಡಲು ಹೋಗುವಾಗ ಒಂದು ನಾಯಿ ಎಲ್ಲಿಂದಲೋ ಬಂದು ಅವರನ್ನು ಕೂಡಿಕೊಳ್ಳು ತ್ತಿತ್ತು. ಆದರೆ ಮನೆಯ ನೌಕರರು ಹಾಗೂ ತೋಟದಾಳಿನ ಅಂಜಿಕೆಯಿಂದ ಒಳಗೆ ಬರುತ್ತಿ ರಲಿಲ್ಲ. ತೋಟದಾಳು ಎಲ್ಲವೂ ತನಗೇ ಸಿಗ ಬೇಕೆಂದು ನಾಯಿಯನ್ನು ಹೊಡೆದೋಡಿಸುತ್ತಿ ದ್ದಳು. ಒಂದು ದಿನ ನಾಯಿಯ ಕಣ್ಣಲ್ಲಿ ನೀರನ್ನು ಕಂಡ ಶರತ್‌ಚಂದ್ರರಿಗೆ ಅದಕ್ಕೆ ತಿನ್ನಲು ಏನೂ ಸಿಗುತ್ತಿಲ್ಲವೆಂದು ತಿಳಿಯಿತು. ಅವರು ನೌಕರ ರನ್ನು ಕೇಳಿದರು. ಶರತ್‌ಚಂದ್ರರು ಎಬ್ಬಿಸಿದ ಗದ್ದಲ ನೋಡಿ ಅವರ ಮಿತ್ರರು "ದಾದಾರ ಮಾತೇ ವಿಚಿತ್ರ. ಜನರಿಗೇ ಅನ್ನ ಸಿಗುವುದಿಲ್ಲ, ಬೀದಿಯ ನಾಯಿಗಳನ್ನು ಕರೆದು ತಿನ್ನಿಸುತ್ತೀರಿ. ಭೇಷ್" ಎಂದರು.

ಆದರೆ ನಾಯಿಗೆ ಅನ್ನ ಹಾಕಿಸಿಯೆ ಬಿಟ್ಟರು ಶರತ್‌ಬಾಬುಗಳು. ಆ ನಾಯಿಯ ಮೇಲಿನ ಪ್ರೇಮದಿಂದ ಅವರು ದೇವಗಡದಲ್ಲಿ ಮತ್ತೂ ಎರಡು ದಿನ ಉಳಿದರು. ಅವರು ಅಲ್ಲಿಂದ ಹೊರ ಟಾಗ ಆ ನಾಯಿ ಕೂಡ ಅವರನ್ನು ಬೀಳ್ಕೊ

ಡಲು ಬಂದಿತ್ತು. ಶರತ್‌ಚಂದ್ರರು ಆ ಸಂದರ್ಭವನ್ನು ಕುರಿತು ಹೀಗೆ ಹೇಳಿದ್ದಾರೆ, "ನನ್ನನ್ನು ಬೀಳ್ಕೊಡಲು ಬಂದಿದ್ದವರಿಗೆಲ್ಲ ಭಕ್ಷೀಸು ಕೊಟ್ಟೆ. ಆ ನನ್ನ ಅತಿಥಿಗೆ ಮಾತ್ರ ಏನೂ ಸಿಗಲಿಲ್ಲ. ಉಷ್ಣ ಹವೆಯಲ್ಲಿ ಧೂಳುಹಾರಿ ಎದುರಿನಲ್ಲಿ ಒಂದು ಪಡದೆ ಎದ್ದಂತಾಯಿತು. ಹೊರಡುವ ಮೊದಲು ಈ ಪಡದೆಯಲ್ಲಿ ನನಗೆ ಅಸ್ಪಷ್ಟವಾಗಿ ಸ್ಟೇಶನ್ನಿನ ಬೇಲಿಯ ಹೊರಗೆ ನಿಂತು ನನ್ನ ಅತಿಥಿ–ಆ ನಾಯಿ–ನನ್ನನ್ನೆದಿಟ್ಟಿಸಿ ನೋಡುತ್ತಿರುವುದು ಕಾಣಿಸಿತು. ಸೀಟಿ ಊದಿ ಟ್ರೇನು ಹೊರಟಿತು. ಮನೆಗೆ ಮರಳುವ ಉತ್ಸಾಹವೇ ನನ್ನಲ್ಲಿ ಉಡುಗಿಹೋಯಿತು. ನನ್ನ ಅತಿಥಿ ಇಂದು ತಿರುಗಿ ಹೋದಾಗ ಮನೆಯ ಗೇಟು ಮುಚ್ಚಿರುವುದನ್ನು ಕಾಣುವುದು. ರಸ್ತೆಯಲ್ಲಿಯೆ ನಿಂತು ಎರಡು ಮೂರು ದಿನಗಳ ವರೆಗೆ ನನ್ನ ಹಾದಿಯನ್ನು ಅದು ನೋಡೀತು. ಅಕಸ್ಮಾತ್ ಗೇಟು ತೆರೆದಾಗ ಒಳಗೆ ನುಸುಳಿ ನನ್ನ ಕೋಣೆಗೆ ಹೋಗಿ ಹುಡುಕೀತು. ನನ್ನನ್ನು ಕಾಣದೆ ಬೀದಿಯ ನಾಯಿ ಮತ್ತೆ ಬೀದಿಯನ್ನೇ ಆಶ್ರಯಿಸೀತು. ಎಂಬ ವಿಚಾರವೇ ಮನದಲ್ಲಿ ಸುಳಿದಾಡುತ್ತಿತ್ತು."

ಒಮ್ಮೆ ಹಡಗಿನಲ್ಲಿ ಪ್ರಯಾಣ ಮಾಡುತ್ತಿದ್ದಾಗ ಯಾವುದೊ ಒಂದು ಬಂದರದಲ್ಲಿ ಹಡಗಿನ ಮೇಲೆ ಶರತ್‌ಚಂದ್ರರಿಲ್ಲವೆಂಬುದನ್ನು ಕಂಡ ಅವರ ಸಂಗಡಿಗರು ಅವರನ್ನು ಹುಡುಕುತ್ತ ಹೊರಟರು. ದಂಡೆಯಲ್ಲಿ ಒಂದು ಸಣ್ಣ ಅಂಗಡಿಯಿತ್ತು. ಆ ಅಂಗಡಿಯ ಎದುರು ಬಯಲಿನಲ್ಲಿ ಶರತ್‌ಚಂದ್ರರು ಕುಳಿತಿದ್ದರು. ಅವರ ಸುತ್ತಲೂ ನೆರೆದ ೧೫-೨೦ ನಾಯಿಗಳು ಆನಂದದಿಂದ ತಿಂಡಿ ತಿನ್ನುತ್ತಿದ್ದವು. "ಏನಿದು, ಅಲ್ಲಿ ಹಡಗ ಹೊರಡಲಿದೆ. ನೀವಿಲ್ಲಿ ನಾಯಿಗಳಿಗೆ ಮೇಜವಾನಿ ಮಾಡಿಸುತ್ತ ಕುಳಿತಿದ್ದೀರಿ "ಎಂದು ಮಿತ್ರರೆಂದರೆ ಶರತ್‌ಬಾಬುಗಳು "ನನ್ನ ಲಕ್ಷ್ಯವಿದೆ ಆ ಕಡೆ. ಇನ್ನೂ ಹಡಗಿನ ಸೀಟಿಯಾಗಿಲ್ಲವಲ್ಲ." ಎಂದರು.

ಹಡಗಿನ ಮೇಲೆ ಬಂದು ಅವರು, ಒಂದು ಕಥೆ ಕೇಳಿರಿ, ಎಂದರು. "ನನ್ನ ಸಾಹಿತ್ಯವನ್ನು ಓದಿ ಕೆಲ ಮಹಿಳೆಯರು ತುಂಬ ಪ್ರಸನ್ನರಾದರು. ಒಂದು ದಿನ ಅವರು ನನ್ನನ್ನು ಊಟಕ್ಕೆ ಕರೆದರು. ಹೋದೆ. ಅವರ ಮನೆ ವಿಶಾಲವಾಗಿತ್ತು. ಸಂಗಮರವರಿ ಕಲ್ಲಿನ ಮೇಜಿನ ಮೇಲೆ ಸುಂದರ ಅರಿವೆ ಹಾಸಿದ್ದರು. ಯಾವನೊ ರಾಕ್ಷಸ ಅತಿಥಿಗೆಂಬಂತೆ ಹೇರಳ ತಿಂಡಿಗಳನ್ನು ಬಡಿಸಿಟ್ಟಿದರು. ಮನಸ್ಸಿನಲ್ಲಿ ಸಿಟ್ಟು ಉರಿಯಿತು. ಏನು ಮಾಡಲಿ ಎಂದು ಯೋಚಿಸತೊಡಗಿದೆ. ಅಕಸ್ಮಾತ್ತಾಗಿ ನನ್ನ ಗಮನ ಬೀದಿಯಲ್ಲಿದ್ದ ನಾಯಿಗಳತ್ತ ಹೋಯಿತು. ಹಸಿವಿನಿಂದ ಅವೆಲ್ಲ ಎಲವಿನ ಗೂಡುಗಳಾಗಿದ್ದವು. ನಾನು ಮನೆಯ ಯಜಮಾನಿಗೆ "ಅಮ್ಮಾ, ಒಂದು ದೊಡ್ಡ ತಾಟು ತರಿಸಿರಿ" ಎಂದೆ.

"ತಾಟು ಬಂತು. ಅದರಲ್ಲಿ ಅನ್ನ, ಮಾಂಸ, ಮೀನು, ಪಲ್ಯ, ಖೀರು ಎಲ್ಲವನ್ನೂ ತುಂಬಿದೆ. ಅದನ್ನೆತ್ತಿಕೊಂಡು ಹೊರಗೆ ನಡೆದು ಬೀದಿಯಲ್ಲಿಳಿದೆ. ಆಹಾ! ಆ ನಾಯಿಗಳು ಅಂದು ಬಾಳನ್ನು ಬದುಕಿದವು. ಮನೆಯ ಯಜಮಾನಿ ಮಾತ್ರ ಅವಾಕ್ಕಾದಳು. ಬಹಳ ಹೊತ್ತಿನ ಮೇಲೆ ಅವಳು "ಮಕ್ಕಳಾದರೂ ತಿನ್ನುತ್ತಿದ್ದವು!" ಎಂದಳು. ನಾನು "ಅವರು ದಿನಾ ತಿನ್ನುತ್ತಾರೆ. ನಾಯಿಗಳಿಗೆ ಇಂದು ಮಾತ್ರ ಸಿಕ್ಕಿದೆ. ಬದುಕಿಕೊಂಡವು, ಪಾಪ! ? ಎಂದೆ"

ಶರತ್‌ಚಂದ್ರರ ಪ್ರೀತಿ ನಾಯಿಗಳಿಗಷ್ಟೇ ಮರ್ಯಾದಿತವಾಗಿತ್ತೆ? ಕುದುರೆ ಗಾಡಿಯ ಮೇಲೆ ಕೂಡ್ರುವುದು ಅವರಿಗೆ ಕಿಂಚಿತ್ತೂ ಸೇರುತ್ತಿರಲಿಲ್ಲ. ೧೯೨೦-೨೧ ರ ಮಾತು. ಶಿಶಿರ ಪಬ್ಲಿಶಿಂಗ್ ಹೌಸಿನ ಶಿಶಿರ ಕುಮಾರ ಮಿತ್ರರು ಅವರ ಭೆಟ್ಟಿಗೆಂದು ಬರುತ್ತಿದ್ದರು. ತಿರುಗಿ ಹೋಗುವಾಗ ಬಹಳ ರಾತ್ರಿಯಾಗಿರುತ್ತಿತ್ತು. ಟ್ರಾಮುಗಳ ಓಡಾಟ ನಿಂತಿರುತ್ತಿತ್ತು. ನಡೆದು ಹೋಗುವುದು ಅಪಾಯಕರವಾಗಿತ್ತು. ಅದಕ್ಕಾಗಿ ಅವರು ಟಾಂಗಾ ತಂದಿರುತ್ತಿದ್ದರು. ಶರತ್

ಚಂದ್ರರು "ಛಿ! ಛಿ! ನೀವು ಟಾಂಗಾದಲ್ಲಿ ಕೂಡ್ರುತ್ತೀರಲ್ಲ. ಟಾಂಗಾವಾಲ ಕುದುರೆಯನ್ನು ಬಾರುಕೋಲಿನಿಂದ ಹೊಡೆಯುತ್ತಾನೆ. ನನಗದು ಸಹನವಾಗುವುದಿಲ್ಲ." ಎನ್ನುತ್ತಿದ್ದರು.

ಭಾಗಲಪುರದ ಅಡ್ವೊಕೇಟ ಶ್ರೀ ಚಂಡಿಶರಣ ಘೋಷರು ತಮ್ಮದೊಂದು ಅನುಭವ ಹೇಳಿದರು: "ಬ್ರಹ್ಮದೇಶದಿಂದ ತಿರುಗಿ ಬಂದಮೇಲೆ ನಾವಿಬ್ಬರೂ ಬಿಹಾರಕ್ಕೆ ಹೋಗಿದ್ದೆವು. ನಾಲಂದಾದಲ್ಲಿ ಒಂದು ಟಾಂಗಾ ಏರಿದೆವು. ಕುದುರೆ ಓಡದ್ದರಿಂದ ಟಾಂಗಾವಾಲ ಅದಕ್ಕೆ ಬಾರಕೋಲಿನಿಂದ ಹೊಡೆದ. ಶರತ್ ಚಂದ್ರರು "ಹೊಡಿಯ ಬೇಡ. ಹೋಗದಿದ್ದರೆ ಇಲ್ಲ" ಎಂದರು. "ಬಿಡಿಸ್ವಾಮಿ, ಈ ಕುದುರೆ ಹೀಗೆಯೆ. ಪೆಟ್ಟು ತಿಂದ ಮೇಲೆಯೆ ಕಾಲು ಕೀಳುವುದು" ಎಂದು ಟಾಂಗಾವಾಲಾ ಮತ್ತೆರಡು ಬಾರಿಸಿದ. ಶರತ್‌ಬಾಬುಗಳು ಕೂಡಲೆ ಕೆಳಗಿಳಿದು 'ನಾನು ಬರುವುದಿಲ್ಲ' ಎಂದರು.

"ನಾನೆಷ್ಟು ಹೇಳಿದರೂ ಕೇಳಲಿಲ್ಲ. ಟಾಂಗಾದವ ಕುದುರೆಯನ್ನು ಹೊಡೆಯುವುದಿಲ್ಲವೆಂದು ಪ್ರತಿಜ್ಞೆ ಮಾಡುವವರೆಗೂ ಟಾಂಗಾ ಹತ್ತಲಿಲ್ಲ. ಆ ಮೇಲೆ "ನಾವು ಕೂಗಿ ಕೂಗಿ ಅತ್ಯಾಚಾರವನ್ನು ವಿರೋಧಿಸುವಂತೆ ಈ ಬಡ ಪ್ರಾಣಿಗಳು ವಿರೋಧಿಸಲಾರವು. ಆದ್ದರಿಂದಲೇ ಅವುಗಳ ಮೇಲೆ ನನಗಷ್ಟು ಕನಿಕರ' ಎಂದರು."

ಈ ಕನಿಕರ ಅವರಿಗೆ ಸಹಜ ಸ್ವಭಾವವಾಗಿ ಬಿಟ್ಟಿತ್ತು. ಯಾವ ಪ್ರಾಣಿಯೆ ಆಗಲಿ ಕಷ್ಟದಲ್ಲಿರುವುದನ್ನು ಕಂಡರೆ ಅವರ ಆತ್ಮ ಕುದಿಯುತ್ತಿತ್ತು. ಅವರ ನೆರೆಮನೆಯ ಒಂದು ಆಕಳು ಒಂದಿಡೀ ರಾತ್ರಿ ಪ್ರಸವವೇದನೆಯಿಂದ ಬಳಲಿತು. ಶರತ್‌ಚಂದ್ರರಿಗೆ ಆ ರಾತ್ರಿ ನಿದ್ರೆ ಬರಲಿಲ್ಲ. ಆಕಳಿನ ವೇದನೆಯನ್ನು ಕಡಿಮೆ ಮಾಡುವುದೂ ಸಾಧ್ಯವಿರಲಿಲ್ಲ. ಆದ್ದರಿಂದ ರಾತ್ರಿಯಿಡೀ ದೇವರನ್ನು ದೂಷಿಸುತ್ತ ಕುಳಿತರು. ಆಕಳು ಮಾತ್ರವಲ್ಲ, ಸರ್ಪಗಳ ಮೇಲೂ ಅವರ ಮಮತೆ ಅಷ್ಟೇ ಸರಳವಾಗಿತ್ತು. ಚಳಿಗಾಲದ ದಿನಗಳಲ್ಲಿ ಸರ್ಪಗಳು ಬಿಸಿಲು ಕಾಯಿಸುತ್ತ ಮಲಗಿರುವುದನ್ನು ಕಂಡರೆ ಅಲ್ಲಿ ದ್ವಾರಪಾಲಕರಂತೆ ನಿಂತು ಅತ್ತ ಯಾರನ್ನೂ ಹೋಗಗೊಡುತ್ತಿರಲಿಲ್ಲ. "ಪಾಪ! ಬಿಸಿಲು ಕಾಯಿಸುತ್ತಿವೆ. ನೀವು ಹೋದರೆ ಓಡಿ ಹೋಗುವವು" ಎನ್ನುತ್ತಿದ್ದರು. ಸರ್ಪಗಳ ಶತ್ರು ಮುಂಗಲಿಗಳ ಮೇಲೂ ಅವರಿಗೆ ಅಪಾರ ಪ್ರೀತಿಯಿತ್ತು. ಚಿಕ್ಕವರಿದ್ದಾಗ ಅವರೊಂದು ಮುಂಗಲಿಯನ್ನು ಸಾಕಿದ್ದರು.

ಮೀನುಗಳನ್ನು ಕೊಂಡು ತಮ್ಮ ಕೈಯಿಂದಲೇ ಅದಕ್ಕೆ ಉಣಿಸುತ್ತಿದ್ದರು. ಒಮ್ಮೆ ಅವರು ನಿದ್ರಿಸುತ್ತಿದ್ದಾಗ ಸರ್ಪವೊಂದು ಬಂತು. ಮುಂಗಲಿ ಅದನ್ನು ನೋಡಿ ಕೊಂದು ಹಾಕಿತು. ಕೆಲ ಹೊತ್ತಿನ ಮೇಲೆ ಬಂದ ಗೆಳೆಯನೊಬ್ಬ ಈ ದೃಶ್ಯವನ್ನು ನೋಡಿ ಎಲ್ಲರಿಗೂ ತಿಳಿಸಿದ. ಶರತ್‌ಚಂದ್ರರ ತಾಯಿ ಕೂಡಲೆ ತುಪ್ಪದ ದೀಪ ಹಚ್ಚಿ ದೇವರ ಪೂಜೆ ಮಾಡಿ ಎಲ್ಲರಿಗೂ ಪ್ರಸಾದ ಹಂಚಿದಳು. ಶರತ್‌ಚಂದ್ರರು 'ಅಮ್ಮಾ' ನನ್ನ ಪ್ರಾಣ ಉಳಿಸಿದವರನ್ನೆ ಮರೆತೆಯಲ್ಲ' ಎಂದರು.

ಆಗ ತಾಯಿ ತುಸು ಯೋಚಿಸಿ ಬಳಿಕ ಲಜ್ಜಿತಳಾಗಿ 'ಛೆ! ಛೆ ಎಂಥ ಪ್ರಮಾದವಾಯಿತು, ತಡಿ. ಈಗಲೇ ಮುಂಗಲಿಗೆ ಹಾಲು ಮತ್ತು ಬಾಳೆ ಹಣ್ಣು ಕೊಡುತ್ತೇನೆ' ಎಂದಳು.

"ಅಮ್ಮಾ, ಮುಂಗಲಿ ಬಾಳೆ ಹಣ್ಣು ತಿನ್ನುವುದಿಲ್ಲ. ಅದಕ್ಕೆ ಮೀನು ಬೇಕು" ಶರತ್ ಬಾಬು ಹೇಳಿದರು.

ಚಿಕ್ಕಂದಿನಲ್ಲಿ ಇದ್ದ ಕಂಡ ಕಂಡ ಪ್ರಾಣಿಗಳನ್ನು ಸಾಕುವ ಚಪಲ ಶರತ್‌ಚಂದ್ರರ ಮರಣದ ವರೆಗೂ ಉಳಿಯಿತು.

ಜಗತ್ತಿನಲ್ಲಿ ಚಿಂತೆಯಿಲ್ಲವೆಂದರೆ ಮತ್ತೇನು ಉಳಿಯುತ್ತದೆ? ಅದರಲ್ಲಿಯೂ ಶರತ್‌ರಂಥ ಪರದುಃಖಕಾತರ ವ್ಯಕ್ತಿಗೆ? ಒಮ್ಮೆ ಅವರು ಶ್ರೀ ನೃಪೇಂದ್ರ ನಾಥರ ಜೊತೆ ಪೇಟೆಗೆ ನಡೆದಿದ್ದರು. ಒಂದು ವಿಶಾಲ ಕಟ್ಟಡದ ಬಳಿ ಹೋಗುತ್ತಿದ್ದಾಗ ಅವರ ಕಿವಿಗೆ ಜುಟ್ಟಿನ ಗಿಳಿಯ

ಕರುಣ ಚೀತ್ಕಾರ ಕೇಳಿಸಿತು. ಒಮ್ಮೆಲೆ ವ್ಯಗ್ರ ರಾಗಿ ಶರತ್‌ಚಂದ್ರರು ಆ ಮನೆಯೊಳಗೆ ಹೊಕ್ಕರು. ಬಾಗಿಲು ಕಾಯುವವನ ಪರಿವೆ ಯನ್ನೂ ಮಾಡಲಿಲ್ಲ. ಒಳಗೆ ಹೋಗಿ ನೋಡಿದರೆ ಅದು ಹೇಗೊ ಕುತ್ತಿಗೆಗೆ ಸುತ್ತಿಕೊಂಡಿದ್ದ ಹಗ್ಗ ವನ್ನು ಬಿಡಿಸಿಕೊಳ್ಳಲಾರದೆ ಗಿಳಿ ಒದ್ದಾಡು-ತ್ತಿತ್ತು. ಅವರು ಹಗ್ಗ ಬಿಚ್ಚಲುತೊಡಗಿದಾಗ ಇವನಾರೊ ಗಿಳಿ ಕಳ್ಳ ಎಂದು ಬಾಗಿಲು ಕಾಯುವವ ತಿಳಿದು ಅವರನ್ನು ಹೊಡೆಯಲು ಬಂದ. ಅಷ್ಟರಲ್ಲಿ ಮನೆಯ ಯಜಮಾನ ಬಂದು ಶರತ್‌ಚಂದ್ರರಿಗೆ "ನೀವಾರು? ನಿಮಗೇನು ಬೇಕು?" ಎಂದು ಕೇಳಿದ.

ಶರತ್‌ಬಾಬುಗಳು ಉತ್ತರ ಕೊಡಲಿಲ್ಲ. ತಾವೇ ಪ್ರಶ್ನೆ ಕೇಳಿದರು, "ಈ ಪಕ್ಷಿ ನಿಮ್ಮದು ತಾನೇ? ಪಕ್ಷಿ ಸಾಕುವ ಹವ್ಯಾಸವಿದೆಯಲ್ಲವೆ ನಿಮಗೆ?"

ಯಜಮಾನ ಅವಾಕ್ಕಾಗಿ "ಏನನ್ನುತ್ತೀರಿ ನೀವು?" ಎಂದ.

"ಜೀವಜಂತುಗಳನ್ನು ಸಾಕುವುದಾದರೆ ಹೃದ ಯದಲ್ಲಿ ತುಂಬ ಮಮತೆಬೇಕು. ಹಕ್ಕಿ ಎಷ್ಟೊತ್ತಿ ನಿಂದ ಚೀರುತ್ತಿದ್ದರೂ ಒಬ್ಬರೂ ಲಕ್ಷ್ಯ ಕೊಡ ಲಿಲ್ಲ."

ಇವನಾರೊ ಹುಚ್ಚ ಎಂದು ಯಜಮಾನ ತಿಳಿದುಕೊಂಡ. ಅಷ್ಟರಲ್ಲಿ ನೃಪೇಂದ್ರನಾಥರು ಶರತ್‌ಚಂದ್ರರ ಪರಿಚಯ ಮಾಡಿಕೊಟ್ಟರು. ಆಗ ಆ ಮಹಾಶಯರು ಕ್ಷಮೆ ಕೇಳತೊಡಗಿ ದರು. ಶರತ್ ಬಾಬುಗಳೂ ಶಾಂತರಾದರು.

ನಿಜವಾದ ಶಿಕ್ಷಣವನ್ನು ಪಶುಪಕ್ಷಿಗಳಿಂದಲೇ ಪಡೆಯುವುದು ಸಾಧ್ಯವೆಂದು ಶರತ್ ಬಾಬುಗಳ ವಿಶ್ವಾಸವಾಗಿತ್ತು. ಅವರ ಅನುಭವಗಳೂ ಅದ್ಭುತವಾಗಿದ್ದವು. ರಂಗೂನಿನಲ್ಲಿ ಅವರು ಒಂದು ನೂರಿ ಪಕ್ಷಿಯನ್ನು ಸಾಕಿದ್ದರು. ಭಾರತ ಮತ್ತು ಇಂಡೋನೇಶಿಯಗಳನ್ನು ಬಿಟ್ಟರೆ ಈ ಪಕ್ಷಿ ಮತ್ತೆಲ್ಲಿಯೂ ಸಿಗುವುದಿಲ್ಲ. ಆ ಹಕ್ಕಿಯ ಕಂಠ ಅತಿ ಮಧುರವಾಗಿತ್ತು. ಅದೊಮ್ಮೆ ಕಳ್ಳ ರನ್ನು ಹಿಡಿದುಕೊಟ್ಟಿತ್ತು. ಅದರ ಕೂಗಿನ ಕಡೆ ಯಾರೂ ಲಕ್ಷವೀಯದಿರಲು ಅದು ಚುಂಚಿನಿಂದ ಪಂಜರದ ಸರಳನ್ನು ಮುರಿದು ಕಳ್ಳನ ಮೇಲೆ ಪ್ರಹಾರ ಮಾಡಿತು. ಆತ ಗಾಬರಿಯಾಗಿ ದಿಕ್ಕು ಗಾಣದವನಂತಾಗಿದ್ದಾಗ ಶರತ್ ಬಾಬುಗಳು ಬಂದರು. ಆ ಹಕ್ಕಿ ಸತ್ತಾಗ ಶರತ್‌ಚಂದ್ರರು ಬಲು ದುಃಖಪಟ್ಟುಕೊಂಡರು. ಅವರ ಮ್ಲಾನ ಮುಖ, ಕೆದರಿದ ಕೂದಲು ನೀರುತುಂಬಿದ ಕಣ್ಣುಗಳನ್ನು ಕಂಡು ಯಾರಾದರೂ 'ಏನಾ ಯಿತು?" ಎಂದು ಕೇಳಿದರೆ "ನನ್ನ ಮಗ ಸತ್ತ" ಎನ್ನುತ್ತಿದ್ದರು.

ಇಂಥ ಎಷ್ಟೋ ಘಟನೆಗಳಿವೆ. ಪ್ರತ್ಯೇಕ ಘಟನೆಯೂ ಅವರ ಪ್ರೀತಿ ದಯಾಭಾವದ ಕಥೆ ಯನ್ನೇ ಹೇಳುತ್ತದೆ. ಎಷ್ಟು ಹೃದಯಸ್ಪರ್ಶಿಯೊ ಅಷ್ಟೇ ಅದ್ಭುತ. ಇದರಲ್ಲಿ ಪ್ರದರ್ಶನವಿಲ್ಲ, ಕಪಟವಿಲ್ಲ. ಸಾಯುವಾಗಲೂ ಅವರು ತಮ್ಮ ಈ ಸಂಗಾತಿಗಳನ್ನು ಮರೆತಿರಲಿಲ್ಲ. ಆಸ್ಪತ್ರೆಯಲ್ಲಿ ಕ್ಯಾನರಿ ಹಕ್ಕಿಗಳನ್ನು ತರಸಿಟ್ಟುಕೊಂಡಿದ್ದರು. ಈ ಹಕ್ಕಿಗಳು ಬಲು ಸುಂದರವಾಗಿ ಹಾಡುತ್ತವೆ. ಅವುಗಳ ಸಂಗೀತದಲ್ಲಿ ಅವರು ಸ್ವರ್ಗ ಸಂಗೀತ ವನ್ನು ಕೇಳುತ್ತ ಚಿರ ನಿದ್ರಾವಶರಾದರು.

ಈ ಅನಂತ ಕರುಣೆಯಲ್ಲಿ ಹೊರಡುವ ಈ ಕಥಾಶಿಲ್ಪಿಯ ಚಿತ್ರವು ಯಾವನೊಬ್ಬ ಕುಮಾ-ರ್ಗಿಯ ಚಿತ್ರವೇ? ಜೀವನದಲ್ಲಿ ಅವರಿಗೆ ಉಪೇ ಕ್ಷೆಯೆ ಲಭಿಸಿದ್ದೂ ಅವರಿಗೆ ಮಕ್ಕಳಿಲ್ಲದ್ದೂ ಈ ಕರುಣೆಗೆ ಕಾರಣವೆ?

ಇವೆಲ್ಲ ಕ್ಷುದ್ರ ಮತ್ತು ವಿಸಂಗತ ಪ್ರಶ್ನೆಗಳು. ಈ ಕರುಣಾಧಾರೆ ಅವರ ಸಹಜ ಮಾನವತೆಯ ಒಂದು ಅಂಗ ಮಾತ್ರ. ಶಾಸ್ತ್ರಗಳಲ್ಲಿ ಇಂಥ ವ್ಯಕ್ತಿಗಳಿಗೇ "ಋಷಿ ಕಲ್ಪ" ಎಂದು ಕರೆದಿ-ದ್ದಾರೆ. *



# ಅಂಗೋಲಾದಲ್ಲೇಕೆ ಗಲಭೆ?

ಯು. ದಯಾನಂದ ಪಕಳ

ಅಂಗೋಲಾ ಎಂಬುದು ಆಫ್ರಿಕದಲ್ಲಿರುವ ಪೋರ್ತುಗೀಸ್ ವಸಾಹತುಗಳಲ್ಲಿ ಅತಿ ದೊಡ್ಡದು. ಒಟ್ಟು ಒಂದು ಕೋಟಿ ಜನಸಂಖ್ಯೆಯುಳ್ಳ ಆಫ್ರಿಕದ ಪೋರ್ತುಗೀಸ್ ವಸಾಹತುಗಳಲ್ಲಿ ಇನ್ನೆರಡು ಮುಖ್ಯ ಅಂಗಗಳೆಂದರೆ ಮೊಜಾಂಬಿಕ್ ಮತ್ತು ಪೋರ್ತುಗೀಸ್ ಗಿನಿ. ಪಶ್ಚಿಮ ಆಫ್ರಿಕದಲ್ಲಿ ಅಟ್ಲಾಂಟಿಕ್ ಸಾಗರಕ್ಕೆ ಹತ್ತಿರುವ ಅಂಗೋಲಾಕ್ಕೆ ಆ ಹೆಸರು ಬರಲು ಕಾರಣ ಹಿಂದೆ ಅಲ್ಲಿ ಆಳಿದ ನ್‌ಗೋಲಾ ಎಂಬ ಕರಿಯ ರಾಜ. ೪,೮೦,೦೦೦ ಚ. ಮೈಲು ವಿಸ್ತಾರವಾದ ಈ ಪ್ರದೇಶ ಅದನ್ನಾಳುವ ಪೋರ್ತುಗಾಲಿಗಿಂತ ೧೪ ಪಟ್ಟು ದೊಡ್ಡದಾಗಿದೆ.

ಪೋರ್ತುಗೀಸ್ ಆಫ್ರಿಕವು ಆಫ್ರಿಕದ ಮಾನದಿಂದ ಕೂಡ ಒಂದು ಶತಮಾನ ಹಿಂದುಳಿದಿದೆ ಎಂದು ಪ್ರಸಿದ್ಧ ಸಂಚಾರಿ - ಪತ್ರಿಕೋದ್ಯಮಿ ಜಾನ್ ಗುಂಥರ್ ಹೇಳುತ್ತಾರೆ. ಅಂಗೋಲಾ



ಉಳಿದವುಗಳಿಗಿಂತಲೂ ಹಿಂದಿದೆ. ಅದರ ಜನ ಸಂಖ್ಯೆ ಕೇವಲ ೪೫ ಲಕ್ಷ. ಪೋರ್ತುಗೀಸ್‌ರು ಅಂಗೋಲಾವನ್ನು ಆಕ್ರಮಿಸಿಕೊಂಡು ಮುಂದಿನ ವರ್ಷಕ್ಕೆ ಸರಿಯಾಗಿ ೪೮೦ ವರ್ಷಗಳಾಗುತ್ತವೆ. ಆದರೆ ಇಂದಿಗೂ ಅಲ್ಲಿ ಆಹಾರ ಕೊರತೆಯಿದೆ. ಒಂದು ಜಿಲ್ಲೆಗಂತೂ "ಹಸಿವಿನ ಜಿಲ್ಲೆ" ಯೆಂದೇ ಹೆಸರು ಬಿದ್ದಿದೆ.

ಹೆಚ್ಚು ಉದಾರ ವಸಾಹತು ನೀತಿಯನ್ನನು-ಸರಿಸಿದ ಬ್ರಿಟನ್ ಮತ್ತು ಫ್ರಾನ್ಸ್‌ಗಳ ದಾರಿ ಪೋರ್ತುಗಾಲ್‌ಗೆ ಸರಿಹೋಗುವುದಿಲ್ಲ. ಜನ ರಿಗೆ ಮೂಲಭೂತ ಹಕ್ಕುಗಳನ್ನು ಕೂಡ ಪ್ರಯ ತ್ನಪೂರ್ವಕವಾಗಿ ನಿರಾಕರಿಸಲಾಗಿದೆ. ರಾಷ್ಟ್ರೀ ಯತೆಯನ್ನು ಕ್ರೂರವಾಗಿ ಹತ್ತಿಕ್ಕಲಾಗುತ್ತಿದೆ. ರಾಜಕೀಯ ಅಭಿಪ್ರಾಯಗಳಿಗೆ ಜನರ ತಲೆಯಲ್ಲಿ ಹೋಗಲಿಕ್ಕೇ ಅವಕಾಶವೀಯಕೂಡದೆಂಬುದು ಪೋರ್ತುಗೀಸರ ನೀತಿ. ವಿದೇಶೀಯರಿಗೆ—ಪತ್ರಿ ಕೋದ್ಯಮಿಗಳಿಗೂ—ಅಂಗೋಲಾದಲ್ಲಿ ಸಂಚರಿ ಸದಂತೆ ವಿಸಾ ನಿಯಮಗಳನ್ನು ರಚಿಸಲಾಗಿದೆ. ಇಪ್ಪತ್ತು ವರ್ಷಗಳಲ್ಲಿ ಐದಾರು ವಿದೇಶಿ ಪತ್ರಿ-ಕೋದ್ಯಮಿಗಳಾದರೂ ಅಂಗೋಲಾಕ್ಕೆ ಭೆಟ್ಟಿ ಕೊಟ್ಟಿದ್ದಾರೋ ಇಲ್ಲವೋ ಎಂದು ಗುಂಥರ್ ಸಂದೇಹಪಟ್ಟಿದ್ದಾರೆ. ಹೊರ ಜಗತ್ತಿಗೆ ಮರೆತೇ ಹೋದ ಆಫ್ರಿಕನ್ ವಸಾಹತು ಇದು—ಹೌದು, ಈ ವರ್ಷ ಅಲ್ಲಿ ರಕ್ತತರ್ಪಣ ಪ್ರಾರಂಭವಾ-ಗುವ ವರೆಗೂ.

ಪೋರ್ತುಗೀಸರು ಆಫ್ರಿಕದಲ್ಲಿ ತಾವು ವರ್ಣ ಭೇದ ನೀತಿಯನ್ನು ಅನುಸರಿಸುವುದಿಲ್ಲೆಂದು ಹೆಮ್ಮೆಪಟ್ಟುಕೊಳ್ಳುತ್ತಿದ್ದಾರೆ. ಅಂಗೋಲಾ ದಲ್ಲಿ ೧,೬೩,೦೦೦ ಯುರೋಪಿಯನ್ನರಿದ್ದಾರೆ. ಅವರಿಗೂ ಕರಿಯರಿಗೂ ನಡುವೆ ಕಾಯದೆಯಲ್ಲಿ ಏನೂ ಭೇದಭಾವ ಮಾಡಿಲ್ಲವೆಂಬುದು ನಿಜ. ಎಲ್ಲಿಯೂ "ಇಲ್ಲಿ ಕರಿಯರಿಗೆ ಪ್ರವೇಶವಿಲ್ಲ" ಎಂಬ ಹಲಗೆಗಳಿಲ್ಲ. ಬಿಳಿಯರೂ ನಿಗ್ರೋ ಗಳೂ ಭಾರತೀಯರೂ (ಗೋವೆಯಿಂದ ಹೋದ ವರು) ಒಂದೇ ಶಾಲೆಯಲ್ಲಿ ಒತ್ತೊತ್ತಾಗಿ ಕುಳಿತು ಕಲಿಯುತ್ತಿರುವುದನ್ನೂ ಪೋರ್ತುಗೀಸರು ತೋರಿ ಸಬಲ್ಲರು.

ಇದು ಪೋರ್ತುಗೀಸ್ ನೀತಿಯ ಅರ್ಧ ಕಥೆ ಮಾತ್ರ. ಬಿಳಿಯರೊಡನೆ ಸಮಾನತೆ ಪಡೆಯಲು ಕರಿಯರಿಗೆ ಕಾಯದೆ ಪ್ರಕಾರ ಅಧಿಕಾರ ವಿದೆ. ಹೀಗೆ ಸಮಾನತೆ ಪಡೆದವರನ್ನು ಅವರು "ಅಸ್ಸಿಮಿಲಿಡೋ" ಅಥವಾ "ಸಿವಿಲಿಝಾಡೊ" (ಅಂದರೆ ಸುಧಾರಣೆ ಹೊಂದಿದವರು) ಎಂದು ಕರೆಯುತ್ತಾರೆ. ಆದರೆ ಅಸ್ಸಿಮಿಲಿಡೋ ಆಗ ಬೇಕಾದರೆ ಕರಿಯನು ಕೆಲವು ಪರೀಕ್ಷೆಗಳಲ್ಲಿ ಪಾಸಾಗಬೇಕು. ಆತ ಈ ಬಗ್ಗೆ ಅರ್ಜಿ ಮಾಡಿ ಕೊಳ್ಳಬೇಕು. ಆ ಮೇಲೆ ಒಂದು ನ್ಯಾಯ ಮಂಡಲದ ಮುಂದೆ ಆತ (೧) ತಾನು ಪೋರ್ತು ಗೀಸ್ ಭಾಷೆಯಲ್ಲಿ ಸಾಕ್ಷರನೆಂದು, (೨) ತಾನು ಆರ್ಥಿಕವಾಗಿ ಸ್ವಾವಲಂಬಿಯೆಂದು, (೩) ತಾನು ಕ್ರೈಸ್ತ ಮತದವನೆಂದು, (೪) ಬಿಳಿಯರ ಕ್ರಮ ದಲ್ಲಿ ಜೀವನ ಮಾಡುತ್ತಿದ್ದೇನೆಂದು ಸಿದ್ಧಪಡಿಸಿ ತೋರಿಸಬೇಕು. ಆತ ತನ್ನ ಆಫ್ರಿಕನ್ ಬುಡ ಕಟ್ಟಿನವರೊಂದಿಗೆ ಏನೂ ಸಂಪರ್ಕವಿಟ್ಟು ಕೊಳ್ಳಬಾರದು, ಅವರ ರೂಢಿ ಸಂಪ್ರದಾಯ ವೇಷಭೂಷೆಗಳನ್ನು ಪೂರ್ತಿ ವರ್ಜಿಸಿರಬೇಕು. ಹೀಗಾದರೆ ಆತನ ಚರ್ಮ ಕರಿದಾದರೂ ಆತ ಬಿಳಿಯನೇ ಎನಿಸುತ್ತಾನಂತೆ!

ಒಂದಾನೊಂದು ದಿನ ಪೋರ್ತುಗೀಸ್ ಆಫ್ರಿ ಕದ ಕರಿಯರನ್ನೆಲ್ಲ ಅಸ್ಸಿಮಿಲಿಡೋಸ್ ಆಗಿ ಪರಿ ವರ್ತಿಸಿಬಿಡುವೆವೆಂದು ಪೋರ್ತುಗೀಸ್ ಅಧಿ ಕಾರಿಗಳ ಹೇಳಿಕೆ. ವಾಸ್ತವವಾಗಿ ಇದು ಅಸಾಧ್ಯವೆಂದು ಅವರಿಗೆ ಗೊತ್ತಿದೆ. ೪೦ ಲಕ್ಷ ಅಂಗೋಲಿ ಕರಿಯರಲ್ಲಿ ಕೇವಲ ೩೦,೦೦೦ ಜನ ಈ ವರೆಗೆ ಅಸ್ಸಿಮಿಲಿಡೋಸ್ ಆಗಿದ್ದಾರೆ. ಇದಕ್ಕೆ ಕಾರಣ ಅಸ್ಸಿಮಿಲಿಡೋಸ್ ಆಗಲು ಬೇಕಾದ ಅರ್ಹತೆಗಳನ್ನು ತೋರಿಸುವುದು ಕರಿಯರಿಗೆ ಅಸಾಧ್ಯವಾಗಿದೆ. ಶಿಕ್ಷಣವು ಎಷ್ಟು ತುಟ್ಟಿಯಾ-ಗಿದೆಯೆಂದರೆ (ವರ್ಷಕ್ಕೆ ಫೀ ರೂ. ೧೩೭) ಅದು ಸಾಮಾನ್ಯ ಕರಿಯರಿಗೆ ನಿಲುಕುವ ಸಂಭವವೇ

ಇಲ್ಲ. ಯುರೋಪಿಯನ್ ಮಾದರಿಯಲ್ಲಿ ಜೀವಿಸಲು ಬೇಕಾದಷ್ಟು ಹಣವನ್ನು ಶೇಖರಿಸುವುದು ಅತಿ ದುಷ್ಕರವೇ. ಒಂದು ವೇಳೆ ಇಷ್ಟೆಲ್ಲ ಅರ್ಹತೆಗಳನ್ನು ಕರಿಯನಾದವನು ಹೊಂದಿದರೂ ತಮಗೆ ಏನೂ ಅಪಾಯವಿಲ್ಲೆಂದು ಪೋರ್ತುಗೀಸರು ಲೆಕ್ಕ ಹಾಕಿದ್ದಾರೆ. ಆತ ಕ್ರೈಸ್ತನಾಗುವುದರಿಂದಲೂ ತನ್ನವರ ಸಂಪರ್ಕವನ್ನು ಬಿಟ್ಟೇಬಿಡುವುದರಿಂದಲೂ ತನ್ನ ಜನರನ್ನು ಸಂಘಟಿಸಿ ಅಪಾಯಕರ ಚಳವಳಿಗಳನ್ನು ಪ್ರಾರಂಭಿಸಲಾರ. ಆತ ಒಂದು ತರದ ಕರಿಯ ಕುರಿಯಾಗಿ ಪೋರ್ತುಗೀಸ್ ಕೃಪಾಛತ್ರದ ಕೆಳಗೇ ಸದಾ ಇರಬೇಕಾಗುವುದು. ಅಸ್ಸಿಮಿಲಿಡೋಸ್ ಪೈಕಿ ಕೆಲವರು ಉಚ್ಚ ಪದವಿಗೇರಿದ್ದಾರೆ. ಕೆಲವರು ಸ್ವತಂತ್ರವಾದ ಉದ್ಯಮದಲ್ಲಿ ತೊಡಗಿದ್ದಾರೆ. ಆದರೆ ಅವರು ತೀರ ನಿರಪಾಯರಾಗುವರೆಂಬ ನಿರೀಕ್ಷೆ ಮಾತ್ರ ಪೂರೈಸಲ್ಪಟ್ಟಿಲ್ಲ. ಈಗ ಅಂಗೋಲಾದ ವಿಮೋಚನೆಗಾಗಿ ಹೋರಾಡುತ್ತಿರುವವರಲ್ಲಿ ಕೆಲವರು ಹೊರನಾಡುಗಳಲ್ಲಿ ನಿಂತು ಸೂತ್ರಧಾರತ್ವ ವಹಿಸಿದ ಅಸ್ಸಿಮಿಲಿಡೋಸ್ ಜನರೇ ಆಗಿದ್ದಾರೆ.

ಪೋರ್ತುಗೀಸರು ಅಂಗೋಲಾದ ಜನರನ್ನು ಹೇಗೆ ಮುಂದೆ ತರುತ್ತಿದ್ದಾರೆಂಬುದಕ್ಕೆ ಕೆಲ ಅಂಕೆಸಂಖ್ಯೆಗಳ ಸಾಕ್ಷ್ಯವೇ ಸಾಕು. ಕಾಂಗೋದಲ್ಲಿ ಬೆಲ್ಜಿಯನ್ನರು ಅರ್ಧ ಶತಮಾನದ ಆಳಿಕೆಯ ನಂತರ ಹೊರಬೀಳುವಾಗ ಅಲ್ಲಿ ಒಬ್ಬನೇ ಒಬ್ಬ ದೇಶೀಯ ವೈದ್ಯಕೀಯ ಪದವೀಧರನಾಗಲಿ ಇಂಜನಿಯರನಾಗಲಿ ಪ್ರೊಫೆಸರನಾಗಲಿ ಇರಲಿಲ್ಲವೆಂದು ಹೇಳಲಾಗುತ್ತದೆ. ಅಂಗೋಲಾದಲ್ಲಿ ಪೋರ್ತುಗೀಸರ ಐದು ಶತಮಾನಗಳ ಆಳಿಕೆಯ ನಂತರ ೬೮ ಮಕ್ಕಳು ಹೈಸ್ಕೂಲಲ್ಲಿದ್ದಾರೆ; ಸೇಕಡಾ ೯೮ ಜನ ನಿರಕ್ಷರ ಕುಕ್ಷಿಗಳಾಗಿದ್ದಾರೆ. (ಆಫ್ರಿಕದ ಮತ್ತಾವ ಪ್ರದೇಶದಲ್ಲಿಯೂ ನಿರಕ್ಷರತೆ ಇಷ್ಟು ಪ್ರಬಲವಾಗಿಲ್ಲ.)

ಪೋರ್ತುಗೀಸ್ ಆಫ್ರಿಕದ ಹೆಮ್ಮೆಯೆಂದರೆ ಪಶ್ಚಿಮ ಕರಾವಳಿಯಲ್ಲಿರುವ ಅಂಗೋಲಾದಿಂದ ಪೂರ್ವ ಕರಾವಳಿಯಲ್ಲಿರುವ ಮೊಜಾಂಬಿಕ್ ವರೆಗೆ ಬಲು ವ್ಯವಸ್ಥಿತವಾಗಿ ನಡೆಯುವ ರೈಲು ಮಾರ್ಗ. ಆದರೆ ಇದನ್ನು ಕಟ್ಟಿದವರು ಪೋರ್ತುಗೀಸರಲ್ಲ- ಬ್ರಿಟಿಶರು. ರಾಜಧಾನಿ ಲುವಾಂಡಾವನ್ನು ಬಿಟ್ಟರೆ ಒಳನಾಡಿನಲ್ಲಿ ವೈದ್ಯಕೀಯ ಸೌಕರ್ಯದ ಸುಳಿವೇ ಇಲ್ಲ.

ಸಾಮಾನ್ಯ ಆಫ್ರಿಕನ್ ಜನತೆಯ ಆರ್ಥಿಕ ದೆಸೆ ಅತಿ ಹೀನಸ್ಥಿತಿಯಲ್ಲಿದೆ. ಒಬ್ಬ ಆಫ್ರಿಕನ್ ಕಾರ್ಮಿಕನ ಸರಾಸರಿ ತಿಂಗಳ ಸಂಬಳ ರೂ. ೨೫. ಅಂಗೋಲಾದ ಮುಖ್ಯ ಆರ್ಥಿಕ ಉತ್ಪಾದನೆಗಳೆಂದರೆ ಕಾಫಿ, ಎಣ್ಣೆ, ವಜ್ರ ಮತ್ತು ಮೆಂಗನೀಸ್. ಇಲ್ಲಿ ಉತ್ಪನ್ನವಾಗುವ ಕಾಫಿ ಮತ್ತು ಮೆಂಗನೀಸ್‌ಗಳ ಬಹುಭಾಗ ಅಮೇರಿಕಕ್ಕೆ ಹೋಗುತ್ತದೆ. ಯುರೋಪಿನ ಬಡ ದೇಶಗಳಲ್ಲೊಂದಾದ ಪೋರ್ತುಗಾಲ್ ತನ್ನ ಆರ್ಥಿಕ ಸುಭದ್ರತೆಯನ್ನು ಕಾಪಾಡಲು ತನ್ನ ಆಫ್ರಿಕನ್ ವಸಾಹತುಗಳನ್ನೇ ಅವಲಂಬಿಸಿದೆ. ಅಂಗೋಲಾವಂತೂ ಮುಖ್ಯ ಡಾಲರ್‌ಸಂಪಾದಿಸುವ ವಸಾಹತಾಗಿರುವುದರಿಂದ ಅದು ಪೋರ್ತುಗಾಲ್‌ನ ಬೆನ್ನೆಲುಬೇ ಆಗಿದೆ. ಆದ್ದರಿಂದಲೇ ಜಗತ್ತಿನ ಅಭಿಪ್ರಾಯ ಎಷ್ಟು ಖಂಡಿಸಿದರೂ ಪೋರ್ತುಗಾಲ್ ಚಂಡಿ ಹಿಡಿದ ಮಗುವಿನಂತೆ ಅದಕ್ಕೆ ಅಂಟಿಕೊಂಡಿದೆ.

ಅಂಗೋಲಾದ ಸಂಭಾವ್ಯ ಸಂಪತ್ತು ಅಪರಿಮಿತವಾಗಿದೆ. ಆದರೆ ಅದನ್ನು ಬೆಳಸಿಕೊಳ್ಳಲು ಸಾಧ್ಯವಾಗುತ್ತಿಲ್ಲ. ಇದಕ್ಕೆ ಒಂದು ಕಾರಣ ಜನಶಕ್ತಿಯ ಕೊರತೆ. ಇದಾದರೂ ಪೋರ್ತುಗೀಸರ ಪಾಪದ ಫಲವೇ. ಶತಮಾನಗಳ ಕಾಲ ಇಲ್ಲಿಂದ ಮೂಲ ನಿವಾಸಿಗಳನ್ನು ಹಿಡಿದೊಯ್ದು ಅಮೇರಿಕದ ಪೇಟೆಗಳಲ್ಲಿ, ಮುಖ್ಯವಾಗಿ ಬ್ರೇಜಿಲ್‌ನಲ್ಲಿ ಮಾರಾಟ ಮಾಡಲಾಯಿತು. (ಇದರಿಂದ ಅಂಗೋಲಾಕ್ಕೆ ಬ್ರೇಜಿಲ್‌ನ ತಾಯಿ ಎಂದು ಹೆಸರು ಬಿದ್ದಿದೆ). ಇಂದಿಗೂ ಅಂಗೋಲಾ (ಮತ್ತು ಇತರ ಪೋರ್ತುಗೀಸ್ ಆಫ್ರಿಕನ್ ವಸಾಹತುಗಳಲ್ಲಿ) ಗುಲಾಮಶಾಹಿಗೆ ತೀರ ಹತ್ತಿರವಾದ

"ಒತ್ತಾಯದ ದುಡಿಮೆ"ಯ ಪದ್ಧತಿ ಇದೆ ಯೆಂಬುದು ಪೋರ್ತುಗೀಸ್ ಆಳಿಕೆಯ ಅತಿ ದೊಡ್ಡ ಕಳಂಕವಾಗಿದೆ.

ಪ್ರತಿಯೊಬ್ಬ ಆಫ್ರಿಕನ್ನನೂ— ಸ್ವತಃ ಭೂ ಮಾಲಿಕನಾಗಿದ್ದಹೊರತು— ವರ್ಷಕ್ಕಾರು ತಿಂಗಳು ದುಡಿಯಲೇ ಬೇಕು. "ಕೆಲಸವೇ ನಾಗರಿಕತೆಯ ಮಾರ್ಗ. ಒತ್ತಾಯದ ಕೆಲಸದಿಂದ ಆಫ್ರಿಕನ್ನರಿಗೆ ಹಿತವಾಗುತ್ತಿದೆ" ಎಂದು ಪೋರ್ತು ಗೀಸರು ಬೇರೆ ವಾದಿಸುತ್ತಾರೆ. ಆದರೆ ಅದು ವಾಸ್ತವಿಕವಾಗಿ ನಡೆಯುವುದು ಹೀಗೆ: ಒಬ್ಬ ತೋಟದ ಮಾಲಿಕನಿಗೆ ಕೆಲಸಕ್ಕೆ ಜನ ಬೇಕಾಗು ತ್ತದೆ. ಆತ ಜಿಲ್ಲಾಧಿಕಾರಿಗೆ ಸೂಚನೆ ಕೊಡು ತ್ತಾನೆ. ಆತ ಹಳ್ಳಿಗಳಿಂದ ಜನರನ್ನು "ಹಿಡಿದು" ತಂದು ತೋಟಗಾರನಿಗೆ ಒದಗಿಸುತ್ತಾನೆ. ಕೆಲಸ ನನಗೆ ಬೇಡ ಎನ್ನುವ ಹಕ್ಕು ಆ ಬಡಪಾಯಿಗಳಿಗೆ ಇಲ್ಲ. ಅವರಿಗೆ ದೊರೆಯುವ ಸಂಬಳ ಅತಿ ಕಡಿಮೆ. ಆದ್ದರಿಂದ ತನಗಗತ್ಯವಾದ ಕೆಲಸಗಾರ ರನ್ನು ಒದಗಿಸಿದ ಅಧಿಕಾರಿಗೆ ಲಂಚ ಕೊಡಲು ತೋಟಗಾರ ಅಥವಾ ಅವನ ಗುತ್ತಿಗೆದಾರ ಹಿಂಜರಿಯುವುದಿಲ್ಲ. ಈ ಲಂಚದ ಪ್ರಮಾಣ ಸಾಧಾರಣವಾಗಿ ಕೆಲಸಗಾರನ ಸಂಬಳದ ಹತ್ತು ಪಟ್ಟಿನಷ್ಟಿರುತ್ತದೆ. ಈ ಲಂಚದ ವಿರುದ್ಧ ಸರ ಕಾರ ಏನೂ ಮಾಡಲು ಸಮರ್ಥವಾಗಿಲ್ಲ. ಕೆಲಸಗಾರ ಏನಾದರೂ ಪ್ರತಿಭಟನೆಯ ಸಂಕೇತ ವನ್ನಾದರೂ ತೋರಿಸಿದನೋ, ಅವನ ಕೈಮೇಲೆ ತೂತುಗಳನ್ನು ಕೊರೆದ ಪಿಂಗ್‌ಪಾಂಗ್ ಬ್ಯಾಟಿ ನಂಥ ದಂಡದಿಂದ ಬಲವಾದ ಹೊಡೆತಗಳನ್ನು ಕೊಡಲಾಗುತ್ತದೆ. ಚಿಲ್ಲರೆ ಅಪರಾಧಗಳಿಗೆ ಅಲ್ಲಿ ವಿಧಿಸುವ ಅಧಿಕೃತ ಶಿಕ್ಷೆ ಇದು. ಇದರಿಂದ ಒಮ್ಮೊಮ್ಮೆ ಕೈಯೆಲುಬುಗಳು ನಜ್ಜುಗುಜ್ಜಾಗಿ ಶಾಶ್ವತ ಊನವಾಗುವುದುಂಟು.

ಕೆಲ ಕಾಲ ಹಿಂದೆ ಮಲಾಂಗ ಪ್ರದೇಶದ ಹತ್ತಿ ತೋಟಗಳಲ್ಲಿ ದುಡಿಸಲು ಕಾರ್ಮಿಕರನ್ನು ಜುಲುಮೆಯಿಂದ ತಂದಾಗ ಅವರು ಕೂಲಿ ಕಡಿಮೆಯಾಯಿತೆಂದು ಮುಷ್ಕರ ಹೂಡಿದರು. ಇದರಲ್ಲಿ ಬಂಡಾಯದ ಚಿಹ್ನೆಯನ್ನು ಗುರುತಿಸಿದ ಅಧಿಕಾರಿಗಳು ವಿಮಾನಗಳಿಂದ ಬಾಂಬುಗಳನ್ನೆಸೆದು ಮುಷ್ಕರವನ್ನು ಮುರಿದರು. ಇದೀಗ ಅಂ- ಗೋಲಾದಲ್ಲಿ ದಳ್ಳುರಿದು ಪ್ರಜ್ವಲಿಸುತ್ತಿರುವ ಹಿಂಸಾತ್ಮಕ ರಾಷ್ಟ್ರೀಯ ಚಳವಳಿ ಈ ಅತ್ಯಾ ಚಾರದ ವಿಕಾಸವೇ ಎಂದು ಹೇಳಲಾಗಿದೆ.

ಅಂಗೋಲಾದ ಇಂದಿನ ಅನಿರೀಕ್ಷಿತ ಬಂಡಾ ಯದ ಹಿನ್ನೆಲೆಯನ್ನು ಜನವರಿ ೨೨ ರಂದು ಪೋರ್ತುಗೀಸ್ ವಿಲಾಸನೌಕೆಯಾದ "ಸಾಂತಾ ಮರಿಯಾ" ಘಟನೆಯಲ್ಲಿ ಕಾಣಬಹುದು.* ಈ ನೌಕೆಯನ್ನು ಸೆರೆಹಿಡಿದು ಜಗತ್ತನ್ನು ಕಕ್ಕಾವಿಕ್ಕಿ ಯಾಗಿ ಮಾಡಿದ ಗಲ್ವಾವೋ ಹಿಂದೆ ಅಂಗೋಲಾ ದಲ್ಲಿ ಇನ್‌ಸ್ಪೆಕ್ಟರ್ ಜನರಲ್ ಆಗಿದ್ದು ಅಲ್ಲಿನ ದುರಾಡಳಿತಕ್ಕೆ ಬೇಸತ್ತು ಅದನ್ನು ಪ್ರತಿಭಟಿಸಿ ಸೆರೆಮನೆ ಕಂಡ ಪೋರ್ತುಗೀಸನೇ ಆಗಿದ್ದನು. ಹನ್ನೊಂದು ದಿನಗಳ ನಂತರ ಈ ನೌಕೆ ತಿರುಗಿ ಪೋರ್ತುಗೀಸ್ ಅಧಿಕಾರಿಗಳ ಸ್ವಾಧೀನವಾ ದರೂ ಅದು ಪೋರ್ತುಗೀಸ್ ಆಫ್ರಿಕದಲ್ಲೆಲ್ಲ ಸಾಲಝಾರ್ ವಿರೋಧಿ ಹೋರಾಟಕ್ಕೆ ಸಂಕೇತವಾಗಿ ಪರಿಣಮಿಸಿತು.

ಈ ಸಂಕೇತವು ಸ್ಪಷ್ಟವಾಗಿ ಮೊದಲು ತೋರಿ ಬಂದುದು ಫೆಬ್ರುವರಿ ತಿಂಗಳ ಆರಂಭದಲ್ಲಿ ಅಂಗೋಲಾದಲ್ಲಿ. ಫೆಬ್ರುವರಿ ತಿಂಗಳ ಒಂದು ದಿನ ಅಂಗೋಲಾದ ಉತ್ತರಕ್ಕಿರುವ ಬೆಲ್ಜಿ- ಯನ್ ಕಾಂಗೋದಿಂದ ಮೆಶಿನ್‌ಗನ್, ರೈಫಲ್ ಶಸ್ತ್ರಸಜ್ಜಿತರಾದ ಬಂಡಾಯಗಾರರ ಗುಂಪೊಂದು ಪೂರ್ವಸೂಚನೆಯಿಲ್ಲದೇ ಅಂಗೋಲಾವನ್ನು ಪ್ರವೇಶಿಸಿತು. ಅನಿರೀಕ್ಷಿತವಾಗಿ ಆಗಮಿಸಿದ ಬಂಡಾಯಗಾರರ ಗುಂಪು ಉತ್ತರ ಅಂಗೋ- ಲಾದ ದೊಡ್ಡ ಪಟ್ಟಣಗಳಿಂದ ದೂರವಿರುವ ಹಳ್ಳಿ ಭಾಗಗಳನ್ನು ಆವರಿಸಿ ಬಿಳಿ ನಿವಾಸಿ ಮತ್ತು

---

* ಸಾಂತಾ ಮರಿಯಾದ ಘಟನೆಯ ಕಥೆಗಾಗಿ "ಕಸ್ತೂರಿ" ಮೇ, ೬೧ ರ ಸಂಚಿಕೆ ನೋಡಿರಿ.

ಆಫ್ರಿಕನ್ ಕಾರ್ಮಿಕರನ್ನು ಕೊಂದುಹಾಕಿತು. ಈ ವಿಧದ ಸಾಮೂಹಿಕ ಮುತ್ತಿಗೆಯಲ್ಲಿ ಬಿಳಿಯ ಕರಿಯರೆಂಬ ಭೇದ ಗಮನಿಸದೆ ಬಂಡಾಯಗಾರರು ಒಂದು ಪ್ರದೇಶದ ಜನಸಮೂಹವನ್ನೇ ನಾಶಗೊಳಿಸುತ್ತಿದ್ದರು. ಇದು ಒಂದೇ ಅವಧಿಯಲ್ಲಿ ಹಲವಾರು ಕಡೆಗಳಲ್ಲಿ ನಡೆಯಿತು. ದಾಳಿಗೆ ತುತ್ತಾದ ಪ್ರದೇಶ ಮತ್ತು ಪಟ್ಟಣಗಳ ನಡುವಿನ ಸಂಪರ್ಕಾನುಕೂಲತೆಗಳು ಕೆಡಿಸಲ್ಪಟ್ಟುವು, ಸೇತುವೆಗಳು ಕೆಡವಲ್ಪಟ್ಟುವು, ಮಾರ್ಗಗಳು ಪ್ರಯಾಣಕ್ಕೆ ಅಯೋಗ್ಯವಾಗಿ ಮಾಡಲ್ಪಟ್ಟುವು. ಗೆರಿಲ್ಲಾ ಪದ್ಧತಿಯನ್ನು ಅನುಸರಿಸುತ್ತಿದ್ದ ಬಂಡಾಯಗಾರರು ತಮ್ಮ ಭಯೋತ್ಪಾದಕ ಕಾರ್ಯವನ್ನು ನೆರವೇರಿಸಿ ಆಫ್ರಿಕಾದ ದಟ್ಟವಾದ ಸಸ್ಯಸಾಮ್ರಾಜ್ಯದ ಮಧ್ಯೆ ಕರಗಿ ಹೋಗುತ್ತಿದ್ದರು.

ದಾಳಿಗೆ ಗುರಿಯಾದ ಪ್ರದೇಶಗಳ ನಿವಾಸಿಗಳು ಬಿಳಿಯರು, ಕರಿಯರೆನ್ನದೆ—ಜೀವದಿಂದುಳಿದವರು— ಆತಂಕಗೊಂಡು ರಾಜಧಾನಿಯಾದ ಲುವಾಂಡಾಕ್ಕೆ ಧಾವಿಸಿದರು. ಲುವಾಂಡಾದಲ್ಲಿ ಪ್ರತೀಕಾರ ಮನೋಭಾವದಿಂದ ಪ್ರೇರಿತರಾದ ಯುರೋಪಿಯನ್ ನಿವಾಸಿಗಳು ಬೀದಿಯಲ್ಲಿ ಕಣ್ಣಿಗೆ ಕಂಡ ಕರಿಯರನ್ನು ಗುಂಡಿಕ್ಕಿ ಕೊಂದರು; ಬಂಡಾಯಗಾರರ ದಾಳಿಗೆ ತುತ್ತಾಗಿ ಜೀವ ತೊರೆದವರಿಗಿಂತ ಈ ವಿಧವಾಗಿ ಬಿಳಿಯರ ಪ್ರತೀಕಾರಕ್ಕೆ ಗುರಿಯಾಗಿ ಮಡಿದವರ ಸಂಖ್ಯೆಯೇ ಹೆಚ್ಚಾಗಿತ್ತು.

ಆದರೆ ಇತ್ತೀಚೆಗೆ ಅನಧಿಕೃತವಾಗಿ ಅಂಗೋಲಾದಿಂದ ನುಸುಳಿ ಬಂದ ವಾರ್ತೆಯಂತೆ (ಗೊಂದಲಕ್ಕೀಡಾಗಿರುವ ಉತ್ತರ ಅಂಗೋಲಾದಲ್ಲಿ ಸಂಪೂರ್ಣವಾಗಿ ಸೈನಿಕ ರಾಜ್ಯ ನೆಲೆಯೂರಿದ್ದು, ಪತ್ರಿಕಾಕರ್ತರಿಗಾಗಲೀ, ಸಂದರ್ಶಕರಿಗಾಗಲೀ ಅಲ್ಲಿಗೆ ಪ್ರವೇಶಿಸಲು ಅನುಮತಿಯಿಲ್ಲ) ಬಂಡಾಯವು ಉದ್ಭವಗೊಂಡ ರೀತಿ ಅತಿ ಕ್ಷುಲ್ಲಕವಾದುದು. ಆಫ್ರಿಕನ್ ಕಾರ್ಮಿಕರುಮಾಲಕನಲ್ಲಿಗೆ ಕೂಲಿಯನ್ನು ಕೇಳಲು ಹೋದಾಗ ಆತ ಗಾಬರಿಗೊಂಡು ಗುಂಡು ಹಾರಿಸಿದನು. ಇದರಿಂದ ಕೋಪೋದ್ರಿಕ್ತರಾದ ಕಾರ್ಮಿಕರು ಮಾಲಕನ ಮನೆಗೆ ದಾಳಿಯಿತ್ತು ಆತನನ್ನು ಕೊಂದುಹಾಕಿದರು. ಈ ವಾರ್ತೆ ನೆರೆಯ ಕಾಫಿ ತೋಟಗಳಿಗೆ ಹಬ್ಬುತ್ತಲೇ ಯುರೋಪಿಯನ್ ಮಾಲಕರು ಆಫ್ರಿಕನ್ ಕಾರ್ಮಿಕರನ್ನು ಗುಂಡಿಕ್ಕಿ ಕೊಲ್ಲಲಾರಂಭಿಸಿದರು. ಮೊದಲೇ ಅತೃಪ್ತಿಗೊಂಡಿದ್ದ ಆಫ್ರಿಕನರು ಈ ಘಟನೆಯಿಂದ ಇನ್ನಷ್ಟು ಕೆರಳಿ ೨೦೦-೩೦೦ ಮಂದಿಯ ಗುಂಪಾಗಿ ಕೂಡಿಕೊಂಡು ಬಿಳಿಯರ ಮನೆಗಳಿಗೆ ಮುತ್ತಿಗೆ ಹಾಕಿ ಅವರನ್ನು ಕೊಲ್ಲತೊಡಗಿದರು. ಈ ವಿಧವಾಗಿ ಆರಂಭವಾದ ಪುಟ್ಟ ರೀತಿಯ ಬಂಡಾಯವು ಇಂದು ಬೃಹದಾಕಾರವಾಗಿ ಬೆಳೆದ ರಾಷ್ಟ್ರೀಯ ಚಳವಳವಾಗಿ ಪರಿಣಮಿಸಿದೆ.

ಬಂಡಾಯದ ಬೀಜವನ್ನು ಮೊಳಕೆಯಲ್ಲೇ ಚಿವುಟಿ ಒಗೆಯಬೇಕೆಂಬ ಉದ್ದೇಶದಿಂದ ಲಿಸ್ಬನ್‌ನಿಂದ ಸಾಲಝಾರ್ ಸರಕಾರವು ಕೂಡಲೇ ಕೊಡೆ ವೈಮಾನಿಕರ ದಳವೊಂದನ್ನು ಕಳುಹಿಸಿತು. ಹೆಚ್ಚಿನ ಸಂಖ್ಯೆಯಲ್ಲಿ ಸೈನಿಕರನ್ನು ಇನ್ನೂ ಸಾಗಿಸುತ್ತಿದ್ದಾರೆ.

ಮಳೆಗಾಲದ ಮುಕ್ತಾಯದೊಂದಿಗೆ ೨೫,೦೦೦ ಪೋರ್ತುಗೀಸ್ ಸೈನಿಕರು ಉತ್ತರ ಅಂಗೋಲಾದಲ್ಲಿ ಭಯೋತ್ಪಾದಕ ಚಟುವಟಿಕೆಗಳಲ್ಲಿ ನಿರತರಾಗಿರುವ ಸಾಧಾರಣ ೨,೫೦,೦೦೦ ರಾಷ್ಟ್ರವಾದಿಗಳನ್ನು ನಾಶಗೊಳಿಸುವ ಕಾರ್ಯಾಚರಣೆಗೆ ಉದ್ಯುಕ್ತರಾಗುವರು. "ಶರಣಾಗತಿ ಇಲ್ಲವೇ ಸಂಪೂರ್ಣ ನಾಶ" ಎಂಬ ಕರೆಯನ್ನು ಈಗಾಗಲೇ ದಂಗೆದಾರರಿಗೆ ಕೊಡಲಾಗಿದೆ. ಬಂಡಾಯ ಆರಂಭವಾದ ೧೦ ವಾರಗಳಲ್ಲಿಯೇ ೨೫,೦೦೦ ಆಫ್ರಿಕನ್ನರೂ ೬೦೦ ಮಂದಿ ಐರೋಪ್ಯರೂ ಜೀವತೆತ್ತಿರುವರು.

ಆದರೂ ಪೋರ್ತುಗೀಸರು ತಮ್ಮ ಅಧೀನದಲ್ಲಿರುವ ಸಮಸ್ತ ಸಾಧನಗಳನ್ನುಪಯೋಗಿಸಿ ಅಂಗೋಲಾವನ್ನು ಉಳಿಸಿಕೊಳ್ಳಬಯಸುತ್ತಿದ್ದಾರೆ. ಇದೇ ಉದ್ದೇಶದಿಂದ ಬಂಡಾಯವು

ಆರಂಭವಾದ ಕೂಡಲೇ ಸಾಲಝ್ಹಾರ್ ತನ್ನ ಮಂತ್ರಿಮಂಡಲವನ್ನು ಪುನರ್ಘಟಿಸಿದನು; ವಸಾಹತುಗಳ ಮೇಲ್ವಿಚಾರಣೆಗಾಗಿ ಹೊಸ ಮಂತ್ರಿಯೊಬ್ಬನನ್ನು ನೇಮಿಸಿದನು. ಆದರೂ ವಿಸ್ತೃತ ರೂಪದ ಈ ಬಂಡಾಯದ ತೀವ್ರ ಪರಿಣಾಮವನ್ನು ತಡೆಯಲಾಗಲಿಲ್ಲ.

ಅಂಗೋಲಾದ ರಾಜಕೀಯ ಅಶಾಂತತೆಯು ಅದರ ಆರ್ಥಿಕ ಸ್ಥಿತಿಯನ್ನು ಪೂರಾ ಹದಗೆಡಿಸಿದೆ. ಉತ್ತರ ಅಂಗೋಲಾವು ಕಾಫಿ ಬೆಳೆಯ ಪ್ರಮುಖ ಪ್ರದೇಶ. ಬಂಡಾಯಗಾರರು ಕಾಫಿ ಬೆಳೆಯನ್ನು ಕೂಡಿಟ್ಟ ಉಗ್ರಾಣವನ್ನೇ ಧ್ವಂಸಗೊಳಿಸಿದ್ದಾರೆ. ಆಫ್ರಿಕನ್ ಕಾರ್ಮಿಕರ ಅಭಾವದಿಂದಾಗಿ ಈ ವರ್ಷದ ಕಾಫಿ ಬೆಳೆಯೂ ಕೈಗೆ ಸಿಗುವುದು ಅಸಂಭವ. ಅಲ್ಲದೆ ಅಂಗೋಲಾದಲ್ಲಿ ದಿನದಿಂದ ದಿನಕ್ಕೆ ವಿಷಮವಾಗುತ್ತಿರುವ ನಿರುದ್ಯೋಗ ಪರಿಸ್ಥಿತಿಯು ಅಂಗೋಲದ ಆರ್ಥಿಕ ಸ್ಥಿತಿಯನ್ನು ಇನ್ನಷ್ಟು ಕೆಡಿಸಿದೆ. ಆರ್ಥಿಕ ವಿಷಮತೆಯ ಜೊತೆಗೆ ಪೋರ್ತುಗೀಸ್ ಸೈನಿಕರು ಬಂಡಾಯವನ್ನು ಹತ್ತಿಕ್ಕುವ ಕ್ರೂರ ರೀತಿಯು ಮೊದಲು ಪೋರ್ತುಗೀಸ್ ಪರವಾಗಿದ್ದ ಅಸ್ಸಿಮಿಲಿಡೋಸ್‌ಗಳಲ್ಲಿ ಅಸಮಾಧಾನ ಹುಟ್ಟಿಸಿದೆ.

ಅಂಗೋಲಾದ ಕೋಲಾಹಲಕ್ಕೆ ಕಾಂಗೋದ ರಾಜಧಾನಿ- ಲಿಯೊಪೋಲ್ಡ್‌ವಿಲೆಯಲ್ಲಿ ತಳವೂರಿದ ಕಮ್ಯುನಿಸ್ಟ ಸೂತ್ರಚಾಲಕರೇ ಕಾರಣರೆಂದು ಸಾಲಝ್ಹಾರ್ ಸರಕಾರ ವಿಚಿತ್ರ ವಿವರಣೆ ಕೊಡುತ್ತದೆ. ಇದರ ಹಿಂದಿರುವ ಹೇತು ಸ್ಪಷ್ಟವೆ ಇದೆ. "ಕಮ್ಯುನಿಸ್ಟ್" ಎಂದು ಕೂಗಿಬಿಟ್ಟರೆ ಪಾಶ್ಚಾತ್ಯ ರಾಷ್ಟ್ರಗಳು ಹೆದರಿ ತನ್ನ ನೆರವಿಗೆ ಬರುವವೆಂದು ಆತ ಎಣಿಸಿದ್ದಾನೆ. ಆದರೆ ಇದು ಅವನೆಣಿಸಿದಷ್ಟು ಫಲಕಾರಿಯಾಗಲಿಲ್ಲವೆಂದು ಘಟನೆಗಳು ತೋರಿಸಿವೆ. ಸಂಯುಕ್ತ ರಾಷ್ಟ್ರಸಂಘದ (ವಿಶ್ವ ಸಂಸ್ಥೆ) ಸಾಮಾನ್ಯ ಸಭೆಯಲ್ಲಿ ಅಂಗೋಲಾದ ಬಗ್ಗೆ ವಿಚಾರಣಾ ಸಮಿತಿಯನ್ನು ನೇಮಿಸಬೇಕೆಂಬ ಠರಾವು ಚರ್ಚೆಗೆ ಬಂದಾಗ ಅದನ್ನು ವಿರೋಧಿಸಿದ ಪೋರ್ತುಗಾಲ್‌ನ ಬೆಂಬಲಕ್ಕೆ ಅದರ ನ್ಯಾಟೋ ಮಿತ್ರರಾದ ಬ್ರಿಟನ್ ಅಮೇರಿಕಗಳು ಕೂಡ ಬರಲಿಲ್ಲ.

"ಸ್ವತಂತ್ರ ಜಗತ್ತನ್ನು" ಕಮ್ಯುನಿಸ್ಟರಿಂದ ರಕ್ಷಿಸಲು ಪಣತೊಟ್ಟಿರುವ ಅಮೇರಿಕ ಮತ್ತು ಅದರ ಮಿತ್ರ ರಾಷ್ಟ್ರಗಳು ಅಂಗೋಲಾದ ಘಟನೆಗಳಿಂದ ತುಂಬ ಇಕ್ಕಟ್ಟಿನಲ್ಲಿ ಸಿಕ್ಕಿವೆ. ಬ್ರಿಟಿಶ್ ಪ್ರಧಾನ ಮಂತ್ರಿ ಹೆರಾಲ್ಡ್ ಮ್ಯಾಕ್ಮಿಲನ್ನರು ದಕ್ಷಿಣ ಆಫ್ರಿಕದ ಪಾರ್ಲಿಮೆಂಟಿನಲ್ಲಿ ಭಾಷಣ ಮಾಡುತ್ತ ಹೇಳಿದಂತೆ "ಬದಲಾವಣೆಯ ಬಿರುಗಾಳಿ" ಬೀಸುತ್ತಿರುವ ಆಫ್ರಿಕದಲ್ಲಿ ಪೋರ್ತುಗೀಸರು ತಮ್ಮ ವಸಾಹತು ನೀತಿಯನ್ನು ಹೆಚ್ಚು ಉದಾರಗೊಳಿಸಬೇಕೆಂದು ಅವರು ಸಹಜವಾಗಿಯೆ ಬಯಸುತ್ತಾರೆ. ಆದರೆ ಸಾಲಝ್ಹಾರ್ ಬಿಗಿ ಧೋರಣೆ ವಹಿಸಿದ್ದಾನೆ. ಮೇ ತಿಂಗಳಲ್ಲಿ ಆಸ್ಲೋನಿನಲ್ಲಿ ಸೇರಿದ ನ್ಯಾಟೋ ರಾಷ್ಟ್ರಗಳ ಸಭೆಯಲ್ಲಿ ಪೋರ್ತುಗಾಲ್‌ನ ವಸಾಹತು ನೀತಿಗೆ ಇತರ ನ್ಯಾಟೋ ರಾಷ್ಟ್ರಗಳು ನಿಶ್ಶರ್ತ ಬೆಂಬಲವೀಯಬೇಕೆಂದು ಪೋರ್ತುಗೀಸ್ ಪ್ರತಿನಿಧಿ ಖಡಾಖಂಡಿತವಾಗಿ ಕೇಳಿಕೊಂಡನು. ಕಮ್ಯುನಿಸ್ಟ್ ವಿರೋಧಿ ಸಂಘಟನೆಯಲ್ಲಿ ಒಂದು "ಕಲ್ಲುಕಂಬ" ಎಂದು ಭಾವಿಸಲ್ಪಟ್ಟಿರುವ ಪೋರ್ತುಗಾಲ್‌ನ ಅಸಮರ್ಥನೀಯ ದಬ್ಬಾಳಿಕೆಯನ್ನು ಸಮರ್ಥಿಸಿ ಅದರ ಗೆಳೆತನವನ್ನುಳಿಸಿಕೊಂಡು ಅಮೇರಿಕದ ಸ್ವಾತಂತ್ರ್ಯ ರಕ್ಷಕತ್ವವು ಬರಿ ಸೋಗೆಂಬ ಆರೋಪಕ್ಕೆಡೆಗೊಡಬೇಕೋ ಅಥವಾ ತಾನು ಪ್ರತಿಪಾದಿಸುವ ತತ್ವಗಳು ತನ್ನ ಮಿತ್ರರ ವಸಾಹತುಗಳಿಗೂ ಅನ್ವಯಿಸಬೇಕೆಂದು ಬಲವಾದ ನೀತಿಯನ್ನು ಅನುಸರಿಸಿ ಸಾಲಝ್ಹಾರ್‌ನ ಮೈತ್ರಿಗೆರವಾಗಬೇಕೋ? ಇದೀಗ ಅಮೇರಿಕಕ್ಕೆ ಬಂದಿರುವ ಉಭಯ ಸಂಕಟ. *



ಇದರ ಹೆಸರು ಸಾರ್ಥಕವಾಗಿದೆ

# ಚಿಪ್ಪಿನಿಂದ ಚಿನ್ನ

ಬಿ. ಎಸ್. ನರಹರಿರಾವ್

ತೆಂಗಿನ ಮರವನ್ನು ಕಾಮಧೇನುವೆಂದೂ ಕಲ್ಪವೃಕ್ಷವೆಂದೂ ಕರೆಯುವ ವಾಡಿಕೆ ನಮ್ಮಲ್ಲಿದೆ. ತೆಂಗಿನ ಮರ ಮಾನವನಿಗೆ ಅನೇಕಾನೇಕ ರೀತಿಗಳಲ್ಲಿ ಉಪಯೋಗಕ್ಕೆ ಬರುವುದರಿಂದಲೇ ಈ ಹೆಸರುಗಳು ಅದಕ್ಕೆ ಬಂದಿವೆಯೆನ್ನಬಹುದು. ತೆಂಗಿನ ಕಾಯಿ (ಕೊಬ್ಬರಿ), ಅದರ ಗರಿ (ಇವನ್ನು ತೆಂಗಿನ ಗಿಡಗಳು ವಿಶೇಷವಾಗಿರುವ ಕಡೆಗಳಲ್ಲಿ ಮನೆಗಳಿಗೆ ಹೊಚ್ಚುತ್ತಾರೆ. ಕಡ್ಡಿಗಳಿಂದ ಕಸಬರಿಗೆ ಮಾಡುತ್ತಾರೆ.) ಮತ್ತು ಕಾಂಡ (ಬೊಡ್ಡೆ–ಇವನ್ನು ಮನೆಗಳಿಗೆ ತೊಲೆಗಳೆಂದು ಉಪಯೋಗಿಸುತಾರೆ.) ಗಳ ಉಪಯೋಗವನ್ನು ಸಾಮಾನ್ಯವಾಗಿ ಎಲ್ಲರೂ ಬಲ್ಲರು. ಆದರೆ ತೆಂಗಿನ ಚಿಪ್ಪಿನ ಉಪಯೋಗದ ಬಗ್ಗೆ ಬಹುಜನರಿಗೆ ಗೊತ್ತಿಲ್ಲ.

ಶತಮಾನಗಳಿಂದ ಭಾರತದಲ್ಲಿ ಹಾಗೂ ತೆಂಗಿನ ಬೆಳೆ ವಿಪುಲವಾಗಿರುವ ಉಷ್ಣವಲಯದ ವಿವಿಧ ದೇಶಗಳಲ್ಲಿ ತೆಂಗಿನ ಚಿಪ್ಪುಗಳನ್ನು ಗೃಹೋಪಯೋಗಿ ಸಾಧನಗಳೆಂದು ಉಪಯೋಗಿಸಿಕೊಳ್ಳುತ್ತಿದ್ದುದರ ಜೊತೆಗೆ ಅವುಗಳಿಂದ ಸುಂದರ ಕಲಾಕೃತಿಗಳನ್ನು ತಯಾರಿಸುತ್ತಿದ್ದರೆಂದೂ ಇತಿಹಾಸ ಹೇಳುತ್ತದೆ.

ಮದ್ರಾಸ್ ರಾಜ್ಯದಲ್ಲಿ ತೆಂಗಿನ ಚಿಪ್ಪುಗಳಿಂದ ಕೆತ್ತನೆ ಕೆಲಸಮಾಡಿದ ಹೂದಾನಿಗಳು, ದೀಪಸ್ತಂಭಗಳು, ಚಮಚಗಳೇ ಮುಂತಾದ ವಸ್ತುಗಳನು ತಯಾರಿಸುತ್ತಾರೆ. ಸಿಲೋನಿನಲ್ಲಿ ಮದ್ಯ ಸೇವನೆಯ ಪಾತ್ರೆ, ತೆಂಗಿನ ಚಿಪ್ಪೇ ಆಗಿದೆ. ೧೮೪೮ ರಲ್ಲಿ ಡಾ. ವಾಚ್‌ರವರು ಬರೆದ ಗ್ರಂಥದಲ್ಲಿ ಆ ಕಾಲದಲ್ಲಿ ತೆಂಗಿನ ಚಿಪ್ಪಿನಿಂದ ಮಾಡಿದ ೮೩ ಬಗೆಯ ನಿತ್ಯೋಪಯೋಗಿ ವಸ್ತುಗಳು ಬಳಕೆಯಲ್ಲಿದ್ದುವು ಎಂದು ಹೇಳಿದ್ದಾರೆ. ಈ ೮೩ ವಸ್ತುಗಳಲ್ಲಿ ಹುಕ್ಕಾದ ನಲಿಕೆ ಮತ್ತು ಸಿಂಹಳ ದೇಶದ ವೀಣೆ ಇವು ಎದ್ದುಕಾಣುವಂಥವಾಗಿದ್ದುವು.

ಗಾಳಿ ಪ್ರವೇಶಿಸದಂಥ ಪಾತ್ರೆಯಲ್ಲಿ ತೆಂಗಿನ ಕಾಯಿ ಚಿಪ್ಪನ್ನಿಟ್ಟು ಭಟ್ಟಿಯಿಳಿಸಿದಾಗ ಅನೇಕ ಬಗೆಯ ಅನಿಲಗಳು ಮತ್ತು ರಾಸಾಯನಿಕ ವಸ್ತುಗಳು ಉತ್ಪತ್ತಿಯಾಗುವವು. ಭದ್ರಾವತಿಯ ಕಬ್ಬಿಣ ಮತ್ತು ಉಕ್ಕಿನ ಕಾರಖಾನೆಯಲ್ಲಿ ಮರವನ್ನು ಉಪಯೋಗಿಸಿಕೊಂಡು ಈ ಬಗೆಯ ಅನಿಲ ಮತ್ತು ರಾಸಾಯನಿಕ ವಸ್ತುಗಳನ್ನು ದೊಡ್ಡ ಪ್ರಮಾಣದಲ್ಲಿ ಈಗ ಉತ್ಪಾದಿಸುತ್ತಿದ್ದಾರೆ. ಆದರೆ ಮರಕ್ಕಿಂತ ಚಿಪ್ಪೇ ಇದಕ್ಕೆ ಯೋಗ್ಯ ಕಚ್ಚಾ ಸಾಮಗ್ರಿಯೆಂದೂ ಚಿಪ್ಪನ್ನುಪಯೋಗಿಸಿದರೆ ಹೆಚ್ಚು ಲಾಭವಿದೆಯೆಂದೂ ತಿಳಿದಿದೆ ಚಿಪ್ಪಿನಿಂದ ಉತ್ಪಾದನೆಯಾಗುವ ಅನಿಲಗಳಲ್ಲಿ 'ಶಾಖ' ಉತ್ಪತ್ತಿ ಮಾಡಲು ಬಳಸುವ

ಅನಿಲವೇ ಮುಖ್ಯವಾದುದು.

ಚಿಪ್ಪಿನಿಂದ ದೊರಕುವ ರಾಸಾಯನಿಕ ವಸ್ತುಗಳಲ್ಲಿ ಮೀಥೈಲ ಅಲ್ಕೊಹಾಲ್ ಮುಖ್ಯವಾದದ್ದು. ಇದು ಫಾರ್ಮಾಲ್ಡಿಹೈಡ್ ಮತ್ತು ಹಲವಾರು ಔಷಧಿಗಳ ತಯಾರಿಕೆಗಳಲ್ಲಿ ಹಾಗೂ ಪ್ಲಾಸ್ಟಿಕ್, ಕೃತಕ ಬಣ್ಣಗಳು, ಕ್ರಿಮಿನಾಶಕ ವಸ್ತುಗಳು, ಜಾಕಾಯಿ ಮರದ ಕೈಗಾರಿಕೆಗಳಲ್ಲಿ ತುಂಬ ಉಪಯೋಗಿಸುವ ವಸ್ತುವಾಗಿದೆ.

ಚಿಪ್ಪಿನಿಂದ ತಯಾರಾಗುವ 'ಅಸಿಟೋನ್' ರಾಸಾಯನಿಕ ವಸ್ತು ಸಿಡಿಮದ್ದು ಮತ್ತು ಅನಿಲದ ಸರಬರಾಜಿಗೆ ಸಹಾಯಕವಾಗಿದೆ.

ಫಿನಾಯಲ್ ನಮಗೆ ತುಂಬ ಪರಿಚಿತವಾಗಿರುವ ಕ್ರಿಮಿನಾಶಕ ವಸ್ತು. ಚಿಪ್ಪಿನಿಂದ ಇದನ್ನು ಕೂಡ ದೊರಕಿಸಬಹುದು. ಇದನ್ನು ಬಳಸಿ ತಯಾರಿಸುವ ಸಾಬೂನು ಜನಪ್ರಿಯವಾಗಿದೆ. ರಾಸಾಯನಿಕ ವಸ್ತುಗಳನ್ನು ಚಿಪ್ಪಿನಿಂದ ಪಡೆಯುವಾಗ ಪಾತ್ರೆಯ ತಳದಲ್ಲಿ ನಿಲ್ಲುವ ವಸ್ತುವನ್ನು ಮರಕ್ಕೆ ಬಳಿದರೆ ಕ್ರಿಮಿಕೀಟಕಗಳ ಬಾಧೆಯಿಂದ ಅವನ್ನು ರಕ್ಷಿಸಬಹುದು.

ಮರದ ಇದ್ದಲಿಗಿಂತ ತೆಂಗಿನ ಚಿಪ್ಪಿನ ಇದ್ದಿಲು ಹೆಚ್ಚು ಶಾಖವನ್ನೀಯುತ್ತದೆ. ಚಿಪ್ಪನ್ನು ಕಪ್ಪು ಬಣ್ಣ ಬರುವಂತೆ ಸುಟ್ಟು ನೀರಿನ ಆವಿ ಮತ್ತು ಆಮ್ಲದೊಡನೆ ಹದ ಹಾಕಿದಾಗ ಚಿಪ್ಪಿನ ಇದ್ದಿಲು ತಯಾರಾಗುತ್ತದೆ. ಕಾರ್ ಮತ್ತು ಲಾರಿಗಳಲ್ಲಿರುವ ಅನಿಲ ಉತ್ಪಾದಕ ಯಂತ್ರಗಳಿಗೆ ಈ ಇದ್ದಿಲು ತುಂಬ ಉಪಯುಕ್ತವಾದದ್ದು. ಏಕೆಂದರೆ ಇದು ತೇವರಹಿತವಾಗಿದ್ದು ಗಾಳಿಯಲ್ಲಿ ಲೀನವಾಗುವ ವಸ್ತುಗಳೂ ಇದರಲ್ಲಿರು-ವುದಿಲ್ಲ.

ಹೆಚ್ಚು ಶಕ್ತಿಯಿರುವ ಶುದ್ಧ ಇಂಗಾಲ ಕೈಗಾರಿಕಾ ಜಗತ್ತಿನಲ್ಲಿ ಮಹೋಪಕಾರಿಯಾದ ವಸ್ತು. ಸಸ್ಯಮೂಲ ಎಣ್ಣೆಗಳು, ಸಕ್ಕರೆ, ಕುಡಿಯುವ ನೀರು ಇವನ್ನು ಶುದ್ಧಮಾಡಲು, ಜೀವಸತ್ವ ಮತ್ತು ಔಷಧಿಗಳ ತಯಾರಿಕೆಗೆ ಇಂಗಾಲ ಪ್ರಧಾನ ವಸ್ತು. ತೆಂಗಿನ ಚಿಪ್ಪಿನ ಇಂಗಾಲ ಹೆಚ್ಚು ಶಕ್ತಿಯಿರುವ ಶುದ್ಧ ಇಂಗಾಲವಾಗಿರುತ್ತದೆ. ಚಿಪ್ಪಿನ ಇಂಗಾಲಕ್ಕೆ ಭಯಂಕರ ವಿಷಪೂರಿತ ಅನಿಲಗಳನ್ನು ಹೀರಿಕೊಳ್ಳುವ ಶಕ್ತಿಯಿರುವುದರಿಂದ ಈ ಇಂಗಾಲ ಬಳಸಿ ತಯಾರಿಸಿದ ಮುಖವಾಡಗಳು ಸಮರಕಾಲದಲ್ಲಿ ಪ್ರಯೋಗಿಸಲ್ಪಡಬಹುದಾದ ವಿಷಪೂರಿತ ಅನಿಲಗಳಿಂದ ಜನರನ್ನು ರಕ್ಷಿಸಲು ಅತ್ಯಂತ ಸಮರ್ಥವಾದ ಸಾಧನಗಳಾಗಬಹುದು.

ಪ್ರಮುಖ ರಾಸಾಯನಿಕ ವಸ್ತುವಾದ 'ಫರ್ಫುರಾಲ್' ಎಂಬುದನ್ನು ತೆಂಗಿನ ಚಿಪ್ಪಿನಿಂದ ಪಡೆಯಬಹುದು ಎಂದು ತಿಳಿದಿದೆ. ಭಾರೀ ಪ್ರಮಾಣದಲ್ಲಿ ಇದು ಸಾಧ್ಯವಾದರೆ ಮಾನವ ಜೀವನ ಸುಖಮಯವಾಗುವುದಕ್ಕೆ ಬೇಕಾದ ಹಲವಾರು ಔಷಧಿ ಮತ್ತು ನಿತ್ಯೋಪಯೋಗಿ ವಸ್ತುಗಳ ತಯಾರಿಕೆಗೆ ಇದು ಆಧಾರವಸ್ತುವಾಗಬಲ್ಲದು. ರೇಯಾನ್, ಪ್ಲಾಸ್ಟಿಕ್, ಬಣ್ಣ, ಕ್ರಿಮಿನಾಶಕ ದ್ರವ್ಯ, ಧಾನ್ಯ ಸಂಗ್ರಹಕ್ಕೆ ಬೇಕಾಗುವ ರಾಸಾಯನಿಕ ವಸ್ತು, ವಿಮಾನ ತಯಾರಿಕೆಗೆ ಬೇಕಾಗುವ ಅಂಟುದ್ರವ್ಯ, ಮಲೇರಿಯ ನಿರೋಧಕ ವಸ್ತುಗಳಿಗೆಲ್ಲ 'ಫರ್ಫುರಾಲ್'ವೇ ಆಧಾರ ವಸ್ತುವಾಗಿದೆ.

ತೆಂಗಿನ ಚಿಪ್ಪು (ಕರಟ) ನಿರುಪಯೋಗಿ ವಸ್ತು ಎಂದು ತಿಳಿದಿದ್ದೇವೆ. ಅದನ್ನು ತುಸು ತಿರಸ್ಕಾರದಿಂದಲೇ ನಾವು ನೋಡುತ್ತಿದ್ದೇವೆ ಎನ್ನಲೂಬಹುದು. ಏಕೆಂದರೆ ಏನೂ ದುಡಿಯದ ದಡ್ಡನನ್ನು ಕಂಡಾಗ ಇವನಿಗೆ "ಪರಟೆಯೆ ಗತಿ" ಎಂದು ಹೇಳುವುದು ರೂಢಿಯಾಗಿದೆ. ಆದರೆ ನಿಜವಾಗಿ ಇದು ಬಡತನದ ಕುರುಹಾಗಿರದೆ ಯೋಗ್ಯವಾಗಿ ಉಪಯೋಗಿಸಿಕೊಂಡಲ್ಲಿ 'ಕಾಮಧೇನು'ವಾಗಿ ಪರಿಣಮಿಸುವಂಥ ವಸ್ತುವಾಗಿದೆಯೆಂಬುದಕ್ಕೆ ಅದರಿಂದ ತಯಾರಿಸಬಹುದಾದ ನಾನಾ್ಸಬಗೆಯ ವಸ್ತುಗಳೇ ಸಾಕ್ಷಿಯಾಗಿವೆ. *



ಆತ ನಾಗರಿಕತೆಯ ಮುಖವನ್ನೇ ಬದಲಾಯಿಸಿದ

# ನವಕಲ್ಪನೆಗಳ ಮಾಂತ್ರಿಕ ಎಡಿಸನ್



ಕ್ಯಾಪ್ಟನ್ ಎಂ. ಜಿ. ಕೆ. ಮೂರ್ತಿ

"ವಿದ್ಯುಚ್ಛಕ್ತಿಯ ಬಾಲ ಪ್ರಚಂಡ" "ಮಾನವ ಕುಲಕ್ಕೆ ಮಹೋಪಕಾರಿ" "ನವ ಆವಿಷ್ಕಾರಗಳ ಮಾಂತ್ರಿಕ" ಎಂಬ ಅಭಿಧಾನಗಳಿಂದ ಜಗದ್ವಿಖ್ಯಾತನಾಗಿ, ಮೂರು ತಿಂಗಳಿಗಿಂತ ಹೆಚ್ಚು ಕಾಲ ಪಾಠಶಾಲೆಯಲ್ಲಿರದಿದ್ದರೂ ಸ್ವಯಂ ಶಿಕ್ಷಣದಿಂದ ಅದ್ವಿತೀಯ ಪಾಂಡಿತ್ಯವನ್ನು ಗಳಿಸಿ ಮಾನವ ನಾಗರಿಕತೆಯ ಮುಖವನ್ನೇ ಬದಲು ಮಾಡಿದ ಥಾಮಸ್ ಅಲ್ವಾ ಎಡಿಸನ್ ನವ ಕಲ್ಪನೆಯಲ್ಲಿ ಪ್ರಪಂಚದ ಇತಿಹಾಸದಲ್ಲೆಲ್ಲಾ ಅಗ್ರಗಣ್ಯನೆಂದು ಭಾವಿಸಲ್ಪಟ್ಟಿದ್ದಾನೆ. ವಿದ್ಯುದ್ದೀಪವನ್ನು ನಿರ್ಮಾಣಮಾಡುವೆನೆಂದು ಹೇಳಿ, ವಿದ್ಯುಚ್ಛಕ್ತಿಯ ಪ್ರಮುಖರು ಅವನನ್ನು ಅಪಹಾಸ್ಯ ಮಾಡಿ ನಗುತ್ತಿದ್ದಾಗ, ಅವನು ಜಯಶೀಲನಾಗಿ ಎಲ್ಲರೂ ಬೆರಗಾಗಿ ಬಾಯಿಮುಚ್ಚುವಂತೆ ಮಾಡಿದನು ಅವನ ೩೦೦೦ ಆವಿಷ್ಕಾರಗಳಿಂದ ಮಾನವ ಕುಲಕ್ಕೆ ೧೦,೦೦೦ ಕೋಟಿ ರೂಪಾಯಿಗಳಷ್ಟು ಉಪಕಾರವಾಗಿದೆಯೆಂದು ಅಂದಾಜಿದೆ. ವಿದ್ಯುದ್ದೀಪ, ಗ್ರಾಮಾಫೋನ್, ಮಾತಾಡುವ ಸಿನೆಮಾ, ಧ್ವನಿವರ್ಧಕ, ಟೆಲಿಫೋನ್— ಆಧುನಿಕ ಜೀವನದ ಈ ಮತ್ತು ಇತರ ಅನಿವಾರ್ಯ ಸೌಕರ್ಯಗಳಿಗೆ ನಾವು ಎಡಿಸನ್ನನಿಗೆ ಋಣಿಯಾಗಿರಬೇಕು. ಅದ್ಭುತವಾದ ಅವನ ಜೀವನ ಚಲನಚಿತ್ರದ ನಾಟಕದಂತಿದೆ.

ಎಡಿಸನ್ ೧೮೪೭ ನೇ ಇಸ್ವಿಯಲ್ಲಿ ಅಮೇರಿಕದಲ್ಲಿ ಜನಿಸಿದನು. ಮಗುವುತನದಿಂದಲೇ ಅವನ ಜಿಜ್ಞಾಸೆಗಳಿಗೆ ತುದಿ ಮೊದಲಿರಲಿಲ್ಲ. "ಏಕೆ?" ಎಂಬ ಅವನ ನಿರಂತರ ಪ್ರಶ್ನೆಗಳಿಂದಾಗಿ ಅವನಿಗೆ "ಏಕೆ?" ಎಂಬ ಅಡ್ಡಹೆಸರೇ ಬಿದ್ದಿತ್ತು. ಬರಿ ಕೇಳಿ ತಿಳಿದುಕೊಂಡು ತೃಪ್ತನಾಗದೆ ತಾನೇ ಕಂಡುಹಿಡಿಯಲು ಮುಂದಾಗುತ್ತಿದ್ದನು. ಕೋಳಿ ಮರಿಯ ಪುಕ್ಕಗಳು ಹೇಗೆ ನಿಂತಿರುತ್ತವೆಂಬುದನ್ನು ನೋಡಲು ಆತ ಅವುಗಳನ್ನು ಎಳೆಯುತ್ತಿದ್ದನು ಬಾತುಗಳ ಜಾಲಪಾದಗಳನ್ನು ಪರೀಕ್ಷಿಸಲು ಅವುಗಳನ್ನು ಹಿಡಿಯುತ್ತಿದ್ದನು. ಕೋಳಿ ಮೊಟ್ಟೆಗಳ ಮೇಲೆ ಕುಳಿತರೆ ಮರಿಗಳು ಬರುವವೇ ಎಂಬುದನ್ನು ಪರೀಕ್ಷಿಸಲು ಮೊಟ್ಟೆಗಳ ಮೇಲೆ ಕುಳಿತನು. ಅವನ ಶೋಧಕ ಬುದ್ಧಿಯಿಂದ ಅವನ ಜೀವಕ್ಕೂ ಇತರರ ಜೀವಕ್ಕೂ ಬರುವ ಅಪಾಯಗಳ ಮೇಲೆ ಕಣ್ಣಿಡುವುದು ದೊಡ್ಡ ಕೆಲಸವೇ ಆಗಿತ್ತು. ಪ್ರವಾಹಕ್ಕೆ

ಸೇತುವೆ ಕಟ್ಟಹೋಗಿ ಆತ ಒಮ್ಮೆ ನದಿಯಲ್ಲಿ ಬಿದ್ದನು. ಸಾವೆಂದರೇನೆಂದು ತಿಳಿಯಲು ತನ್ನ ಒಬ್ಬ ಗೆಳೆಯನೊಡನೆ ಆತ ಮಡುವಿನಲ್ಲಿ ಧುಮುಕಿದಾಗ ಅವನ ಗೆಳೆಯ ಮೇಲೆ ಬರಲೇ ಇಲ್ಲ. ಇನ್ನೊಮ್ಮೆ ಗಾಳಿತುಂಬಿ ಆಕಾಶಬುಟ್ಟಿಗಳು ಹಾರುತ್ತವೆಂದು ಕೇಳಿ, ಅವನು ಇನ್ನೊಬ್ಬ ಹುಡುಗನಿಗೆ ಸೀಡ್‌ಲಿಟ್ಸ್ ಪುಡಿಯನ್ನು ಹೆಚ್ಚಾಗಿ ತಿನ್ನಿಸಿ, ಅದರಿಂದ ಅವನ ಹೊಟ್ಟೆಯಲ್ಲಿ ಹುಟ್ಟುವ ಗಾಳಿಯು ಅವನನ್ನು ಮೇಲಕ್ಕೇರಿಸುವುದೇ ಎಂದು ನೋಡಿದನು

ಎಡಿಸನ್ ಏಳನೇ ವರ್ಷದಲ್ಲಿ ಶಾಲೆಯನ್ನು ಸೇರಿದನು. ಪದೇಪದೇ ಕೇಳುತ್ತಿದ್ದ ಪ್ರಶ್ನೆಗಳಿಂದ ಅವನ ಶಿಕ್ಷಕನಿಗೆ ಕೋಪಬಂದು, ಎಡಿಸನ್‌ಗೆ ಜುಗುಪ್ಸೆಯಾಗಿ ಮೂರು ತಿಂಗಳಲ್ಲಿ ಅವನು ಶಾಲೆ ಬಿಟ್ಟನು. ಪುನಃ ಯಾವ ಶಾಲೆಗೂ ಹೋಗಲಿಲ್ಲ. ಅವನು ಮನೆಯಲ್ಲೇ ತಾಯಿ-ತಂದೆಗಳಿಂದ ಪಾಠ ಕಲಿತು, ಅನೇಕ ಗ್ರಂಥಗಳನ್ನೋದಿದನು. ಒಂಭತ್ತನೇ ವಯಸ್ಸಿಗೆ ಆತ ಗಿಬ್ಬನ್ನನ Decline and Fall of the Roman Empire, ಸಿಯರನ History of the World ನಂಥ ಉದ್ಗ್ರಂಥಗಳನ್ನೋದಿದ್ದನು. ಅವನಿಗೆ ಹತ್ತು ವರ್ಷವಾಗಿದ್ದಾಗ ಅವನು ಒಂದು ರಸಾಯನ ಶಾಸ್ತ್ರ ಪುಸ್ತಕದಲ್ಲಿ ವಿವರಿಸಿದ್ದ ಪ್ರತಿಯೊಂದು ಪ್ರಯೋಗವನ್ನೂ ಸ್ವತಃ ಮಾಡಲಿಚ್ಛಿಸಿ, ತನ್ನ ಮನೆಯ ನೆಲಮಾಳಿಗೆಯಲ್ಲಿ ಪ್ರಯೋಗಶಾಲೆಯನ್ನು ಸ್ಥಾಪಿಸಿ, ಕಚ್ಚಾಡ ಗುಡ್ಡೆಗಳನ್ನು ಶೋಧಿಸಿ, ಅದಕ್ಕೆ ಬೇಕಾದ ಪದಾರ್ಥಗಳನ್ನು ಸಂಗ್ರಹಿಸಿದನು. ಎರಡು ವರ್ಷಗಳಲ್ಲಿ ಅನೇಕ ಗ್ರಂಥಗಳನ್ನು ಓದಿ, ನೂರಾರು ಪ್ರಯೋಗಗಳನ್ನು ಮಾಡಿ, ಅವುಗಳನ್ನು ಸಮಂಜಸವಾಗಿ ಬರೆದಿಟ್ಟನು. ಈ ಅಸಂದಿಗ್ಧತೆಯು ಅವನ ಗುಣದ ವಿಶೇಷ ಲಕ್ಷಣ. ಅವನ ಮನೆಯ ಬಳಿ ಒಂದು ರೇಲ್ವೆ ನಿಲ್ದಾಣವು ಕಟ್ಟಲ್ಪಡುತ್ತಿದ್ದಾಗ, ಅವನು ಅಲ್ಲಿನ ವಿಷಯಗಳನ್ನೆಲ್ಲಾ ಅವಲೋಕಿಸಿ, ಯಂತ್ರೋಪಕರಣಗಳು, ರೈಲುದಾರಿ ಇತ್ಯಾದಿಗಳ ಬಗ್ಗೆ ಎಲ್ಲರನ್ನೂ ಪ್ರಶ್ನಿಸಿ ತಿಳಿದುಕೊಂಡನು.

ಪ್ರಯೋಗಶಾಲೆಯನ್ನು ಪೂರ್ಣಗೊಳಿಸಲು ಬೇಕಾಗಿದ್ದ ದ್ರವ್ಯವನ್ನು ಸಂಪಾದಿಸಲು ಎಡಿಸನ್ ೧೨ ನೆ ವಯಸ್ಸಿನಲ್ಲಿ ರೈಲಿನಲ್ಲಿ ವೃತ್ತಪತ್ರಿಕೆಗಳನ್ನೂ ಹಣ್ಣು-ಹಂಪಲಗಳನ್ನೂ ಮಾರುವ ಕೆಲಸಕ್ಕೆ ಸೇರಿದನು. ರೈಲು ಅವನ ಊರನ್ನು ಬೆಳಿಗ್ಗೆ ಏಳು ಗಂಟೆಗೆ ಬಿಟ್ಟು, ಡೆಟ್ರಾಯ್ಟ್ ನಗರದಿಂದ ರಾತ್ರಿ ೯॥ ಗಂಟೆಗೆ ಹಿಂತೆರಳುತ್ತಿತ್ತು. ಸಾಮಾನುಗಳನ್ನು ಮಾರಲು ಅವನು ಅರ್ಧ ಗಂಟೆಗೊಮ್ಮೆ ಗಾಡಿಗಳಲ್ಲಿ ಸುತ್ತಬೇಕಾಗಿತ್ತು. ಇದಾದ ಮೇಲೆ ಪೂರಾ ಅರ್ಧ ಗಂಟೆ ಅವನು ಓದುತ್ತಿದ್ದನು. ರೈಲು ಡೆಟ್ರಾಯ್ಟ್‌ನಲ್ಲಿ ಆರು ಗಂಟೆ ನಿಲ್ಲುತ್ತಿತ್ತು. ಈ ಅವಧಿಯನ್ನು ಅವನು ಸಾರ್ವಜನಿಕ ಪುಸ್ತಕಾಲಯದಲ್ಲಿ ಗ್ರಂಥಗಳನ್ನು ಓದುವುದಕ್ಕೂ ಕಾರ್ಖಾನೆಯಲ್ಲಿ ಯಂತ್ರೋಪಯಂತ್ರಗಳನ್ನು ಪರಿಶೋಧಿಸುವುದಕ್ಕೂ ಉಪಯೋಗಿಸುತ್ತಿದ್ದನು. ರಾತ್ರಿ ಹೊತ್ತಾಗಿ ಮನೆ ಸೇರಿದಮೇಲೂ ಅವನು ತನ್ನ ಪ್ರಯೋಗಶಾಲೆಯಲ್ಲಿ ದುಡಿಯುತ್ತಿದ್ದನು.

ರೈಲಿನಲ್ಲಿ ಗಂಟುಮೂಟೆಗಳಿಡುವ ಗಾಡಿಯಲ್ಲಿ ಎಡಿಸನ್ ಹಣ್ಣುಗಳನ್ನಿಡುತ್ತಿದ್ದನು. ಅಲ್ಲೇ ಅವನು ಪ್ರಯೋಗಶಾಲೆಯನ್ನು ರಚಿಸಿ, ರೈಲು ಚಲನೆಯಲ್ಲಿದ್ದಾಗ ವಿಜ್ಞಾನ ಪ್ರಯೋಗಗಳನ್ನು ಮಾಡುತ್ತಿದ್ದನು. ಡೆಟ್ರಾಯ್ಟ್‌ನಲ್ಲಿ ಅವನು ಸಮಾಚಾರಪತ್ರಿಕೆಗಳನ್ನು ಕೊಂಡು, ಮಾರ್ಗದ ಸ್ಟೇಷನ್‌ಗಳಿಗೆ ತಂತಿವಾರ್ತೆ ಕಳಿಸಿ, ಪತ್ರಿಕೆಯನ್ನು ಕೊಂಡುಕೊಳ್ಳಲು ಜನ ಗುಂಪುಗಳು ಕಿಕ್ಕಿರಿಯುವಂತೆ ಮಾಡುತ್ತಿದ್ದನು. ಮಹತ್ವದ ಸುದ್ದಿಯ ದಿನ ಅವನು ಬೆಲೆಯನ್ನೇರಿಸಿ ೧೦೦ ಡಾಲರ್ ಗಳಿಸುತ್ತಿದ್ದನು. ಅವನ ೧೫ ನೇ ವಯಸ್ಸಿನಲ್ಲಿ ಹಳೆ ಮುದ್ರಣ ಯಂತ್ರದಿಂದ ಒಂದು ವಾರಪತ್ರಿಕೆಯನ್ನು ಗಾಡಿಯಲ್ಲಿ ಮುದ್ರಿಸಿ, ಪ್ರಕಟಿಸಿದನು. ಅದರ ಸಂಪಾದಕ, ಸಂಶೋಧಕ, ಬಾತ್ಮಿದಾರ, ಅಚ್ಚು ಕೂಡಿಸುವವ, ಮುದ್ರಣಕಾರ, ಛಾಪಕ, ಪ್ರಚಾರ ವ್ಯವಸ್ಥಾಪಕ ಎಲ್ಲಾ ಅವನೇ ಆಗಿದ್ದನು. ಅವನ ಅಮೋಘವಾದ

ಕಲ್ಪನಾಶಕ್ತಿಯನ್ನು "ಲಂಡನ್ ಟೈಮ್ಸ್" ಪತ್ರಿಕೆಯು ಬಹಳ ಕೊಂಡಾಡಿತು.

ಒಂದು ದಿನ ಒಬ್ಬ ಸಿಗ್ನಲರ್‌ನ ಮಗನು ರೈಲುಗಾಡಿಗೆ ಸಿಕ್ಕಿಬಿದ್ದಾಗ, ಎಡಿಸನ್ ಸಾಹಸದಿಂದ ಅವನನ್ನುಳಿಸಿದನು. ಕೃತಜ್ಞನಾದ ತಂದೆ ಎಡಿಸನ್‌ಗೆ ತಂತಿಯ ಸಿಗ್ನಲ್ ಕ್ರಮವನ್ನು ಉಚಿತವಾಗಿ ಕಲಿಸಿದನು. ಎಡಿಸನ್ ಅದರಲ್ಲಿ ಪ್ರವೀಣನಾಗಿ ೧೫ನೇ ವಯಸ್ಸಿನಲೇ ತಂತಿಯ ಕಾರ್ಯಾಲಯವನ್ನು ಸ್ವತಂತ್ರವಾಗಿ ನಿಭಾಯಿಸಿ, ಸ್ವಪ್ರಯತ್ನದಿಂದ ಯಂತ್ರೋಪಕರಣಗಳ ರಹಸ್ಯಗಳನ್ನು ಗ್ರಹಿಸಿ ಬಲು ಚತುರನಾದನು. ತನ್ನ ಮನೆಯನ್ನೂ ದೂರದ ಮತ್ತೊಂದು ಮನೆಯನ್ನೂ ತಂತಿಯಿಂದ ಜೋಡಿಸಿ ತನ್ನ ಸಾಧನವನ್ನು ವೃದ್ಧಿಗೊಳಿಸಿದನು. ಒಮ್ಮೆ ಅವನು ಚಲಿಸುತ್ತಿದ್ದ ರೈಲುಗಾಡಿಯನ್ನೇರುತ್ತಿದ್ದಾಗ ತೊಂದರೆಗೆ ಸಿಕ್ಕಿಕೊಳ್ಳಲು, ಒಳಗಿದ್ದವನೊಬ್ಬನು ಅವನನ್ನು ಕಿವಿಹಿಡಿದು ಮೇಲಕ್ಕೆಳೆದನು; ಇದರಿಂದ ಅವನು ಕಿವುಡಾದನು. ಮನಸಿನ ಏಕಾಗ್ರತೆ ಹೆಚ್ಚಲು ಇದು ಒಳ್ಳೆಯದೆಂದು ಅವನು ಚಿಕಿತ್ಸೆಗೆ ಒಪ್ಪದೆ, ಕಿವುಡಾಗಿಯೇ ಇರಲು ಇಚ್ಛಿಸಿದನು!

ಎಡಿಸನ್ ೧೭ನೇ ವಯಸ್ಸಿನಲ್ಲಿ ತಂತಿ ಆಪರೇಟರ್ ಉದ್ಯೋಗಕ್ಕೆ ಸೇರಿ, ಊರಿಂದೂರಿಗೆ ಪದೇ ಪದೇ ವರ್ಗವಾಗಿ ಅಲೆಯುತ್ತಿದ್ದರೂ ಯಾವ ಊರಿನಲ್ಲಿ ಎಷ್ಟೇ ಅಲ್ಪ ಕಾಲ ನಿಂತರೂ ಅಲ್ಲಿ ಅಗಾಧವಾಗಿ ವ್ಯಾಸಂಗಮಾಡಿ, ತನ್ನ ಕಾರ್ಯಾಲಯದಲ್ಲಿ ಪ್ರಯೋಗಶಾಲೆಯನ್ನು ರಚಿಸಿ, ವಿಜ್ಞಾನ ಸಂಶೋಧನಗಳನ್ನು ಮಾಡಿ, ಅನೇಕ ನವಕಲ್ಪನೆಗಳನ್ನು ನಿರ್ಮಿಸಿದನು. ಒಂದೇ ತಂತಿಯ ಮೇಲೆ ಏಕಕಾಲದಲ್ಲಿ ನಾಲ್ಕಾರು ಬೇರೆ ಬೇರೆ ಸುದ್ದಿಗಳನ್ನು ಕಳುಹಿಸಲು ಉಪಕರಣಗಳು, ಚುನಾವಣೆಯ ವೋಟುಗಳನ್ನು ಎಣಿಸಲು ಸ್ವಯಂಚಾಲಕ ಯಂತ್ರ ರಚನೆ, ಮುಂತಾದವುಗಳನ್ನು ಕಲ್ಪಿಸಿದನು ಅವನ ೨೧ ನೇ ವರ್ಷದಲ್ಲಿ ಪದೇ ಪದೇ ಬದಲಾಗುವ ಚಿನ್ನದ ಬೆಲೆಯ ದರಗಳನ್ನು ಸಮಂಜಸವಾಗಿ ಬೇರೆ ಬೇರೆ ಸ್ಥಳಗಳಿಗೆ ಒಂದೇ ಕಾಲದಲ್ಲಿ ತಿಳಿಸಲು ಸ್ವತಶ್ಚಲನಕ ಯಂತ್ರವನ್ನು ರಚಿಸಿ, ಅದರ ಹಕ್ಕಿನ ಸನದನ್ನು ( patent ) ಪಡೆದು ತನ್ನ ಸ್ವಂತ ಟೆಲಿಗ್ರಾಫ್ ತಂತಿಯ ಮಾರ್ಗವನ್ನು ರಚಿಸಿದನು. ಮೇಲಿನವರ ಅಪ್ಪಣೆಯಿಲ್ಲದೆ ಕಾರ್ಯಾಲಯದಲ್ಲಿ ಹೀಗೆ ಪ್ರಯೋಗ ಮಾಡುವುದರಿಂದ ಅವನು ಮೇಲಧಿಕಾರಿಗಳ ಅವಕೃಪೆಗೆ ಪಾತ್ರನಾಗಬೇಕಾಯಿತು. ಕೊನೆಗೊಮ್ಮೆ ರಾತ್ರಿಯ ಸರದಿಯಲ್ಲಿ ಕೆಲಸ ಮಾಡುತ್ತಿದ್ದಾಗ ಅವನ ನೌಕರಿಗೆ ಸಮಾಪ್ತಿಯಾಯಿತು. ರಾತ್ರಿ ಕೆಲಸದವರು ತಾವು ಎಚ್ಚರವಾಗಿರುವುದನ್ನು ತೋರಿಸಲು ತಂತಿ ಕ್ಲಾರ್ಕನು ಗಂಟೆಗೊಮ್ಮೆ ಮೇಲಿನವರಿಗೆ ಸಿಗ್ನಲ್ ಕಳಿಸಬೇಕಾಗುತ್ತಿತ್ತು. ಎಡಿಸನ್ ತಾಸಿಗೊಮ್ಮೆ ತಂತಾನೇ ಸಿಗ್ನಲ್ ಕಳಿಸುವ ಸ್ವಯಂಚಾಲಿತ ಯಂತ್ರವನ್ನು ನಿರ್ಮಿಸಿ ತಾನು ಸಂಶೋಧನೆಗಳಲ್ಲಿ ಮಗ್ನನಾಗಿರುತ್ತಿದ್ದನು. ಇದು ಮೇಲಿನವರಿಗೆ ತಿಳಿದು ಅವನ ಕೆಲಸ ಹೋಯಿತು.

ಅನಂತರ ಎಡಿಸನ್ ತನ್ನ ಪುಣ್ಯೋದಯವನ್ನು ಹುಡುಕಲು ನ್ಯೂಯಾರ್ಕ್ ಪಟ್ಟಣಕ್ಕೆ ಹೋದನು. ದುಡ್ಡು, ತಿಂಡಿಗಳಿಲ್ಲದೆ ನೌಕರಿಗಾಗಿ ಅಲೆದಾಡುತ್ತಾ ಒಂದು ಭಾರಿ ಕಾರಖಾನೆಯನ್ನು ಮುಟ್ಟಿದನು. ಅಲ್ಲಿ ಮೂಲ ಯಂತ್ರವು ಕೆಟ್ಟು, ಅದಕ್ಕೆ ಸಂಬಂಧಪಟ್ಟ ನೂರಾರು ಬೇರೆ ಬೇರೆ ಕಂಪೆನಿಗಳ ಕಾರ್ಯವೆಲ್ಲಾ ನಿಂತು ಹೋಗಿ, ಸಾವಿರಾರು ಡಾಲರ್‌ಗಳು ಕ್ಷಣೇ ಕ್ಷಣೇ ನಾಶವಾಗುವ ಘಟನೆ ನಡೆದಿದ್ದರೂ ಅದನ್ನು ಸರಿಪಡಿಸಲು ಯಾರಿಗೂ ಸಾಧ್ಯವಾಗಿರಲಿಲ್ಲ. ಎಡಿಸನ್ ತನ್ನ ಪ್ರಾವೀಣ್ಯದಿಂದ ಯಂತ್ರಸಮುದಾಯವನ್ನೆಲ್ಲಾ ಹತೋಟಿಗೆ ತಂದು ಎಲ್ಲರನ್ನೂ ಮುಗ್ಧರನ್ನಾಗಿ ಮಾಡಿದನು. ಜಯಘೋಷದ ಮಧ್ಯದಲ್ಲಿ ಅವನನ್ನು ಆ ಸಿಬ್ಬಂದಿಗೆಲ್ಲಾ ಮೇಲ್ವಿಚಾರಕನಾಗಿ ನೇಮಿಸಲಾಯ್ತು.

ಎಡಿಸನ್ ವಿದ್ಯುತ್ ಇಂಜನಿಯರುಗಳ ವರ್ತಕ ಮಂಡಳಿಯನ್ನು ಸ್ಥಾಪಿಸಿ, ನವ ಆವಿ

ಷ್ಕಾರಗಳ ಮಹತ್ಕಾರ್ಯಗಳಲ್ಲಿ ಅನುರಕ್ತನಾಗಿ, ಟೆಲಿಗ್ರಾಂ ಒಂದು ನಿಮಿಷಕ್ಕೆ ೩,೦೦೦ ಶಬ್ದಗಳನ್ನು ಸ್ವಯಂ ಮುದ್ರಿಸುವ ವಿಧಾನವನ್ನೂ ಲೆಕ್ಕವಿಲ್ಲದಷ್ಟು ಸ್ವಯಂಚಾಲಕ ಯಂತ್ರಗಳನ್ನೂ ನಿರ್ಮಿಸಿದನು. ಅವನ ಆಶ್ಚರ್ಯಕರವಾದ ಒಂದು ನವಕಲ್ಪನೆಯನ್ನು ಎಷ್ಟು ಕ್ರಯಕ್ಕೆ ಮಾರಲಿಷ್ಟವಿದೆಯೆಂದು ಕಾರಖಾನೆಯ ಪ್ರಮುಖನು ಕೇಳಿದಾಗ, ೩,೦೦೦ ಡಾಲರ್‌ಗಳನ್ನು ಕೇಳಿದರೆ ಅದು ಬಹಳ ಹೆಚ್ಚೇನೊ ಎಂದು ಎಡಿಸನ್ ಅನುಮಾನಿಸುತ್ತಿದ್ದಾಗ, ಅವನಿಗೆ ೪೦,೦೦೦ ಡಾಲರ್ ಕೊಟ್ಟರು. ಈ ದ್ರವ್ಯದಿಂದ ಅವನು ಭಾರಿಪ್ರಯೋಗ ಶಾಲೆಯನ್ನೂ ವಿದ್ಯುತ್ ಕಾರಖಾನೆಗಳನ್ನೂ ಸ್ಥಾಪಿಸಿದನು. ಆಗ ಅವನಿಗೆ ೨೨ ವರ್ಷ ಮಾತ್ರ. ಅವನ ಪ್ರತಿಭೆಯ ವೈಭವವೂ ಕೀರ್ತಿಯೂ ಬೆಳೆಬೆಳೆಯುತ್ತಾ ದೇಶವಿದೇಶಗಳಿಗೆ ಹರಡಿದವು.

ಎಡಿಸನ್ನನ ಶೋಧಗಳ ಮತ್ತು ಆವಿಷ್ಕಾರಗಳ ಅದ್ಭುತ ಸಂಖ್ಯೆಯನ್ನೂ ಯಶಸ್ಸನ್ನೂ ನೋಡಿ ಅವನಿಗೆ ಕೈಕೊಂಡ ಕಾರ್ಯಗಳಲ್ಲಿ ತತ್ಕ್ಷಣ ಜಯ ದೊರೆಯುತ್ತಿತ್ತೆಂಬ ಕಲ್ಪನೆಯಾಗುವ ಸಂಭವವುಂಟು. ಇದಕ್ಕಿಂತ ಹೆಚ್ಚಿನ ಭ್ರಮೆ ಬೇರೊಂದಿಲ್ಲ. ಎಡೆಬಿಡದ ಉತ್ಸಾಹ, ನಿರಂತರದ ಕಾರ್ಯಮಗ್ನತೆ, ನಿಶ್ಚಲ ಪರಿಶ್ರಮ-ಇದೇ ಅವನ ಯಶದ ಗುಟ್ಟಾಗಿತ್ತು. ತನ್ನ ಕಲ್ಪನೆಗಳನ್ನು ಪರಿಪೂರ್ಣಿಸಲು ಅವುಗಳ ಸಂಬಂಧದ ಪ್ರತಿಯೊಂದು ಗ್ರಂಥವನ್ನೂ ಪರಿಶೀಲಿಸಿ, ಸಾವಿರಾರು ಶೋಧನೆಗಳನ್ನು ಮಾಡಿ, ವರ್ಷಾನುಗಟ್ಟಲೆ ಪ್ರಯಾಸಪಟ್ಟು, ಅವನು ಅಪರಿಮಿತ ಹಣವನ್ನು ವೆಚ್ಚಿಸುತ್ತಿದ್ದನು. ಸ್ಟೋರೇಜ್ ಬ್ಯಾಟರಿಯು ಅವನ ಐದು ವರ್ಷ ಕಾಲದ ಹತ್ತು ಸಾವಿರ ಪ್ರಯೋಗಗಳು ವ್ಯರ್ಥವಾದ ಮೇಲೆ ರೂಪುಗೊಂಡಿತು. "ಪ್ರತಿಭಾ ಶಕ್ತಿಯೆಂದರೆ ಶೇಕಡ ೨ ಸ್ಫೂರ್ತಿ ಶೇಕಡ ೯೮ ಬೆವರು" (Genius is 2% inspiration and 98% perspiration) ಎಂದು ಹೇಳಿದವನು ಎಡಿಸನ್ನನೇ. ತನ್ನ ಉದ್ದೇಶಕ್ಕೆ ಬೇಕಾದ ಪದಾರ್ಥಗಳನ್ನು ಪಡೆಯಲು ಆತ ಎಂಥ ಯತ್ನಕ್ಕೂ ಸಿದ್ಧನಾಗಿರುತ್ತಿದ್ದ. ವಿದ್ಯುದ್ದೀಪದ ಬಲ್ಬಿಗೆ ತಂತುವನ್ನು ಹುಡುಕಲು ಅಮಸಾನ್ ನದಿಯ ಮತ್ತು ಜಪಾನ್ ದೇಶದ ಕಾಡುಗಳಿಗೆ ಆತ ಜನರನ್ನು ಕಳುಹಿಸಿದನು. ಆ ಕಾರ್ಯಕ್ಕಾಗಿ ಎಡಿಸನ್ ಪ್ರಾಣಾಪಾಯದಿಂದ ಉಳಿಸಿದ್ದ ಹುಡುಗನ ತಂದೆಯು ತನ್ನ ಕೆಂಪು ಗಡ್ಡದ ಕೂದಲುಗಳನ್ನು ಕಿತ್ತೆಳೆಯಲು ಎಡಿಸನ್‌ಗೆ ಅವಕಾಶ ಕೊಟ್ಟನು. ಒಂದು ವರ್ಷ ಎಡಿಸನ್ ಕೂಲಿಯವನಿಗಿಂತ ಹೆಚ್ಚು ಪ್ರಯಾಸಪಟ್ಟನು. ಕೆಲವು ವೇಳೆ ಅವನು ಪುಸ್ತಕಗಳನ್ನು ತಲೆದಿಂಬಾಗಿಟ್ಟು, ಮೇಜಿನ ಮೇಲೆ ಮಲಗುತ್ತಿದ್ದನು. ಒಂದು ಅಗಾಧ ಸಾಹಸ ಕಾರ್ಯವನ್ನು ಕೈಗೊಂಡಿದ್ದಾಗ, ಅವನು ಭೂಗತ ಕೊಳವೆಯಲ್ಲಿ ಇಟ್ಟಿಗೆಗಳ ಕುಪ್ಪೆಯ ಮೇಲೆ ನಿದ್ರಿಸಿದನು "ನನ್ನ ಕೆಲಸದ ಕೊಠಡಿಯಲ್ಲಿ ನಾನು ಎಂದೂ ಗಡಿಯಾರವನ್ನಿಡದೇ ಇದ್ದುದೇ ನನ್ನ ಜಯಕ್ಕೆ ಕಾರಣ" ವೆಂದು ಅವನು ಹೇಳುತ್ತಿದ್ದನು. ಎಡಿಸನ್ನನ ವಿಕ್ಷಿಪ್ತ ಮನೋವೃತ್ತಿ ಮನೆಮಾತಾಗಿ ಹೋಗಿದೆ. ಒಮ್ಮೆ ಖಜಾನೆಗೆ ಹಣ ಕೊಡಲು ಹೋಗಿ ಕ್ಯೂನಲ್ಲಿ ಕಾಯುತ್ತಿದ್ದಾಗ ಏನೋ ಯೋಚನೆಯಲ್ಲಿ ಮಗ್ನನಾಗಿದ್ದ ಅವನಿಗೆ ತನ್ನ ಸರದಿ ಬಂದಾಗ ತನ್ನ ಹೆಸರೇ ನೆನಪಿಗೆ ಬರಲಿಲ್ಲವಂತೆ. ಊಟ ಉಪಚಾರಕ್ಕೆ ಹೊತ್ತು ಗೊತ್ತಿಲ್ಲ. ತನ್ನ ಕೈಕೆಳಗಿನವರನ್ನು ನಡುರಾತ್ರಿಯಲ್ಲೂ ಕರೆಸಿಕೊಳ್ಳುತ್ತಿದ್ದುದುಂಟು. ಒಮ್ಮೊಮ್ಮೆ ನಟ್ಟಿರುಳಿನ ನಂತರ ಮನೆಗೆ ಬಂದು ಮಲ್ಲಯುದ್ಧ, ಹಾಡು, ಹಾಸ್ಯ ವಿನೋದಗಳಲ್ಲಿ ತೊಡಗುತ್ತಿದ್ದ.

ಸಮಾಜದ ಸಾಂಪ್ರದಾಯಿಕ ನಿಯಮಗಳು ಅವನಿಗೆ ಲಕ್ಷ್ಯವಿಲ್ಲ. ಉಡುಪಿನಲ್ಲಿ ಅಸಡ್ಡೆ. ಸಾರ್ವಜನಿಕ ಊಟಕೂಟಗಳಿಗೆ ಹೋಗುತ್ತಿರಲಿಲ್ಲ. ಹೋದರೆ ತನಗೆ ಆ ಹೊತ್ತಿನಲ್ಲಿ ಏನು ತಿನ್ನಬೇಕೆಂದೆನಿಸುತ್ತಿತ್ತೋ ಅದನ್ನು ಜೊತೆಯಲ್ಲಿ ತೆಗೆದುಕೊಂಡು ಹೋಗುತಿದ್ದನು. ಸಭೆಗಳಲ್ಲಿ

ತಾನು ಭಾಷಣ ಮಾಡಬೇಕಾಗಿದ್ದಾಗ, ತನ್ನ ಬದಲು ಮತ್ತಾರಾದರೂ ಮಾತನಾಡುವಂತೆ ಮಾಡುತ್ತಿದ್ದನು. ತನ್ನ ಪ್ರಥಮ ರೇಡಿಯೊ ಭಾಷಣವನ್ನು ಅವನು ೨೨ ಶಬ್ದಗಳಲ್ಲಿ ಮುಗಿಸಿದನು.

ಎಡಿಸನ್ನನ ಸಾವಿರಾರು ನವಕಲ್ಪನೆಗಳಿಂದ ಐಶ್ವರ್ಯವು ಪ್ರವಾಹದಂತೆ ಹರಿಯುತ್ತಾ ಬಂದು ಲಕ್ಷಾಂತರ ಜನರಿಗೆ ಜೀವನೋಪಾಯವನ್ನು ಕೊಟ್ಟಿತು ಅವನ ಸಾಮರ್ಥ್ಯವೂ ನಿಪುಣತೆಯೂ ಎಂಥವೆಂದರೆ ಅವನು ಒಂದೇ ಕಾಲದಲ್ಲಿ ನಾನಾ ಮಟ್ಟಗಳಲ್ಲಿದ್ದ ೫೦ ಹೊಸ ಹೊಸ ನಿರ್ಮಾಣಗಳನ್ನು ವಹಿಸಿಕೊಳ್ಳುತ್ತಿದ್ದನು. ಫೋನೊಗ್ರಾಫ್, ಮಾತನಾಡುವ ಇತರ ಯಂತ್ರಗಳು, ವಿದ್ಯುದ್ದೀಪ, ವಿದ್ಯುತ್ತಿನ ರೇಲ್ವೆಗಳು, ಚಲನಚಿತ್ರ, ಡೈನಮೊ, ಮೋಟಾರ್, ಮೊದಲಾದ ಅಸಂಖ್ಯ ಯಂತ್ರಗಳನ್ನು ನಿರ್ಮಿಸಿ, ೧,೧೦೦ ನವ ಕಲ್ಪನೆಗಳಿಗೆ ವಿಶಿಷ್ಟಾಧಿಕಾರ ಪತ್ರಗಳನ್ನು ಪಡೆದನು. ಪ್ರಪಂಚದ ಮತ್ತಾವ ವಿಜ್ಞಾನಿಗೂ ಅಷ್ಟು ಹಕ್ಕಿನ ಸನದುಗಳಿಲ್ಲ.

ಜಗತ್ತಿನ ಅತಿ ಹೆಚ್ಚು ಜನೋಪಯೋಗಿ ಯಂತ್ರಗಳನ್ನು ನಿರ್ಮಿಸಿ ಶ್ರೀಮಂತನಾದ ಎಡಿಸನ್ನನು ಕ್ಷಮಾಶೀಲನೂ ಆಗಿದ್ದನು. ಅವನ ೭೮ ಆವಿಷ್ಕಾರಗಳ ಹಕ್ಕುಗಳ ಸನದಿನ ವಿಷಯದಲ್ಲಿ ಅವನ ವಕೀಲನೇ ಅವನಿಗೆ ಮೋಸ ಮಾಡಿ ಹಣ ಎತ್ತಿಹಾಕಿದರೂ ಎಡಿಸನ್ ಅವನನ್ನು ಕೋರ್ಟಿಗೆಳೆಯಲಿಲ್ಲವಷ್ಟೇ ಅಲ್ಲ, ಅವನ ಹೆಸರು ಕೂಡ ಬಹಿರಂಗಪಡಿಸಲೊಪ್ಪಲಿಲ್ಲ.

ಅನೇಕ ಪ್ರತಿಭಾಶಾಲಿಗಳಂತೆ ಎಡಿಸನ್ನನ ಸಾಂಸಾರಿಕ ಜೀವನ ದುಃಖಮಯವಾಗಿರಲಿಲ್ಲ. ಅವನ ತಂದೆ ತಾಯಿಗಳ ವಾತ್ಸಲ್ಯ ಅವನಿಗೆ ಪೂರ್ಣವಾಗಿ ದೊರೆತಿತ್ತು. ಅವನ ಅಂತಃಶಕ್ತಿಯನ್ನರಿತು ಅವನಿಗೆ ಮಾರ್ಗದರ್ಶಕಳೂ ವಿದ್ಯಾಗುರುವೂ ಆದ ತಾಯಿಯ ಬಗ್ಗೆ "ನನ್ನ ಜೀವನ ಪ್ರಭಾವದ ಕರ್ತಳು ನನ್ನ ತಾಯಿ" ಎಂದಾತ ಪದೇ ಪದೇ ಹೇಳುತ್ತಿದ್ದ.

ಎಡಿಸನ್ ಎರಡು ಮದುವೆಗಳಲ್ಲೂ ಸುದೈವಿಯೇ ಆಗಿದ್ದ. ಅವನ ಮೊದಲ ಹೆಂಡತಿ ಮೇರಿ ಸ್ಟಿಲ್‌ವೆಲ್ ೨೫ ರಲ್ಲಿ ಅವನ ಕೈಹಿಡಿದು ಅವನ ಜೀವನದ ಅವ್ಯವಸ್ಥಿತ ಕ್ರಮಗಳನ್ನೆಲ್ಲ ಧೈರ್ಯದಿಂದ ಸಹಿಸಿಕೊಂಡು ೧೧ ವರ್ಷಗಳಲ್ಲಿ ಮೂವರು (ಎರಡು ಗಂಡು, ಒಂದು ಹೆಣ್ಣು) ಮಕ್ಕಳನ್ನು ಬಿಟ್ಟು ತೀರಿಕೊಂಡಳು. ಎರಡನೆಯವಳಾದ ಎಡಿಸನ್ ಮೈನಾ ಮಿಲ್ಲರ್ ವಿಚಕ್ಷಣಳಾದ ಗೃಹಿಣಿ, ಕಲಾಕುಶಲೆ. ಅನೇಕ ಕಂಪನಿಗಳಿಗೆ ಡೈರೆಕ್ಟರಳಾಗಿ ಗಂಡನ ವ್ಯವಹಾರಕುಶಲತೆಯ ಅಭಾವವನ್ನಾಕೆ ತುಂಬಿಕೊಟ್ಟಳು. ಗಂಡನ ಸಂಗೀತ ಕೃತಿಗಳನ್ನು ವಾದ್ಯಗಳಲ್ಲಿ ನುಡಿಸಿ ಅವನನ್ನು ಸಂತೋಷಪಡಿಸುತ್ತಿದ್ದಳು. ೪೫ ವರ್ಷ ಅವಳೊಡನೆ ಬಾಳುವೆ ಮಾಡಿದ ಕಿವುಡ ಎಡಿಸನ್ನನಿಗೆ ಅವಳ ಮಾತುಗಳಷ್ಟೇ ಅರ್ಥವಾಗುವಷ್ಟು ಅವರೊಳಗೆ ಅನ್ಯೋನ್ಯ ಬೆಳೆದಿತ್ತು.

ಪ್ರಾರಂಭದಲ್ಲಿ ಎಡಿಸನ್ನನ ಶೋಧಪ್ರಯತ್ನಗಳನ್ನು ಕಂಡು ನಕ್ಕವರು ಅವನಿಗೆ ನಮೋ ಎನ್ನುವಂತಾಯಿತು. ನಾನಾದೇಶಗಳಿಂದ, ಪ್ರಸಿದ್ಧ ವಿಶ್ವವಿದ್ಯಾಲಯಗಳಿಂದ ಅವನಿಗೆ ಬಹುಮಾನಗಳೂ ಬಿರುದುಗಳೂ ಬಂದವು. ಪತ್ನೀಸಮೇತನಾಗಿ ಆತ ಸಾವಿರಾರು ಮೈಲು ವಿಜಯ ಸಂಚಾರ ಮಾಡಿದನು ಅವನ ವಿದ್ಯುದ್ದೀಪದ ಸುವರ್ಣ ಮಹೋತ್ಸವದಲ್ಲಿ ಎರಡು ದೀಪಗಳನ್ನುರಿಸಲಾಯಿತು. ಒಂದು ಸ್ವತಃ ಎಡಿಸನ್ನನ ಹಸ್ತದಿಂದ, ಇನ್ನೊಂದು ಅಧ್ಯಕ್ಷ ಹೂವರರ ಹಸ್ತದಿಂದ.

೮೪ ವರ್ಷಗಳ ತುಂಬು ಜೀವನ ನಡೆಸಿ ೧೯೩೧ ರಲ್ಲಿ ಎಡಿಸನ್ ಕಾಲವಾದ. ಅವನ ಗೆಳೆಯ ಹೆನ್ರಿ ಫೋರ್ಡ್ ಅಗಾಧ ಧನವ್ಯಯದಿಂದ ಗ್ರೀನ್‌ಫೀಲ್ಡ್ ಎಂಬಲ್ಲಿ ಸ್ಥಾಪಿಸಿದ ಅವನ ಪ್ರಯೋಗಶಾಲೆಗಳ ಮ್ಯೂಜಿಯಂ ಅಮೇರಿಕದ ಹೆಮ್ಮೆಯಾಗಿ, ಎಡಿಸನ್ನನ ಅಮರ ಸ್ಮಾರಕವಾಗಿ ಅವನ ಕೀರ್ತಿಯನ್ನು ಸಾರುತ್ತಿದೆ. *

# ನಗೆಮಲ್ಲಿಗೆ

ಆಕೆ- ಇನ್ನೂ ಮಗು ಮಲಗಲಿಲ್ಲ ವೇನ್ರಿ...? ಇಲ್ಲಿ ಕೊಡಿ ಒಂದು ಹಾಡು ಹೇಳಿ ಮಲಗಿಸ್ತೇನೆ.

ಆತ- ನಾನಾಗಲೇ ಆ ಕೆಲಸ ಮಾಡಿದೆ ಕಣೇ. "ನೋಡು ಮಲಗದಿದ್ರೆ ಅವಳ ಕೈಲಿ ಹಾಡು ಹೇಳಿಸಿಬಿಡ್ತೇನೆ" ಅಂದ್ರೂ ಮಲಗಲಿಲ್ಲ ನೋಡು!

*

"ನಿನ್ನೆ ನಮ್ಮ ಕ್ಲಬ್ಬಿಗೆ ಒಬ್ಬ ಹೊಸಬ ಬಂದಿದ್ದ ನೋಡು. ಅವ ನಿನಗೆ ಸಂಬಂಧಾಂತ ಹೇಳಿಕೊಂಡ ನಿಜವೆ?"

"ಇಲ್ವೋ, ಸಂಬಂಧವೂ ಇಲ್ಲ ಗಿಂಬಂಧವೂ ಇಲ್ಲ. ಅವನೊಬ್ಬ ಮೂರ್ಖ ಅಷ್ಟೆ!"

"ಬಹುಶಃ ಅದೇ ಕಾರಣದ ಮೇಲಿರಬೇಕು.... ನಿನಗೆ ಸಂಬಂಧ ಅಂತ ಹೇಳ್ಕೊಂಡಿದ್ದು..."

—ಹಲಾಡಿ ಕೇಶವ ಪ್ರಭ

*

ಪ್ರಯಾಣಿಕ- ಸ್ವಾಮಿ, ಕಂಡಕ್ಟರರೆ, ಈ ಬಸ್ಸು ಎಲ್ಲಿ ನಿಲ್ಲುತ್ತೋ?

ಕಂಡಕ್ಟರ- ಪೆಟ್ರೋಲು ಕಡಿಮೆ ಇದೆ. ಎಲ್ಲಿ ನಿಲ್ಲುತ್ತೇಂತ ಹೇಳೋದೆ ಕಷ್ಟವಯ್ಯ.

*

ಸಣ್ಣ ಪ್ರಾಯದ ಯುವಕನೊಬ್ಬ ಶರಾಬು ಬಾಟ್ಲಿ ಹಿಡಿದುಕೊಂಡು ದಾರಿ ಸಾಗುತ್ತಿದ್ದ. ಅವನನ್ನು ಹಿಡಿದ ಪೋಲೀಸರು ಚೆನ್ನಾಗಿ ಎರಡು ಬಿಗಿದು ಕೇಳಿದರು: "ಯಾರಯ್ಯಾ ನೀನು?"

ಆತ ಬಿಕ್ಕುತ್ತಾ... ಬಿಕ್ಕುತ್ತಾ ಉತ್ತರಿಸಿದ: "ನಾ..ನು..ಸಿ. ಆಯ್. ಡಿ. ಖಾತೆಗೆ ಹೊಸಬ" ಎಂದು.

—ಎ. ಎಸ್. ಪಾಂಡೇಶ್ವರ್

*

ರಹಸ್ಯ ಪ್ರಣಯಿಗಳೀರ್ವರ ಸರಸ ಸಲ್ಲಾಪ ಒಂದು ಕೋಣೆಯಲ್ಲಿ ನಡೆದಿದ್ದಂತೆ ಕೊಠಡಿ ಬಾಗಿಲು ಬಡಿದ ಸದ್ದು ಕೇಳಿಸಿತು. ಆಗ ಹೆಣ್ಣು ಹೇಳಿದಳು: "ಅದೋ ನನ್ನ ಗಂಡ ಬಂದಿದ್ದಾನೆ. ಕೂಡಲೆ ಕಿಡಿಕಿಯಿಂದ ಹಾರು. ಬೇಗ."

ಪುರುಷ ಹೇಳಿದ- "ನಾವು ಹದಿಮೂರು ಅಂತಸ್ತುಗಳ ಮೇಲಿದ್ದೇವೆ."

ಅವಳು ಹೇಳಿದಳು- "ಇದು ಯೋಜನೆ ಹಾಕುವ ಸಮಯವಲ್ಲ. ಕೂಡಲೆ ಕಿಡಿಕಿಯಿಂದ ಹಾರು."

*

ಓರ್ವ ಶಾಲಾಬಾಲಕ ತನ್ನ ತಂದೆಯ ಬಳಿ ಬಂದು ಕೇಳಿದ: "ಅಪ್ಪಾ ನನ್ನ ಅಂಕ ಸೂಚಿ (ಮಾರ್ಕ್ಸ್ ಕಾರ್ಡ್)ಗೆ, ನೀನು ಸಹಿ ಹಾಕದೆ ಹೆಬ್ಬೆಟ್ಟು ಗುರುತು ಹಾಕಿದ್ದೇಕೆ?"

ತಂದೆ ನಿಧಾನದಿಂದ ಉತ್ತರಿಸಿದ: "ಮಗೂ, ಉಪಾಧ್ಯಾಯರು ಇಷ್ಟು ಅಂಕಗಳನ್ನುಳ್ಳ ವಿದ್ಯಾರ್ಥಿಗೆ ಓದಲು ಬರೆಯಲು ಬರುವ ತಂದೆಯಿದ್ದಾನೆ ಎಂದು ತಿಳಿಯದಿರಲಿ ಎಂದು."

ಸಂಗ್ರಹ: ರವೀಂದ್ರನಾಥ ಎಸ್. ಬಿ.

*

ತಾಯಿ- ಯಾಕೊ ಮಧೂ, ಆ ನಾಯಿಯನ್ನು ನೋಡಿ ಹಲ್ಲು ಕಿಸಿಯುತ್ತೀ?

ಮಧು- ನನ್ನನ್ಯಾಕೆ ಗದರಿಸುತ್ತೀಯಮ್ಮಾ? ಮೊದಲಿಗೆ ಶುರು ಮಾಡಿದ್ದು ಅದೇ.


ಹಳದಿ
LUX
Yellow


ಹಸುರು
LUX
Green


ನೀಲ
LUX
Blue


ನಸುಗೆಂಪು
LUX
Pink


ಕಾಮನಬಿಲ್ಲಿನ ನಾಲ್ಕು
ಬಣ್ಣಗಳಲ್ಲಿ ನನ್ನ ಲಕ್ಸ್
-ಹೌದು, ಬಿಳಿಬಣ್ಣದಲ್ಲಿ
ಕೂಡ ಇದೆ’
ಎಂದು ಅನ್ನುತ್ತಾಳೆ
ಎಂ. ಎನ್. ರಾಜಂ
LTS. 82-X29 KN
ಹಿಂದುಸ್ಥಾನ್ ಲೀವರ್ ಅವರ ತಯಾರಿಕೆ



ಒಂದು ತಮಿಳು ಕಥೆ

# ನೇಣು!

ಮೂಲ :
ಶ್ಯಾಮ

ಅನುವಾದ :
ರಾಘವ ಜವಳಿ

ನನ್ನ ಬ್ಯಾರಿಸ್ಟರ್ ಸ್ನೇಹಿತನ ಮುಖ ನೋಡು ತ್ತಲೇ ಏನೋ ಕೆಡುಕಾಗಿದೆ, ಎನಿಸಿತು. ಆತ ಒಂದೂ ಮಾತಾಡಲಿಲ್ಲ. ಕೋರ್ಟಿನ ಮೇಲಂಗಿ ಯನ್ನು ಕಳೆದು ಆರಾಮ ಕುರ್ಚಿಯಲ್ಲಿ ಮೈ ಚೆಲ್ಲಿದ. ನೀರವವಾಗಿ ತಾರಸಿಯನ್ನು ದಿಟ್ಟಿಸ ಲಾರಂಭಿದ.

ಕೊನೆಯಲ್ಲಿ ಅವನ ಸ್ವರ ಕೇಳಿಸಿತು—

"ನಾನು ಸೋತೆನಪ್ಪಾ ಸೋತೆ. ಸಂಪೂರ್ಣ ಸೋತೆ. ಅವರು ಅವನಿಗೆ ಮರಣದಂಡನೆ ವಿಧಿ ಸಿದ್ದಾರೆ." ಇದೇನು ನನಗೆ ನಾನು ಊಹಿಸದ ಸುದ್ದಿಯಾಗಿರಲಿಲ್ಲ. ಹೀಗಾಗಬಹುದು ಎಂತ ನನಗೆಂದೋ ಅನಿಸಿತ್ತು. ಆದರೂ ಈಗ ನನಗೆ 'ಷಾಕ್' ಹೊಡೆದಂತಾಯಿತು.

ರಮೇಶ ತನಗೆ ತಾನೇ ಹೇಳಿಕೊಂಡಂತೆ, ಗಟ್ಟಿಯಾಗಿ ಹೇಳುತ್ತಿದ್ದ. "ಅದು ಹಾಗೆ ಆಗಲೇಬೇಕಿತ್ತು. ಅವನು ಲಕ್ಷ್ಯವನ್ನೆ ಕೊಡ ಲಿಲ್ಲ. ನನಗೆ ಸ್ವಲ್ಪವೂ ಸಹಾಯ ಮಾಡಲಿಲ್ಲ."

"ಇನ್ನೊಂದು ಅರ್ಜಿ ಕೊಟ್ಟಿತ್ತಲ್ಲ—ತಾತ್ಕಾ ಲಿಕ ಬುದ್ಧಿ ಭ್ರಮೆ ಅಂತ. ಅದರ ಬಗ್ಗೆ ನನಗೆ ತುಂಬ ಆಶೆಯಿತ್ತು."

"ನಿಜವಾಗಿಯೂ ನಾನು ಅದನ್ನು ಗಮನಕ್ಕೆ ತಂದುಕೊಳ್ಳಲಿಲ್ಲ. ಮತ್ತು ಅದು ಅವನ ಸಾತ್ವಿಕ ಜೀವನ, ಜನಪ್ರಿಯ ಶಾಲಾ-ಮಾಸ್ತ ರಿಕೆ— ಇವು ಯಾವುದಕ್ಕೂ ಹೊಂದಿಬರಲಿಲ್ಲ.

ಅವನ ಹೆಂಡತಿಯನ್ನೂ ಸುಮಾರಾಗಿ ಕೊಂದೇ ಬಿಟ್ಟಿದ್ದನಲ್ಲ—ಅವಳೂ ಒಪ್ಪಿದಳು...... ಮಕ್ಕಳು, ಹೆಂಡತಿ ಎಂದರೆ ತುಂಬಾ ಪ್ರೀತಿ ಯಿಟ್ಟುಕೊಂಡಿದ್ದ ಅಂತ...."

"ಮತ್ತೆ ಒಂದೇ ರಾತ್ರಿಯಲ್ಲಿ ಅವನು ಅಂಥಾ ಕಟುಕನಾದದ್ದಾದರೂ ಹೇಗೆ? ಎರಡು ಮಕ್ಕಳನ್ನು ಕೊಂದು, ಉಳಿದುವನ್ನು ಕೊಲ್ಲಲು ಪ್ರಯತ್ನಿಸಿದ?"

"ಹೌದು, ಹೌದು. ನಾನು ಅದೇ ಪೀಠಿಕೆ ಹಾಕಿ ವಾದ ಮಂಡಿಸಿದ್ದೆ. ಆದರೆ ನ್ಯಾಯಾಧೀಶರು ತಮ್ಮ ತೀರ್ಮಾನ ಹೇಳಿದಾಗ ನನ್ನ ಪ್ರಯತ್ನ ವಿಫಲವಾಯಿತೆಂದು ಅರ್ಥವಾಯಿತು. ಮೊದಲೇ ಯೋಜಿಸಿ ನಡೆಸಿದ ಕೊಲೆಯೆಂಬ ಬಗೆಗೆ ಅವರು ಗಮನ ಸೆಳೆದ ಕೂಡಲೇ, ತಾತ್ಕಾಲಿಕ ಹುಚ್ಚಿನಲ್ಲಿ ಮಾಡಿದ ಅಪರಾಧ ವೆಂಬ ನನ್ನ ವಾದ ನಿರಾಕರಿಸಲ್ಪಟ್ಟಿತೆಂದು ನನಗೆ ಮನವರಿಕೆಯಾಯಿತು."

ರಮೇಶ ನಿಲ್ಲಿಸಿ ನಿಲ್ಲಿಸಿ ಹೇಳುತ್ತಿದ್ದ.

"ಹಾಗಾದರೆ ಅವನಿಗೆ ಸ್ವಲ್ಪವೂ ಅವಕಾಶವೇ ಇರಲಿಲ್ಲವೇ ಬದುಕಲು?" ನಾನು ಕೇಳಿದೆ.

"ನಿಜವಾಗಿ ಏನು ನಡೆಯಿತೆಂದು ಅವನು ಹೇಳಿದ್ದರೆ, ಆ ಮಾತು ಬೇರೆ. ನನ್ನ ಎಲ್ಲ ಪ್ರಶ್ನೆಗಳಿಗೂ ಸಿದ್ಧವಾಗಿದ್ದ ಅವನ ಉತ್ತರ ಒಂದೇ —'ಇಷ್ಟು ಮಾಡಿದ್ದು ದೊಡ್ಡ ಉಪಕಾರ, ವಕೀಲರೇ. ಆದರೆ ನನ್ನದೆಲ್ಲ ಮುಗಿಯಿತಲ್ಲ. ಇಂಥವನನ್ನು ಸೃಷ್ಟಿಸಿದವನಿಗೇ ಒಪ್ಪಿಸಿಬಿಡಿ.' —ಹೀಗೆ ಹೇಳುವ ಕಕ್ಷಿಗಾರನನ್ನು ಕಟ್ಟಿಕೊಂಡು ನಾನೇನು ಮಾಡಲಿ?"

"ಅವನು ಹಾಗೆ ಮಾಡಿದ್ದಾದರೂ ಯಾಕೆ? ವಿರಸ ದಾಂಪತ್ಯವೇ ಅಥವಾ ತುಂಬಾ ಸಾಲ ವಾಗಿತ್ತೇ?"

"ಪ್ರಪಂಚ ನೋಡುವುದು ಇದೇ ದೃಷ್ಟಿ ಯಿಂದ. ಆದರೆ ನಾನು ಈ 'ಕೇಸನ್ನು' ಕಾಸಿನ ಆಸ್ಥೆಯೂ ಇಲ್ಲದೇ ವಹಿಸಿಕೊಳ್ಳಲು ಕಾರಣ ವೆಂದರೆ, ಆ ಬಡ ಹೆಂಗಸು, ಅವನ ಹೆಂಡತಿ. ನಾನು ಅವಳನ್ನು ನೋಡಿದ್ದೇನೆ. ಐದು ಮಕ್ಕಳ ತಾಯಿ. ಅವಳ ಶೀಲವನ್ನು ಶಂಕಿಸಿದವನು ನರಕಕ್ಕೆ ಹೋಗಬೇಕಾದೀತು. ಇನ್ನು ಸಾಲ? ಅವರು ತೀರ ಬಡವರಾಗಿದ್ದರೂ ಹಾಸಿಗೆ ಇದ್ದಷ್ಟೇ ಕಾಲು ಚಾಚುತ್ತಿದ್ದರು."

"ಮತ್ತೆ ಆಗಿದ್ದಾದರೂ ಏನು? ಇನ್ನು ಯಾವುದಾದರೂ ಹೆಣ್ಣು ಅವರ ಜೀವನದಲ್ಲಿ ಸೇರಿಕೊಂಡಿತೇ? ಏನಾದರೂ ಜಗಳ....?" ನನಗೆ ಕಾರಣ ಹುಡುಕುವ ಆಸೆ; ಮಾತು ಮುಂದುವರಿಸುತ್ತಿದ್ದೆ.

"ಅದೆಲ್ಲ ನನಗೆ ಗೊತ್ತಿಲ್ಲ. ಆದರೆ ಶುಕ್ರವಾರ ಸಾಯಂಕಾಲ ಗಂಡ, ಹೆಂಡತಿ ಮತ್ತು ಮಕ್ಕಳು ಸೇರಿ ದೇವಸ್ಥಾನಕ್ಕೆ ಹೋಗಿದರು. ಒಂದೆರಡು ಮಿತ್ರರನ್ನು ಭೆಟ್ಟಿಯಾಗಿದ್ದರು. ಆದರೆ ಯಾರೂ ಗಂಡ-ಹೆಂಡಿರಲ್ಲಿ ಒಂದಿಷ್ಟೂ ಮನಸ್ತಾಪ ಕಾಣಲಿಲ್ಲ. ಶನಿವಾರ ಬೆಳಕು ಹರಿಯುವಷ್ಟರಲ್ಲಿ ಈ ಕೆಲಸ ನಡೆದುಹೋಗಿದೆ."

"ಮತ್ತೆ ಶುಕ್ರವಾರ ರಾತ್ರಿ, ಎಂಟು ಗಂಟೆ ಯಿಂದ ಎರಡು ಗಂಟೆಯೊಳಗೆ, ಮಧ್ಯರಾತ್ರಿ ಯಲ್ಲಿ ಏನಾಯಿತು?"

ನನ್ನ ಸ್ನೇಹಿತ ಜುಗುಪ್ಸೆಗೊಂಡಿದ್ದ. ಅದೇ ದನಿಯಲ್ಲಿ ಹೇಳಿದ— "ನನಗೂ ಸೋಜಿಗ. ಆದರೆ ನಾವು, ಸಾಮಾನ್ಯ ಮನುಷ್ಯರು ಕನಸಿನಲ್ಲೂ ಕಾಣಲಾರದ ಘಟನೆಗಳು ನಡೆಯುಬಲ್ಲ ವೆಂಬುದು ನಿಶ್ಚಯ."

ಇದರ ನಂತರ ಸುಮಾರು ನಾಲ್ಕು ತಿಂಗಳು ನಾನು ಸ್ವಂತ ಕೆಲಸಗಳಿಂದಾಗಿ ಮನೆಯಿಂದ ದೂರ ಉಳಿದುಬಿಟ್ಟಿದ್ದೆ. ಊರಿಗೆ ಬಂದಾಗ ನನ್ನ ಸ್ನೇಹಿತನ ಕೋಣೆಯಲ್ಲಿ ಮಾತನಾಡುತ್ತಿರುವಾಗ ಥಕ್ಕನೇ ಆ ಶಾಲಾಮಾಸ್ತರನ 'ಕೇಸು' ನೆನಪಿಗೆ ಬಂತು. ಕೇಳಿದೆ.

"ನೀನು ಇವತ್ತೇ ಬಂದು ಅದನ್ನೇ ಕೇಳುತ್ತಿರುವುದು ನನಗೆ ಆಶ್ಚರ್ಯ."

"ಯಾಕೆ?"

"ಯಾಕೆಂದರೆ ಮರಣದಂಡನೆಯನ್ನು ನಿನ್ನೆ

ತಾನೆ ಪೂರೈಸಲಾಯಿತು." ಸಹಜ ಧ್ವನಿಯಲ್ಲಿ ಅವನು ಮಾತನಾಡಬೇಕೆಂದಿದ್ದರೂ ಅವನಲ್ಲಡಗಿದ್ದ ಆವೇಗ ಸ್ಪಷ್ಟವಾಗಿ ಕಂಡಿತು. ನಾನು ಸುಮ್ಮನೇ ನಿರುಕಿಸುತ್ತಿದ್ದೆ. "ನಾನು ನನ್ನ ಕೈಲಾದಷ್ಟನ್ನು ಮಾಡಿದೆ. ಹೈಕೋರ್ಟು ಕೆಳಗಿನ ಕೋರ್ಟಿನ ತೀರ್ಮಾನವನ್ನು ಕಾಯಂ ಮಾಡಿದ್ದು ನೀನು ಹೋಗುವುದಕ್ಕೆ ಮುಂಚೆ ತಾನೆ ?"

ನಾನು ತಲೆಯಲ್ಲಾಡಿಸಿದೆ.

"ಹಾಗಾದರೆ ಅದೆಲ್ಲ ನಡೆದದ್ದು ನೀನು ಹೋದ ಮೇಲೆ. ಹೈಕೋರ್ಟಿನ ತೀರ್ಪು ಬಂದ ಮೇಲೆ ಅವನ ಹೆಂಡತಿ ಅವನನ್ನು ಜೇಲಿನಲ್ಲಿ ಭೆಟ್ಟಿಯಾದಳು. ರಾಷ್ಟ್ರಾಧ್ಯಕ್ಷರಿಗೆ ಕ್ಷಮಾಪಣೆ ಅರ್ಜಿ ಸಲ್ಲಿಸಲು ಸಹಿ ಹಾಕಬೇಕೆಂದು ಅವನ ಕಾಲಿಗೆ ಬಿದ್ದು ಬೇಡಿಕೊಂಡಳು. ಕೇಳಲಿಲ್ಲ ಅವನು. ಕಣ್ಣೀರು ಸುರಿಸುತ್ತ ನನ್ನಲ್ಲಿ ಬಂದು ಅವನನ್ನು ಹೇಗಾದರೂ ಒಪ್ಪಿಸುವಂತೆ ಕೇಳಿಕೊಂಡಳು. ನಾನು ಪ್ರಯತ್ನ ಮಾಡಿದೆ. ಆದರೆ ಈಗನಿಸುತ್ತೆ, ನಾನು ಒಪ್ಪದಿದ್ದರೇ ಚೆನ್ನಾಗಿತ್ತು ಅಂತ."

*

ರಮೇಶನ ಮನಸ್ಸು ಪೂರಾ ಕದಡಿಹೋಗಿದ್ದರೂ ಆತ ಮಾತು ಮುಂದುವರಿಸಿದ. "ನಿನಗೆ ಗೊತ್ತಿರಬೇಕು. ನನ್ನ ವಾದವನ್ನು ನಾನು ಸಿದ್ಧಗೊಳಿಸುವಾಗ ಅವನೊಡನೆ ಕೆಲವೇ ನಿಮಿಷ ಮಾತನಾಡಲು ಸಾಧ್ಯವಾಗುತ್ತಿತ್ತು. ಆದರೆ ನಿಜವಾಗಿಯೂ ನಾನು ಅವನನ್ನು ಸಂಪೂರ್ಣ ಅರ್ಥಮಾಡಿಕೊಳ್ಳಲಾರಂಭಿಸಿದ್ದು ಆ ಕೊನೆಯ ಭೆಟ್ಟಿಯಲ್ಲಿ. ಆತ ನಿಜವಾಗಿ ಅಪೂರ್ವ ವ್ಯಕ್ತಿ. ಅವನ ಸಂಸ್ಕೃತಿ ಮತ್ತು ಅವನ ಒಪ್ಪವಿಟ್ಟನಡತೆ ನೋಡಿ ನಾನು ಬೆರಗಾದೆ. ಮುಗುಳ್ನಗುತ್ತ ನನ್ನ ವಕೀಲಿ ಸಹಾಯಕ್ಕಾಗಿ ವಂದಿಸಿದ. ನನ್ನ ವಾದ ಕೇಳಿ ಆಶ್ಚರ್ಯಗೊಂಡಿದ್ದನಂತೆ. ಅವನ ತುಟಿಗಳ ಮೇಲೆ ಹೊಳಪಿನ ಆ ನಗೆ ಸದಾ ಸಿದ್ಧವಿದೆ. ನನ್ನ ವೃತ್ತಿಯಲ್ಲಿ, ಸಮಾಜದ ಇತರ ಕಡೆ ಅನೇಕ ಜನರನ್ನು ಭೇಟಿಯಾಗಿದ್ದರೂ ಇಂತಹ ದೃಢ ವ್ಯಕ್ತಿತ್ವದ ಮನುಷ್ಯನನ್ನು ನೋಡೇ ಇಲ್ಲ. ನಾನು ಅವನಿಗೆ ಹೆಂಡತಿ ಮಕ್ಕಳ ಗತಿ ಏನು ಎಂದು ಕೇಳಿದೆ. ಕ್ಷಮಾಪಣಾ ಪತ್ರದ ಸುದ್ದಿಯನ್ನು ಹೇಳಿದೆ. ಮೃದುವಾಗಿ ಆದರೆ ದೃಢವಾಗಿ ಎಲ್ಲವನ್ನು ತಳ್ಳಿಹಾಕಿದ. ಆಗ ನನಗೆ ನಾಚಿಕೆ. ತಪ್ಪು ಮಾಡುತ್ತಿರುವಾಗಲೇ ಮೇಷ್ಟ್ರ ಕಣ್ಣಿಗೆ ಬಿದ್ದ ಸಣ್ಣ ಹುಡುಗನಂತೆ!

"ಅಲ್ಲಿಂದ ಹೊರಟು ಬರುವಾಗ ನಾನು ಸಹಸಾ 'ಇದೆಲ್ಲ ಹೇಗಾಯಿತು?' ಎಂದು ಕೇಳಿದೆ. ತಾನು ಕುಳಿತುಕೊಂಡ ಹಲಗೆಯ ಮೇಲೆ ನನ್ನನ್ನೆಳೆದು ಕೂಡಿಸಿಕೊಂಡ. ಮತ್ತೆ ಅದೇ ಶುಭ್ರ ನಗೆ ಅವನ ತುಟಿಗಳ ಮೇಲೆ !

"'ನಿಮಗೇಕೆ ಅದು ?' ಎಂದ. 'ಬೇರಾರಿಗೂ ತಿಳಿಯಬಹುದಾಗಿದ್ದರೆ ಅದು ನಿಮಗೇ. ಆದರೆ ನೀವು ನನ್ನನ್ನು ನಂಬುವಿರಾ ?' ನಾನು ಮಾತನಾಡಬೇಕೆಂದು ಬಾಯಿತೆರೆಯುವಷ್ಟರಲ್ಲಿ ಅವನೇ ಮತ್ತೆ ಹೇಳಿದ—'ಅದೇನು ದೊಡ್ಡ ವಿಷಯವಲ್ಲ, ನಿಜ. ಆದರೆ ಬೇರೆಯವರಾರಿಗಾದರೂ ಅದು ತಿಳಿದಿರುವುದು ಒಳ್ಳೆಯದು. ಬೇರೆಯವರಿಗಿಂತ, ನೀವೇ ಹೆಚ್ಚು ಬಾಧ್ಯರು.'

"'ಅದೆಲ್ಲ ಆಗಿದ್ದು ಹಿಂದೆ—ಬಹಳ ಹಿಂದೆ. ಸರಿಯಾಗಿ ಹೇಳಬೇಕೆಂದರೆ ನಾಲ್ವತ್ತೊಂದು ವರ್ಷಗಳ ಹಿಂದೆ. ಅಂದರೆ ನನ್ನ ತಾಯಿ ನನಗೆ ಜನ್ಮವಿತ್ತಾಗ. ಹೊಕ್ಕುಳ ಬಳ್ಳಿ ನಾನು ಬದುಕಿ ಬರುವುದೇ ಬೇಡವೆಂದು ಸುರುಳಿ ಸುತ್ತಿಕೊಂಡಿತ್ತು. ಅದೇಕೆ ಹಾಗೆ ನೋಡುತ್ತೀರಿ? ನಾನು ಸರಿಯಾಗಿದ್ದೇನೆ ಹುಚ್ಚು ಹಿಡಿದಿಲ್ಲ . . . . .

"'ನನಗೆ ಆರು ತುಂಬಿದಾಗ ಒಂದು ದಿನ ಈ ವಿಷಯವನ್ನು ನನ್ನ ಆಜ್ಜಿ ಯಾರೊಡನೆಯೋ ಹೇಳುತ್ತಿದ್ದರು. ಅದಕ್ಕೆ ಶಾಂತಿಯನ್ನೂ ಮಾಡಿಸಬೇಕೆಂದಿದ್ದರಂತೆ. ಹಾಗೇ ವರ್ಷಗಳುರುಳಿದವು. ಎಸ್. ಎಸ್. ಎಲ್. ಸಿ. ಓದುವಾಗ ಒಂದು ಘಟನೆ ನಡೆಯಿತು. ನನ್ನ ಒಬ್ಬ ಆಪ್ತ ಸ್ನೇಹಿತ

ನಿದ್ದ. ಅವನಿಗೆ ಹಸ್ತಸಾಮುದ್ರಿಕ, ಜ್ಯೋತಿಷ್ಯ ಇವುಗಳಲ್ಲಿ ವಿಚಿತ್ರ ಆಸಕ್ತಿ. ಚೆನ್ನಾಗಿ ಅಭ್ಯಾಸ ಮಾಡಿದ್ದ. ಒಂದು ದಿನ ನನ್ನ ಕೈಯನ್ನು ತೆಗೆದುಕೊಂಡು ನೋಡಲಾರಂಭಿಸಿದ. ನೋಡುತ್ತಿದ್ದಂತೆ ಒಂದು ನಿಟ್ಟುಸಿರು ಅವನ ಮುಖದಿಂದ ಹೊರಬಿದ್ದಿತು. ನಾನು ಕಾರಣ ಹೇಳೆಂದು ಪೀಡಿಸಿದೆ. ಸಂಕೋಚಪಟ್ಟುಕೊಳ್ಳುತ್ತ ಅವನು ಹೇಳಿದ್ದೆಂದರೆ "ನಿನಗೆ ಸಹಜವಾದ ಮರಣ ಬರುವುದಿಲ್ಲ!" ನನ್ನ ಕೈಯ ಗೆರೆಗಳನ್ನು ತೋರಿಸುತ್ತ ನಾನು ಬಹುಶಃ ಆತ್ಮಹತ್ಯೆ ಮಾಡಿಕೊಳ್ಳುತ್ತೇನೆ ಎಂದ. ಆ ರಾತ್ರಿ ನಿದ್ದೆ ನನ್ನ ಬಳಿ ಸುಳಿಯಲಿಲ್ಲ. ನಾನು ಹುಟ್ಟುವಾಗ ತಪ್ಪಿಸಿಕೊಂಡ ಸಾವಿನ ಸುರುಳಿ ಮತ್ತೆಂದಾದರೂ ಸುತ್ತಿಕೊಳ್ಳುವುದೇ ಎನಿಸಿತು. ನಿಜಕ್ಕೂ ನೋಡಿ, ಆ ದಿನವೇ ನನ್ನಲ್ಲಿ ಭೂತ ಸಂಚಾರವಾದಂತಾಯಿತು.' ಫಕ್ಕನೇ ಅವನು ಮಾತು ನಿಲ್ಲಿಸಿದ.

"ಅವನ ಮಾತಿನ ಓಘವನ್ನು ತಡೆಯುವ ಉದ್ದೇಶ ನನಗಿರಲಿಲ್ಲ. ವಕೀಲ ಕಲಿಯುವ ಮುಖ್ಯಪಾಠವೆಂದರೆ ಇದೇ.

"ಸ್ವಲ್ಪ ಹೊತ್ತಿನಲ್ಲಿ ಅವನು ಮತ್ತೆ ಪ್ರಾರಂಭಿಸಿದ—'ಆ ಹೆದರಿಕೆ ನನ್ನಲ್ಲಿ ಸೇರಿಬಿಟ್ಟಿತ್ತು. ಆದರೆ ಯೌವನದಲ್ಲಿ ಅಂತಹ ಯಾವ ಭಯವೂ ಹತ್ತಿರ ಸುಳಿಯವುದಿಲ್ಲ. ಎಸ್. ಎಸ್. ಎಲ್. ಸಿಯಲ್ಲಿ ಪ್ರಥಮ ದರ್ಜೆಯಲ್ಲಿ ಪಾಸಾಗಿ ಕಾಲೇಜು ಸೇರಿದೆ. ಆಗ ನನ್ನ ಸ್ನೇಹಿತನ ಭವಿಷ್ಯ ನುಡಿ ಮರೆತೇಹೋಯಿತು. ಕಾಲೇಜು ಜೀವನದ ಮೊದಲಿನ ಮೂರು ವರ್ಷವಂತೂ ನಾನು ಒಬ್ಬ ನಾಯಕನಂತಾಗಿದ್ದೆ. ಆಟಗಳಲ್ಲಿ ಕಾಲೇಜಿಗೇ ಕೀರ್ತಿ ತಂದೆ ನಾನು.

"'ಮತ್ತೆ ಅದು ಸಂಭವಿಸಿದ್ದು ನನ್ನ ಕಾಲೇಜು ಜೀವನದ ಮೂರನೆಯ ವರ್ಷದ ಕೊನೆಯಲ್ಲಿ. ನಮ್ಮ ಉಪಾಧ್ಯಾಯ ವರ್ಗ ಮತ್ತು ವಿದ್ಯಾರ್ಥಿ ವರ್ಗಗಳ ನಡುವೆ ಪಂದ್ಯ ನಡೆದು, ಅವರು ಸೋತರು. ನಾನು ಕೋಲು ಹಿಡಿದು ನೆಗೆಯುವುದನ್ನು ಪ್ರದರ್ಶಿಸುತ್ತಿದ್ದೆ. ಸಾಮಾನ್ಯವಾಗಿ, ನಾವು ಮೇಲೆ ನೆಗೆಯುವ ಎತ್ತರದ ಅಳತೆಗೆ ಕೋಲಿನ ಬದಲು ಹಗ್ಗ ಕಟ್ಟುತ್ತಿದ್ದೆವು. ಎರಡು ಸಲ ಸಾಕಷ್ಟು ಎತ್ತರದಲ್ಲಿ ಹಾರಿ, ಮೂರನೆಯ ಸಲ ಕೋಲು ಹಿಡಿದು ಮೇಲಕ್ಕೆ ಜಿಗಿದೆ. ಆ ಹಗ್ಗ ನನ್ನತ್ತ ತೇಲಿ ಬಂದಂತಾಯಿತು. ಹಗ್ಗ! ಸುತ್ತಲಿನ ಪ್ರಪಂಚವೆಲ್ಲ ಗರಗರನೇ ಸುಳಿಸುಳಿಯಾಗಿ ತಿರುಗಿದಂತಾಯಿತು. ನನಗೆ ಪ್ರಜ್ಞೆ ತಪ್ಪಿತು. ಎಚ್ಚರಾದಾಗ ಪಾದದ ಕೀಲು ಮುರಿದು ಹೋಗಿತ್ತು.

"'ಇನ್ನು ಆಟಗಳು ನನ್ನಪಾಲಿಗೆ ಇಲ್ಲವಾದವು. ಮೂರನೆಯ ವರ್ಷ ಸಂಭಾವನೆ ಪಡೆದು ನಾನು ಹೊರಗೆ ಬಂದೆ.

"'ಒಂದು ನಿಮಿಷ ಅವನು ತಡೆದ. ಅದೆಲ್ಲ ಹೇಳಲು ಅವನೆಷ್ಟು ಕಷ್ಟಪಡುತ್ತಿದ್ದನೆನ್ನುವುದನ್ನು ಅವನ ಹಣೆಯ ಮೇಲಿನ ಬೆವರಹನಿಗಳು ಹೇಳುತ್ತಿದ್ದವು.

"'ನಿಮ್ಮಲ್ಲಿ ಸಿಗರೇಟಿದೆಯೇ?' ಅವನ ದನಿ ಸಂಪೂರ್ಣ ಕುಗ್ಗಿತ್ತು. ನಾನು ಒಂದು ಸಿಗರೇಟು ಕೊಟ್ಟೆ. ಸೇದುವಾಗ ಅವನ ಉತ್ತೇಜಿತ ನರಮಂಡಲಗಳಿಗೆ ಶಾಂತಿ ದೊರಕಿದಂತೆ ಭಾಸವಾಯಿತು.

"'ಹಾಂ, ನಾನೇನು ಹೇಳುತ್ತಿದ್ದೆ... ಹಾದು... ಕಾಲೇಜು ಬಿಟ್ಟು ನಾನು ಮೇಷ್ಟ್ರ ಕೆಲಸ ಹಿಡಿದೆ. ಅದರಲ್ಲಿ ಆಸಕ್ತಿ ಇತ್ತು ಎಂದಲ್ಲ, ಕೆಲಸ ಬೇಕಾಗಿತ್ತು ಅಷ್ಟೆ. ನಂತರ ಮದುವೆ ಆಯಿತು. ನನ್ನ ಹೆಂಡತಿಯ ಕತ್ತಿಗೆ ತಾಳಿ ಬಿಗಿಯುತ್ತಿರುವಾಗ ಮೂರನೆಯ ಸಲ ಮತ್ತೆ ಅದೇ ಭಾವಾವೇಗಕ್ಕೆ ಸಿಕ್ಕಿದೆ! ಪುರೋಹಿತರು ತಾಳಿಯನ್ನು ನನ್ನ ಕೈಗಿತ್ತ ತಕ್ಷಣ ಆ ಭಾವನೆ ಮಿಂಚಿನಂತೆ ಸುಳಿಯಿತು! ಹಗ್ಗದ ಸುರುಳಿ.... ಮತ್ತು.... ಕುತ್ತಿಗೆ! ಆದರೆ ಹೇಗೆ ಹೇಗೊ ಮಾಡಿ ಆ ಅಗ್ನಿಪರೀಕ್ಷೆಯನ್ನು ದಾಟಿದೆ. ಮುಗಿದ ತಕ್ಷಣ ಮಾತ್ರ ಮದುವೆ ಮಂಟಪದಿಂದ ನನ್ನ ಕೋಣೆಗೆ ಓಡಿ ಹೋದೆ. ನನ್ನ ಕೈಕಾಲು ನಡುಗುತ್ತಿದ್ದವು. ಎದೆ ಗುಂಡಿಗೆ ಹಾರುತ್ತಿತ್ತು. ನನಗೆ ಏನೋ ಮೂರ್ಛೆ

ರೋಗ ಇದೆಯೆಂದು ನನ್ನ ಸ್ನೇಹಿತರು ಆ ದಿನ ಭಾವಿಸಿರಲಿಕ್ಕೂ ಸಾಕು.

"'ಮದುವೆಯ ನಂತರ ಅವೆಲ್ಲ ಮುಗಿದಂತಾಗಿತ್ತು. ಸುಮಾರು ಹತ್ತು ವರ್ಷಗಳ ಜೀವನದಲ್ಲಿ ಆ "ಹಗ್ಗದ ಸುರುಳಿಯ ಭೂತ" ನನ್ನನ್ನು ಪೀಡಿಸಲಿಲ್ಲ. ಶಾಲಾ ಮೇಷ್ಟ್ರಂಥ ಯಾಂತ್ರಿಕ ಜೀವನದಲ್ಲಿ ಅದು ತಲೆ ಹಾಕಲು ಸಾಧ್ಯವಿದೆಯೇ? ಆ ಅತಿ ಸಾಮಾನ್ಯಜೀವನದಲ್ಲಿ ಏನೂ ನಡೆಯುವುದಿಲ್ಲ. ವರ್ಷಗಳ ಮೇಲೆ ವರ್ಷಗಳು ಉರುಳುತ್ತವೆ. ಆದರೆ ನಿಮ್ಮನ್ನು ದಿನವೂ ವಂದಿಸುವ ಮುಖಗಳ ಭಾವವೇ ಬದಲಾಗುವುದಿಲ್ಲ.

"'ಇಂತಹ ನಿರ್ವಿಶೇಷ ಜೀವನದಲ್ಲಿ, ಆ ಭೂತಚೇಷ್ಟೆ ಕಳೆದು ನಾನು ಸುಖವಾಗಿದ್ದೆ. ಐದು ಮಕ್ಕಳು ಹುಟ್ಟಿದವು. ಮೇಷ್ಟ್ರ ಜೀವನಕ್ಕೆ ಅವು ಹೆಚ್ಚೇ. ಆದರೂ ಹೇಗೋ ಒದ್ದಾಡಿ ಜೀವನದಲ್ಲಿ ಸ್ಥಿರತೆಯನ್ನೂ ಗೌರವವನ್ನೂ ಸಂಪಾದಿಸಿದ್ದೆವು-ಬಿರುಗಾಳಿ ಬೀಸಿದ ಆ ದಿನದ ತನಕ. "ಆ ದಿನ" ಬಹಳ ಮುಖ್ಯ ನಿಮಗೆ ಕೋರ್ಟಿನಲ್ಲಿ. ಮತ್ತೆ ನೀವು ನನ್ನ ವರ್ತನೆಗಳನ್ನು ಬಹಳ ಸರಿಯಾಗಿ ಲೆಕ್ಕ ಹಾಕಿದಿರಿ.

"'ರಾತ್ರಿ ಊಟಮಾಡಿ ಮಲಗಿದೆವು. ಆ ದುಃಸ್ವಪ್ನ ಯಾವ ನಿಮಿಷದಲ್ಲಿ ನನ್ನನ್ನು ಕಾಡಿಸಿತೆಂದು ನಾನು ಹೇಳಲಾರೆ.

"'ನೂರಾರು ಮೈಲಿ ಪ್ರದೇಶದಲ್ಲಿ ನಾನು ಒಬ್ಬನೇ ಒಬ್ಬನಾಗಿದ್ದೆ. ಎತ್ತ ನೋಡಿದರೂ ಮರಳ ರಾಶಿ ಒಂದು ಮರವಾಗಲಿ ಗಿಡವಾಗಲಿ ಸಸ್ಯದ ಛಾಯೆಯೂ ಇರಲಿಲ್ಲ ನಾನು ಒಬ್ಬನೇ. ದೇವರೂ ಇಲ್ಲ! ಎಲ್ಲವೂ ಅಲ್ಲಿ ಕೊನೆಮುಟ್ಟು-ವಂತೆನಿಸುತ್ತಿತ್ತು. ಒಂದು ದೊಡ್ಡ ಹರಹು ಇದ್ದಂತೆ— ಮಕ್ಕಳಂತೆ ನಾವೂ ಕಲ್ಪಿಸುವುದಿ-ಲ್ಲವೆ--ಅಂತಹ ಭೂವ್ಯಾಕಾಶ ಒಂದುಗೂಡುವ ಹರಹು.

"'ನಂತರ ನಾನು ನೋಡಿದ ಆ ದೃಶ್ಯ! ಓ ದೇವರೇ! ಎಂತಹ ರುದ್ರಭಯಂಕರ ದೃಶ್ಯ!! ಹಗ್ಗ....ಹಗ್ಗ....ಹಗ್ಗವಲ್ಲದೇ ಇನ್ನೇನೂ ಇಲ್ಲ. ಸಣ್ಣ, ದೊಡ್ಡ, ಬಹಳ ದೊಡ್ಡ ಹಗ್ಗಗಳು..... ಬಣ್ಣ ಬಣ್ಣದ ಹಗ್ಗಗಳು.. ಹಸರು, ಕಪ್ಪು, ಬಿಳುಪು, ಕಂದು ಬಣ್ಣದ ಹಗ್ಗಗಳು. ಹೆಬ್ಬಾವಿನಂತಹ ಹಗ್ಗಗಳು....ಕೆಲವು ವನದೇವತೆಯಂತೆ ದ್ವೇಷದ ಕಾಳ್ಗಿಚ್ಚನ್ನು ಫೂತ್ಕರಿಸುತ್ತಿದ್ದವು...... ಕೆಲವು ಸುತ್ತಲೂ ಸುರುಳಿ-ಸುರುಳಿಯಾಗಿ ನೀರ ಹಾವಿನಂತೆ ಹಬ್ಬಿಕೊಂಡಿದ್ದವು....

"'ಅವೆಲ್ಲ ಅಮಾನುಷವಾಗಿ ಸದ್ದಿಲ್ಲದೇ ನನ್ನ ಬಳಿ ಸಾರುತ್ತಿದ್ದವು. ನಾನು ಬೆವರಿನಿಂದ ಮುದ್ದೆಯಾಗಿ ಹೋದೆ. ಓಡಿಹೋಗಲು ಪ್ರಯತ್ನಿಸಿದೆ. ಕಾಲೇ ಕೀಳಲು ಬರಲಿಲ್ಲ. ಕೆಳಗಿನ ಮರಳು ಜಾರಿ ಬೀಳುವಂತಾಯಿತು. ಅವೆಲ್ಲ ಹತ್ತಿರ ಬಂದುಬಿಟ್ಟಿದ್ದವು. ಎಲ್ಲ ಮೂಲೆಗಳಿಂದಲೂ ಬಂದವು. ನನ್ನ ಈ ಪಾಡಿಗೆ ಹುಚ್ಚು ಹುಚ್ಚಾಗಿ ಕುಣಿಯುತ್ತ ಬಂದವು. ಮರುಕ್ಷಣದಲ್ಲೇ ಅವೆಲ್ಲ ತಮ್ಮ ಉದ್ದುದ್ದ ಮೈಯಿಂದ ನನ್ನನ್ನು ಸುತ್ತಿಕೊಂಡವು.

"'ಮತ್ತೆ ನನ್ನ ಕುತ್ತಿಗೆಗೆ!—ಕುತ್ತಿಗೆ ಹಿಸುಕುವಂತೆ. ದೇವರೇ! ನೋಡಲು ಸಾಧ್ಯವೇ ಇಲ್ಲ, ಅದು.

"'ಆ ದುಃಸ್ವಪ್ನದಿಂದ ಯಾವಾಗ ಎಚ್ಚೆತ್ತೆನೋ ಗೊತ್ತಿಲ್ಲ. ಆದರೆ ಎಚ್ಚರಾದ ಮೇಲೂ ನನಗೆ ಶಾಂತಿ ದೊರಕಲಿಲ್ಲ. ಮತ್ತೆ ಮತ್ತೆ ಅವೇ ಪೆಡಂಭೂತಗಳು ನನ್ನ ಸುತ್ತಲೂ; ನನ್ನ ಹೆಂಡತಿ ಮಕ್ಕಳ ಸುತ್ತಲೂ ಭುಸುಗುಟ್ಟುತ್ತಿದ್ದವು. ಆಗಲೇ ನಾನು ಬುದ್ಧಿಶೂನ್ಯನಾದೆ ಅವನ್ನು ಎರಡೂ ಕೈಗಳಿಂದ ಹಿಡಿದು ಎಳೆದೆ-ಳೆದು ಹಾಕಲಾರಂಭಿಸಿದೆ. ನಿರಾಶೆಯಿಂದ ನನಗೆ ಹುಚ್ಚು ಹಿಡಿದಂತಾಗಿತ್ತು. ನನ್ನ ದುರ್ಬಲತೆಯನ್ನು ನೋಡಿ ಅವು ಹಲ್ಲು ಕಿರಿಯುತ್ತಿದ್ದವು. ಸಿಟ್ಟಿನಿಂದ ನಾನು ಉರಿದುಹೋದೆ. ನನ್ನನ್ನು ಬೇಕಾದರೆ ಅವು ಒಯ್ಯಲಿ. ನನ್ನ ಹೆಂಡತಿ ಮಕ್ಕಳನ್ನು ಮುಟ್ಟಲೂ ಬಿಡಲಾರೆ. ಹೂದೋಟದ ಕತ್ತಿಯನ್ನು ಹಿಡಿದುಕೊಂಡು ಅವನ್ನು ಕೊಚ್ಚಿ ಕೊಚ್ಚಿ ಹಾಕಲಾರಂಭಿಸಿದೆ. ಕೊನೆಗೆ

ನನ್ನ ಕೈ ಬಳಲಿ, ಶಕ್ತಿಹೀನವಾಗಿ ಕತ್ತಿ ಕೆಳಗೆ ಬಿದ್ದಾಗ ನನಗೆ ಎಚ್ಚರ. ಅಷ್ಟು ಹೊತ್ತಿಗೆ, ಅಯ್ಯೋ, ಕತ್ತಿ ಬಲಿ ತೆಗೆದುಕೊಂಡು ಬಿಟ್ಟಿತ್ತು-ನನ್ನ ಎರಡು ಮಕ್ಕಳು—ಪುಟ್ಟ ಲಚ್ಚು ಮತ್ತು ಮುದ್ದು ಪ್ರೇಮ.'

"ಬಿಕ್ಕಳಿಕೆಯಿಂದ ಅವನ ದೇಹವಿಡೀ ನಡುಗುತ್ತಿತ್ತು. ಅಂತಹ ದುಃಖಸಾಗರದಲ್ಲಿದ್ದವನಿಗೆ ಸಹಾನುಭೂತಿಯ ಸಣ್ಣ ಮಾತನಾಡುವುದೂ ವ್ಯರ್ಥವೇ. ಅವನ ಕಣ್ಣೀರೆಲ್ಲ ಬತ್ತಿ ಹೋಗಲೆಂದು ಅವನನ್ನು ಅಳಲು ಬಿಟ್ಟೆ. ಸ್ವಲ್ಪ ಹೊತ್ತಿಗೆ ಸಾವರಿಸಿಕೊಂಡ.

"'ದಯವಿಟ್ಟು ಬೇಜಾರು ಮಾಡಬೇಡಿ' ಅವನು ಬೇಡಿಕೊಂಡ.

"ಅಲ್ಲ, ನೀನು ಕಂಡಿದ್ದೇನು ನಿಜವಾಗಿ?"

"ನೀವು ಯಾವುದನ್ನೂ ಬಿಡುವುದಿಲ್ಲವಲ್ಲ ಸ್ವಾಮಿ?.. ಜೇಲಿನ ಈ ದೀರ್ಘ ದಿನಗಳಲ್ಲಿ ನಾನು ಹೀಗೇ ಆಗಿರಬಹುದು ಎಂದು ಊಹಿಸಿದ್ದೇನೆ.. ನಾವೆಲ್ಲ ವರಾಂಡದಲ್ಲಿ ಮಲಗಿದ್ದುದು ನಿಮಗೆ ಗೊತ್ತಿರಬೇಕು. ನಮಗೂ ರಸ್ತೆಗೂ ನಡುವೆ ಒಂದು ತಂತಿ ಬಲೆ ಬಿಗಿದಿತ್ತು. ಅದರ ನೆರಳು, ನನ್ನ ಭೀತ ಮನಸ್ಸನ್ನು ಮರಳು ಮಾಡಿಸಿರಬೇಕು."

"'ಕೋರ್ಟಿನಲ್ಲಿ ನೀವೇಕೆ ಅದನ್ನೆಲ್ಲ ಹೇಳಲಿಲ್ಲ.' ವೆಂದು ನಾನು ಬಹಳ ಪಶ್ಚಾತ್ತಾಪ ವ್ಯಕ್ತಪಡಿಸಿದೆ.

"'ಅದರಿಂದ ಯಾವ ರಾಜ್ಯ ಉಳಿಯುತ್ತಿತ್ತು?'

"'ರಾಜ್ಯ ಉಳಿಯದಿದ್ದರೂ ಶಿಕ್ಷೆ ಕಡಿಮೆಯಾಗಬಹುದಿತ್ತು.'

"'ಅದರಿಂದೇನು ಭಾಗ್ಯ? ಕೆಲವೊಮ್ಮೆ ನನಗನಿಸುತ್ತದೆ. — ಬದುಕಿಗೂ ಸಾವಿಗೂ ಬಹಳ ಅಂತರವೇನಿಲ್ಲ!'

"ನಂತರ ನಾನು ಅವನನ್ನು ಬೀಳ್ಕೊಂಡು ಹೊರಟೆದ್ದೆ. ಮತ್ತೆ ಕರೆದು ಹೇಳಿದ—

"'ನನಗೆ ಒಂದೇ ಒಂದು ದುಃಖವಿದೆ-ಕೊನೆಗೂ ನಾನು ಆ ಹಗ್ಗವನ್ನೇ ಎದುರಿಸಬೇಕಾಗಿ ಬಂತಲ್ಲ! ನಮ್ಮ ದೇಶದಲ್ಲಿ ವಿದ್ಯುತ್ ಖುರ್ಚಿ ಇದ್ದಿದ್ದರೇ— ಎನಿಸುತ್ತದೆ— ಆಗ ಹಗ್ಗದೊಡನೆ ನಡೆಸಿದ ಸೆಣಸಾಟದ ಕೊನೆಯ ಆಟದಲ್ಲಿಯಾದರೂ ನಾನೇ ಗೆದ್ದೆನೆಂಬ ಭಾವನೆ ನನ್ನ ಪಾಲಿಗಿರುತ್ತಿತ್ತು. ಆಟಗಾರ ಎಂದರೆ ಎಂದಿಗೂ ಆಟಗಾರನೇ. ಮರೆಯಬೇಡಿ ನೀವು.'

"ನಾನು ನನ್ನ ಕಣ್ಣೀರಡಗಿಸಲು ಅಲ್ಲಿಂದ ಸರಿಯುವಾಗ ಅವನ ತುಟಿಗಳ ಮೇಲೆ ಅದೇ ಮುಗುಳ್ನಗೆ ಮಿಂಚುತ್ತಿತ್ತು." *

"ಇಲಸ್ಟ್ರೇಟೆಡ್ ವೀಕ್ಲಿ" ಯಿಂದ



## ಮುಂಜಾಗ್ರತೆ

"ಕೊನೆಗೂ ನಾನು ನಿರುಪಾಯನಾಗಿ ನನ್ನ ಮರೆವಿನ ಕಾರಣ ಕೇಳಲೆಂದು ಡಾಕ್ಟರರ ಬಳಿಗೆ ಹೋಗಿ ಪ್ರಕೃತಿ ತೋರಿಸಿದೆ."

"ಅವರೇನು ಹೇಳಿದರು?"

"ನನ್ನಿಂದ ತಮ್ಮ ಫೀಯನ್ನು ಮುಂಗಡವಾಗಿ ವಸೂಲ ಮಾಡಿಕೊಂಡರು."

* *

ಕಣ್ಣುಗಳು ತಮ್ಮನ್ನು ನಂಬುತ್ತವೆ; ಕಿವಿಗಳು ಇತರರನ್ನು ನಂಬುತ್ತವೆ.

ಜರ್ಮನ್ ಗಾದೆ



ಮನೋರಂಜನೆಯ ಜಗತ್ತಿನಲ್ಲಿ ಎರಡು ನವೋದಿತ ತಾರೆಗಳು...

# ನ್ಯಾಷನಲ್ ಎಕ್ಕೋ ರವರ

# 2 ಹೊಸ ರೇಡಿಯೋಗಳು

## ಅಧಿಕ ಶ್ರವಣಸುಖದ ಸುಗ್ಗಿ !

ನಿಮಗೆ ಅಧಿಕ ಶ್ರವಣಸುಖವನ್ನು ನೀಡಲು ನ್ಯಾಷನಲ್-ಎಕ್ಕ್ಯೋರವರು ನಿರ್ಮಿಸಿರುವ ಈ ಸುಂದರವಾದ ಎರಡು ಹೊಸ ರೇಡಿಯೋಗಳನ್ನು ನೋಡಿರಿ. ಅವುಗಳಲ್ಲಿ ಒಂದು ಎಸಿ/ಡಿಸಿ ಕರೆಂಟಿನಿಂದ ನಡೆಯುತ್ತದೆ, ಇನ್ನೊಂದು ಬ್ಯಾಟರಿಯಿಂದ ನಡೆಯುತ್ತದೆ. ಸುಂದರ ವಿನಿಯರ್ಡ್ ಕ್ಯಾಬಿನೆಟ್, ಉತ್ತಮವಾದ 'ಹೈ-ಫೈ' ಲೌಡ್‌ಸ್ಪೀಕರ್, ಆಕರ್ಷಕವಾದ ಡಾಯಲ್, ಅತ್ಯಂತ ಸ್ಪಷ್ಟವಾದ ಸ್ವಾಭಾವಿಕ ಧ್ವನಿ... ಇವು ಈ ರೇಡಿಯೋಗಳ ಕೆಲವು ವಿಶಿಷ್ಟತೆಗಳು! ಮಾತ್ರವಲ್ಲದೆ ಅವು ಸಂಪೂರ್ಣವಾಗಿ 'ಮಾನ್ಸುನೈಸ್' ಕೂಡ ಮಾಡಲ್ಪಡುತ್ತವೆ!

ಈ ರೇಡಿಯೋಗಳನ್ನು ಉಚಿತವಾಗಿ ಹಾಕಿ ತೋರಿಸುವಂತೆ ನಿಮ್ಮ ಹತ್ತಿರದ ನ್ಯಾಷನಲ್-ಎಕ್ಕ್ಯೋ ವ್ಯಾಪಾರಿಗೆ ಇಂದೇ ಹೇಳಿರಿ!




IWT-GRA 2259

**ಮಾಡೆಲ್ ಎಯು-755 :**
ಎಸಿ/ಡಿಸಿ ಸೆಟ್. 6 ವಾಲ್ವ್‌ಗಳು. 3 ಬ್ಯಾಂಡ್‌ಗಳು, ಟೋನ್ ಕಂಟ್ರೋಲ್
ರೂ. 351.00. ಎಕ್ಸೈಸ್ ಡ್ಯೂಟಿ ಸಹಿತ; ತೆರಿಗೆಗಳು ಪ್ರತ್ಯೇಕ

**ಮಾಡೆಲ್ ಬಿ-755 :**
ಡ್ರೈ ಬ್ಯಾಟರಿ ಸೆಟ್. 5 ವಾಲ್ವ್‌ಗಳು, 3 ಬ್ಯಾಂಡ್‌ಗಳು, ಟೋನ್ ಕಂಟ್ರೋಲ್. ಬ್ಯಾಟರಿ ಬಹಳ ಕಡಿಮೆ ಖರ್ಚಾಗುತ್ತದೆ.
ರೂ. 351.00. ಎಕ್ಸೈಸ್ ಡ್ಯೂಟಿ ಸಹಿತ; ತೆರಿಗೆಗಳು ಪ್ರತ್ಯೇಕ




ನ್ಯಾಷನಲ್-ಎಕ್ಕ್ಯೋ ರೇಡಿಯೋಗಳು ಉತ್ತಮತರ...

ಅವು ಮಾನ್ಸುನೈಸ್ ಮಾಡಲ್ಪಡುತ್ತವೆ!




ಜನರಲ್ ರೇಡಿಯೋ ಅಂಡ್ ಅಪ್ಲಯನ್ಸಸ್ ಲಿ.
ಬೊಂಬಾಯಿ • ಕಲ್ಕತ್ತ • ಮದರಾಸು • ದೆಹಲಿ • ಪಾಟ್ನ
ಬೆಂಗಳೂರು • ಸಿಕಂದರಾಬಾದು

IWT·GRA. 2259/II

ಈ ಪ್ರಶ್ನೆಗಳನ್ನು ಉತ್ತರಿಸಬಲ್ಲಿರಾ ?

# ನಿಮ್ಮ ಬುದ್ಧಿಬಲಕ್ಕೊಂದು ಸವಾಲು

ಡಾ. ವಿ. ಎಸ್. ರಾಮಚಂದ್ರನ್

## ಸಮಸ್ಯೆ ೧

ರಾಮಾನುಜಂ ಮೊನ್ನಿನ ಜನಗಣತಿಯಲ್ಲೊಬ್ಬ ಗಣಕನಾಗಿ ನೇಮಕ ಹೊಂದಿದ್ದ. ಆತ ಒಂದಾನೊಂದು ಮನೆಗೆ ಹೋದಾಗ ಅದಕ್ಕೆ ಒಳಗಿಂದ ಅಗಳಿ ಹಾಕಿದ್ದರು.

"ನಿಮ್ಮ ಕುಟುಂಬದಲ್ಲಿ ಎಷ್ಟು ಜನ ಇದ್ದಾರೆ?" ಎಂದು ರಾಮಾನುಜಂ ಹೊರಗಿಂದಲೇ ಕೂಗಿದ.

"ಮೂವರು" ಎಂದು ಒಳಗಿಂದ ಮಾರುತ್ತರವಿತ್ತಿತು ಹೆಂಗಸಿನ ದನಿ.

"ನಿಮ್ಮ ವಯಸ್ಸುಗಳು?" ಎಂದು ಮತ್ತೆ ಕೇಳಿದ ರಾಮಾನುಜಂ.

"ನಮ್ಮ ಪ್ರಾಯಗಳನ್ನೆಲ್ಲ ಒಂದಕ್ಕೊಂದು ಗುಣಿಸಿದರೆ ೪೪೧ ಆಗುತ್ತದೆ" ಎಂದಳು ಅವಳು.

"ಹೀಗೋ?" ಎಂದು ಸ್ವಲ್ಪ ಯೋಚಿಸಿ ಮತ್ತೆ ಕೇಳಿದ: "ನಿಮ್ಮ ಗಂಡ ಮನೆಯಲ್ಲೇ ಇದ್ದಾರೆಯೆ?"

"ಇದ್ದಾರಲ್ಲ."

"ಸರಿ ಸರಿ" ಎಂದು ಒಳಗೊಳಗೇ ನಗುತ್ತ ಮನೆಯೊಳಗಿನವರ ವಯಸ್ಸುಗಳನ್ನು ಗುರುತಿಸಿಕೊಂಡು ರಾಮಾನುಜಂ ಹೊರಟು ಹೋದ.

ಈಗ ಹೇಳಿ, ರಾಮಾನುಜಂ ಅವರ ವಯಸ್ಸುಗಳನ್ನು ಹೇಗೆ ಊಹಿಸಿದ?

## ಸಮಸ್ಯೆ ೨

ರಾಮಾನುಜಂ ಅನ್ನು ಒಂದು ಕ್ರಿಕೆಟ್ ಕ್ಲಬ್ಬಿಗೆ ಕಾರ್ಯದರ್ಶಿಯಾಗಿ ಮಾಡಿದರು. ಕ್ಲಬ್ಬಿಗೆ ಮೊದಲನೇ ಸಲ ಭೆಟ್ಟಿ ಕೊಟ್ಟಾಗ ಅಲ್ಲಿ ಆತ ಹತ್ತು ಬೇರೆ ಬೇರೆ ಕಂಪನಿಗಳಿಂದ ತಯಾರಿಸಲಾದ ಹತ್ತು ಪೆಟ್ಟಿಗೆ ಚೆಂಡುಗಳು ಬಂದಿದ್ದುದನ್ನು ಕಂಡ. ಅವುಗಳಲ್ಲಿ ಯಾವುದೋ ಒಂದು ಕಂಪನಿಯವರು ಸಾಮಾನ್ಯವಾಗಿ ಪ್ರಮಾಣಿತವಾದ ೫½ ಔಂಸ್ ತೂಕದ ಚೆಂಡುಗಳ ಬದಲು ೫¼ ಔಂಸ್ ತೂಕದ ಚೆಂಡುಗಳನ್ನು ಕಳಿಸುತ್ತಿದ್ದಾರೆಂದು ಯಾರೋ ಅವನಿಗೆ ಹೇಳಿದ್ದರು. ಅಂಥ ಚೆಂಡುಗಳಿರುವ ಪೆಟ್ಟಿಗೆ ಯಾವುದೆಂದು ಕಂಡುಹಿಡಿಯುವ ಸಮಸ್ಯೆ ರಾಮಾನುಜಂಗೆ ಎದುರಾಯಿತು.

ಕ್ಲಬ್ಬಿನ ಹತ್ತಿರವೇ ನಿಷ್ಕರ್ಷೆಯಾಗಿ ತೂಕ ಹೇಳುವ ಒಂದು ಯಂತ್ರವಿತ್ತು. ಮಾತ್ರ ಪ್ರತಿಯೊಮ್ಮೆ ತೂಕ ಮಾಡಬೇಕಾದರೆ ಅದರ ತೂತಿನೊಳಗೆ ೧೦ ನಯೆ ಪೈಸೆ ನಾಣ್ಯ ತುರುಕಬೇಕಾಗುತ್ತಿತ್ತು. ಆದರೆ ರಾಮಾನುಜಂ ಕಿಸೆಯಲ್ಲಿದ್ದುದು ಒಂದೇ ಹತ್ತು ನಯೇ ಪೈಸೆ ನಾಣ್ಯ. ಆತ ಸ್ವಲ್ಪ ಯೋಚಿಸಿ, ಅದೊಂದೇ ನಾಣ್ಯ ಉಪಯೋಗಿಸಿ ಒಮ್ಮೆ ಮಾತ್ರ ತೂಕ ಮಾಡಿ ಮೋಸಗಾರ ಕಂಪನಿ ಯಾವುದೆಂದು ಪತ್ತೆ ಹಚ್ಚಿದ.

ಆತ ಅದನ್ನು ಹೇಗೆ ಮಾಡಿದ?

**(ಉತ್ತರಗಳಿಗೆ ೮೮ ನೇ ಪುಟ ನೋಡಿರಿ)**

---

ಡಾ. ರಾಮಚಂದ್ರನ್ನರು ರೂರಕಿಯಲ್ಲಿರುವ ಭಾರತ ಸರಕಾರದ ರಾಷ್ಟ್ರೀಯ ಕಟ್ಟಡ ಸಂಶೋಧನಾಲಯದ ಹಿರಿಯ ವೈಜ್ಞಾನಿಕ ಅಧಿಕಾರಿಯಾಗಿದ್ದು ಅನೇಕ ವಿದೇಶಿ ಪತ್ರಿಕೆಗಳಲ್ಲಿ ಅವರ ವೈಜ್ಞಾನಿಕ ಲೇಖಗಳು ಪ್ರಕಟವಾಗುತ್ತಿವೆ. "ಕಸ್ತೂರಿ"ಯ ಅಭಿಮಾನಿಗಳಾದ ಅವರು ಈ ಸಮಸ್ಯಾ ಮಾಲೆಯನ್ನು ಪ್ರಾರಂಭಿಸಿದ್ದು ಮುಂದಿನ ತಿಂಗಳು ಅವರು ರಚಿಸಿದ ಮತ್ತೆರಡು ಸಮಸ್ಯೆಗಳು ನಿಮ್ಮ ಬುದ್ಧಿವಂತಿಕೆಗೆ ಸವಾಲು ಹಾಕಲಿವೆ.

# ನಿಮ್ಮ ಶಬ್ದ ಭಾಂಡಾರ ಬೆಳೆಯಲಿ

## ಶಬ್ದಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ

ಇಲ್ಲಿ ಪ್ರತಿ ತಿಂಗಳು ಕೆಲವು ಶಬ್ದಗಳನ್ನು ಪರಿಚಯ ಮಾಡಿ ಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟದ್ದು, ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆ ಮೇಲೆ ಇದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥಗಳನ್ನು ವಿವರಿಸಿದೆ.

೧. ಉಪಾಸ್ಯ

(ಅ) ಗೇಲಿ (ಆ) ಶಿಕ್ಷಕ (ಇ) ಹೊಟ್ಟೆಗಿಲ್ಲದ (ಈ) ಪೂಜಿಸತಕ್ಕ

೨. ಲಿಪ್ಸೆ

(ಅ) ಹಂಬಲ (ಆ) ಎಣ್ಣೆ (ಇ) ಮಸಿ (ಈ) ದ್ವೇಷ

೩. ಅಭಿಜಿತ್

(ಅ) ಎದುರುವಾದಿ (ಆ) ಮಧ್ಯಾಹ್ನ (ಇ) ವಿಚಾರಶೀಲ (ಈ) ಅತಿಥಿ

೪. ಅನುನಯ

(ಅ) ಮೆತ್ತಗೆ (ಆ) ಬೆಂಬಲ (ಇ) ಅರ್ಥ (ಈ) ಒಲಿಸುವ ಮಾತು

೫. ತುಲ್ಯ

(ಅ) ಹಲಸಿನ ಹಣ್ಣು (ಆ) ಹತ್ತಿ (ಇ) ಹೋಲಿಸತಕ್ಕ (ಈ) ಹಕ್ಕಿಯ ಪುಕ್ಕ

೬. ಗರಿಮೆ

(ಅ) ಬಿಸಿ (ಆ) ಕೆಲಸ (ಇ) ಹಿರಿಮೆ (ಈ) ಆಳ

೭. ದೇದೀಪ್ಯಮಾನ

(ಅ) ಹೊಳೆಹೊಳೆಯುವ (ಆ) ನಡುಗಡ್ಡೆ (ಇ) ದೇವಲೋಕದವ (ಈ) ಹೋಲಿಕೆ

೮. ಪಾಷಂಡ

(ಅ) ನಪುಂಸಕ (ಆ) ಅಥರ್ವಿ (ಇ) ಛಲವಾದಿ (ಈ) ಆಸೆಬುರುಕ

೯. ಲೋಲ

(ಅ) ಕೆಂಪು (ಆ) ನಾಲಿಗೆ (ಇ) ಆಚಾರ (ಈ) ತೂಗಾಡುವ

೧೦. ಅಹೇತುಕ

(ಅ) ದುರ್ಬಲ (ಆ) ಕೆಟ್ಟ ಬುದ್ಧಿಯುವ (ಇ) ನಿಷ್ಕಾರಣ (ಈ) ತಾನೇ ಮೇಲೆಂಬ

೧೧. ಅತಏವ

(ಅ) ಆದ್ದರಿಂದಲೇ (ಆ) ವಿಶೇಷವಾಗಿ (ಇ) ಅವನೇನು ಮಾಡುವ? (ಈ) ಕೊಲೆಗಡಕ

೧೨. ತುರುಗಲು

(ಅ) ದನಕರು (ಆ) ಸಮೂಹ (ಇ) ಬಿಗಿ (ಈ) ಒಂದು ವಿಧದ ಕಲ್ಲು



## ‘ಶಬ್ದಭಾಂಡಾರ’ದ ಸರಿಯಾದ ಅರ್ಥಗಳು

೧. **ಉಪಾಸ್ಯ** (ಈ) ಪೂಜಿಸತಕ್ಕ, ಸೇವೆ ಮಾಡಲು ಯೋಗ್ಯವಾದ. ಉದಾ— ಗಣೇಶನು ಅವನ ಉಪಾಸ್ಯ ದೇವತೆ. [ಸಂ. ಉಪ = ಹತ್ತಿರ, ಅಸ್ = ಇರು.]

೨. **ಲಿಪ್ಸೆ** (ಅ) ಹಂಬಲ, ಆಸೆ, (ಯಾವುದನ್ನಾದರೂ) ಪಡೆಯಬೇಕೆಂಬ ಇಚ್ಛೆ, ತಿರುಗಿ ಪಡೆಯುವ ಆತುರ. [ಸಂ. ಲಭ್ = ಪಡೆ ಎಂಬುದರಿಂದ.]

೩. **ಅಭಿಜಿತ್** (ಆ) ಮಧ್ಯಾಹ್ನ, ಮಧ್ಯಾಹ್ನ ಮುಹೂರ್ತ; ಜಯಶಾಲಿ, ಒಳ್ಳೇ ಗಳಿಗೆಯಲ್ಲಿ ಹುಟ್ಟಿದವ. [ಸಂ.]

೪. **ಅನುನಯ** (ಈ) ಮನವೊಲಿಸುವಿಕೆ, ಸಮಾಧಾನಪಡಿಸುವಿಕೆ, ಸೌಜನ್ಯ, ಪ್ರಾರ್ಥನೆ, ವಿನಯದ ಮಾತು. ಉದಾ- ಅವನು ಪರಿಪರಿಯಾದ ಅನುನಯದ ಮಾತುಗಳಿಂದ ಅವಳ ಕೋಪವನ್ನು ಇಳಿಸಿದ. [ಸಂ.]

೫. **ತುಲ್ಯ** (ಇ) ಹೋಲಿಸತಕ್ಕ, ಹೋಲಿಕೆಯುಳ್ಳ; ಒಂದೇ ವಿಧದ; ಸಮಾನವಾದ. ಉದಾ— ಈ ಜೋಡಿ ತುಲ್ಯಯೋಗ್ಯತೆಯದು. [ಸಂ. ತುಲ್=ತೂಗು ಎಂಬುದರಿಂದ.]

೬. **ಗರಿಮೆ** (ಇ) ಹಿರಿಮೆ, ಶ್ರೇಷ್ಠತ್ವ; ತೂಕ, ಭಾರವಾಗಿರುವಿಕೆ. [ಸಂ. ಗರಿಮನ್ = ತೂಕ]

೭. **ದೇದೀಪ್ಯಮಾನ** (ಅ) ಹೊಳೆಹೊಳೆಯುವ, ತೇಜಸ್ಸುಳ್ಳ, ಉಜ್ವಲ. [ಸಂ.]

೮. **ಪಾಷಂಡ** (ಆ) ಅಧರ್ಮಿ, ಧರ್ಮದ ನಿಯಮಗಳನ್ನು ಧಿಕ್ಕರಿಸುವವ; ಧಾರ್ಮಿಕ ನಂಬಿಕೆಗಳನ್ನು ತಿರಸ್ಕರಿಸಿ ಹೊಸ ಅಭಿಪ್ರಾಯಗಳನ್ನು ಹೇಳುವವ; ಡಂಬಾಚಾರಿ. [ಸಂ.]

೯. **ಲೋಲ** (ಈ) ತೂಗಾಡುವ; ಅಲ್ಲಾಡುವ, ಚಂಚಲ, ನಡುಗುವ; ಅಸ್ಥಿರ; ಆಸಕ್ತ; ಆಸೆಬುರುಕ. ಉದಾ- ಲೋಲನೇತ್ರ ಅಂದರೆ ಚಂಚಲ ದೃಷ್ಟಿ; ಲಕ್ಷ್ಮೀಲೋಲ ಅಂದರೆ ಲಕ್ಷ್ಮಿಯಲ್ಲಿ ಆಸಕ್ತ; ಜಿಹ್ವಾಲೋಲ ಅಂದರೆ ನಾಲಗೆಯ ಆಸೆಬುರುಕ ಅರ್ಥಾತ್ ತಿಂಡಿಬಾಕ. [ಸಂ.]

೧೦ **ಅಹೇತುಕ** (ಇ) ನಿಷ್ಕಾರಣ, ನಿರಾಧಾರ; ಉದ್ದೇಶರಹಿತ. [ಸಂ. ಅ=ಇಲ್ಲ, ಹೇತು=ಕಾರಣ.]

೧೧. **ಅತಏವ** (ಅ) ಆದ್ದರಿಂದಲೇ. [ಸಂ.]

೧೨. **ತುರುಗಲು** (ಆ) ಸಮೂಹ, ಗುಂಪು, ರಾಶಿ; ಪೊದೆ, ಕಂಟಿ. [ಕನ್ನಡ. ತುರುಗು=ಒತ್ತೊತ್ತಾಗಿ ಕೂಡಿಸು ಎಂಬುದರಿಂದ.]

---

### ನಿಮ್ಮ ಶಬ್ದಶಕ್ತಿಯ ತರಗತಿ

ನೀವು ಎಷ್ಟು ಶಬ್ದಗಳಿಗೆ ಅರ್ಥ ಆರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.

೬—೮ ಸರಿಯಿದ್ದರೆ .... ಸಾಧಾರಣ
೯—೧೦ ,, .... ಉತ್ತಮ
೧೧—೧೨ ,, ... ಅತ್ಯುತ್ತಮ

ಟಾಟಾರವರ
ಓ ಡಿ
ಕೊಲೋನ್
ಸಾಬೂನು




ಓ ಡಿ ಕೊಲೋನ್‌ನಿಂದ ಕೂಡಿದ್ದು, ಬಂಗಾರ ಬಣ್ಣದ ಕಾಗದದಿಂದ (ಫೊಯಿಲ್) ಪ್ಯಾಕ್ ಮಾಡಲ್ಪಟ್ಟಿರುತ್ತದೆ.

TESY-16



# ಕನಸು ಕಾಣದಿದ್ದರೆ ಹುಚ್ಚು ಹಿಡಿದೀತು!

## ಸ್ವಪ್ನ ವಿಜ್ಞಾನಿಗಳ ಅತ್ಯಾಧುನಿಕ ಶೋಧಗಳ ವರದಿ

● ನಾವೆಲ್ಲರೂ ಪ್ರತಿ ರಾತ್ರಿಯೂ ಕನಸು ಕಾಣುತ್ತೇವೆ; ನನಗೆ ಕನಸುಗಳು ಬೀಳುವುದಿಲ್ಲ ವೆಂದು ಯಾರಾದರೂ ಹೇಳಿದರೆ ಅವರಿಗೆ ಕಂಡ ಕನಸುಗಳು ನೆನಪಿರುವುದಿಲ್ಲೆಂದಷ್ಟೇ ಅರ್ಥ.

● ಕನಸು ಕಾಣುವುದು ನಮ್ಮ ಮಾನಸಿಕ ಮತ್ತು ಶಾರೀರಿಕ ಆರೋಗ್ಯಕ್ಕೆ ಅತ್ಯಗತ್ಯ: ಕನಸುಗಳಿಲ್ಲದಿದ್ದರೆ ನಮಗೆ ಹುಚ್ಚು ಹಿಡಿಯ ಬಹುದು.

● ಕನಸುಗಳು ನಿದ್ರೆಗಿಂತಲೂ ಹೆಚ್ಚು ಅಗತ್ಯವಾಗಿವೆ.

● ನಾವು ಕಾಣುವ ಕನಸುಗಳಲ್ಲಿ ಹೆಚ್ಚಿ ನವು ದೃಶ್ಯರೂಪದಲ್ಲಿರುತ್ತವೆ.

● ಹುಟ್ಟಿದ ಕೆಲ ಸಮಯದಲ್ಲೇ ನಾವು ಕನಸು ಕಾಣತೊಡಗುತ್ತೇವೆ.

ನಿದ್ರೆ ಮತ್ತು ಕನಸುಗಳನ್ನು ಕುರಿತು ಈಚೆಗೆ ವಿಜ್ಞಾನಿಗಳ ಗುಂಪೊಂದು ನಡೆಸಿದ ಸಂಶೋಧನೆಗಳಲ್ಲಿ ಹೊರಪಟ್ಟ ವಿಷಯಗಳಿವು. ಅವರ ಪ್ರಯೋಗಗಳಲ್ಲಿ ಬೆಳಕಿಗೆ ಬಂದ ಕೆಲ ಸಂಗತಿಗಳು ಬೆಚ್ಚಿಬೀಳುವಂತಿವೆ.

ಕನಸುಗಳನ್ನು ಕುರಿತು ಮಾನವನ ಕುತೂಹಲ ಇಂದು ನಿನ್ನೆಯದಲ್ಲ. ಆದರೆ ಕಳೆದ ಹತ್ತು ವರ್ಷಗಳಲ್ಲಿ ಕನಸುಗಳನ್ನು ಕುರಿತು ಕಂಡುಹಿಡಿಯಲಾದಷ್ಟು ವಾಸವಾಂಶಗಳು ಆ ಹಿಂದಿನ ೫೦ ಶತಮಾನಗಳಲ್ಲಿಯೂ ಕಂಡುಹಿಡಿಯಲ್ಪಟ್ಟಿಲ್ಲವೆನ್ನಬಹುದು. ಕನಸುಗಳನ್ನು ಕುರಿತು ಸಂಶೋಧನೆ ನಡೆಸುವಲ್ಲಿದ್ದ ಒಂದು ತೊಂದರೆ ಎಂದರೆ ಒಬ್ಬನು ಯಾವಾಗ ಕನಸು ಕಾಣುತ್ತಿದ್ದಾನೆಂದು ತಿಳಿದುಕೊಳ್ಳುವುದು ಅಸಾಧ್ಯಪ್ರಾಯವಾಗಿದ್ದುದು. ಎಚ್ಚರವಾದ ಮೇಲೆ ಹೆಚ್ಚು ವೇಳೆ, ಕನಸುಗಳು ಮರೆತುಹೋಗುತ್ತವೆ. ಆರೋಗ್ಯವಂತ ಮನುಷ್ಯ ಎಷ್ಟು ಕಾಲ ಕನಸು ಕಾಣುತ್ತಾನೆ; ಕನಸುಗಳಿಗೆ, ಕೆಲ ಡಾಕ್ಟರರು ಹೇಳುತ್ತಿದ್ದ ಹಾಗೆ ಕೇವಲ ಅಜೀರ್ಣ ಮೊದಲಾದ ಶಾರೀರಿಕ ಅವ್ಯವಸ್ಥೆಗಳೇ ಕಾರಣವೇ ಅಲ್ಲವೇ ಎಂದು ತಿಳಿದುಕೊಳ್ಳುವ ಉಪಾಯಗಳಿರಲಿಲ್ಲ.

ಈ ಅಡಚಣೆಯನ್ನು ದಾಟಿದ ಕೀರ್ತಿ ಚಿಕಾಗೋ ವಿಶ್ವವಿದ್ಯಾಲಯದ ಶರೀರಶಾಸ್ತ್ರಜ್ಞ, ಡಾ. ನಥೇನಿಯಲ್ ಕ್ಲೈಟ್ಮನ್ನರಿಗೆ ಸೇರತಕ್ಕದ್ದು. ಸುಮಾರು ಹತ್ತು ವರ್ಷಗಳ ಕೆಳಗೆ ಆತ, ನಿದ್ರೆಯ ಕಾಲದಲ್ಲಿ ಮಿದುಳಿನಿಂದ ಹೊರ ಹೊಮ್ಮುವ ವಿದ್ಯುತ್ತರಂಗಗಳ ಪರಿಶೀಲನೆ ನಡೆಸುತ್ತಿದ್ದಾಗ, ನಿದ್ರಿತ ಮನುಷ್ಯನ ಕಣ್ಣುಗುಡ್ಡೆಗಳು ಒಮ್ಮೊಮ್ಮೆ ಸಹಸಾ ವೇಗವಾಗಿ ಚಲಿಸುವು

ದನ್ನು ಕಂಡು ಇದೇನಿರಬಹುದೆಂದು ಯೋಚನೆಗೊಳಗಾದರು. ಈ ಚಲನೆ ಒಮ್ಮೆ ಪ್ರಾರಂಭವಾದರೆ ಹಲವು ನಿಮಿಷಗಳ ವರೆಗೆ ಉದ್ದಕ್ಕೂ ಸಾಗಿ ಕಡೆಗೆ ನಿಂತುಹೋಗುತ್ತಿತ್ತು. ಕೆಲ ಕಾಲಾನಂತರ ಅದು ಮತ್ತೆ ಪ್ರಾರಂಭವಾಗುತ್ತಿತ್ತು.

ಯಾಕೋ ಏನೋ ಕಣ್ಣು ಗುಡ್ಡೆಗಳು ಚಲಿಸುತ್ತಿರುವಾಗ ನಾವು ಕನಸು ಕಾಣುತ್ತಿರುತ್ತೇವೆ ಎಂದು ಕ್ಲೈಟ್ಮನ್‌ಗೆ ಸಂಶಯ ಬಂತು. ಅವರು ನ್ಯೂಯಾರ್ಕಿನ ತಮ್ಮ ಪ್ರಯೋಗಶಾಲೆಯಲ್ಲಿ ಮಲಗಲು ರಾತ್ರಿಯೊಂದಕ್ಕೆ ಹನ್ನೆರಡರಿಂದ ಇಪ್ಪತ್ತು ರೂಪಾಯಿ ಕೊಟ್ಟು ಸ್ವಯಂಸೇವಕ ಸೇವಿಕೆಯರನ್ನು ಸಂಪಾದಿಸಿದರು. ನಿದ್ರೆಯಲ್ಲಿ ಅವರ ಕಣ್ಣು ಗುಡ್ಡೆ ಚಲಿಸಲು ಪ್ರಾರಂಭವಾದೊಡನೆ ಅವರನ್ನು ಎಚ್ಚರಿಸಿ ಪ್ರಶ್ನಿಸಿದರು. ಹೆಚ್ಚು ಕಡಿಮೆ ಪ್ರತಿ ಸಲವೂ ನಿದ್ರಾ ಸ್ವಯಂಸೇವಕರು ತಮಗೆ ಕನಸು ಪ್ರಾರಂಭವಾಗಿತ್ತೆಂದು ಹೇಳಿದರು. ಕಣ್ಣು ಗುಡ್ಡೆ ಚಲಿಸದೆ ಇದ್ದಾಗ ಎಚ್ಚರಿಸಿದರೆ ಹೆಚ್ಚು ಕಡಿಮೆ ಪ್ರತಿ ಸಲವೂ ಕನಸು ಕಾಣುತ್ತಿಲ್ಲವೆಂಬ ವರದಿಗಳೇ ಬಂದವು.

ಹಾಗಾದರೆ ಯಾವಾಗ ನಮಗೆ ಕನಸುಗಳು ಬೀಳುತ್ತವೆಂದರಿಯಲು ಇಲ್ಲೊಂದು ಹೊಸ ಹೆಗ್ಗುರುತಿತ್ತು. ೧೦೦ ಜನ ನಿದ್ರಿತರನ್ನು ೧,೦೦೦ ರಾತ್ರಿಗಳ ವರೆಗೆ ಪರಿಶೀಲಿಸಿ ಡಾ. ಕ್ಲೈಟ್ಮನ್ನರು ಕೆಲ ನಿಸ್ಸಂದಿಗ್ಧ ತೀರ್ಮಾನಗಳಿಗೆ ಬಂದರು. ಪ್ರತಿಯೊಬ್ಬರೂ ಪ್ರತಿ ರಾತ್ರಿಯೂ ಅನೇಕ ಕನಸುಗಳನ್ನು ಕಾಣುತ್ತಾರೆ; ಕನಸುಗಳು ಹೆಚ್ಚಾಗಿ ದೃಶ್ಯ ರೂಪದಲ್ಲಿರುವುದರಿಂದಲೇ ಕಣ್ಣುಗುಡ್ಡೆಗಳು ಚಲಿಸುತ್ತವೆ; ಹೆಚ್ಚಿನವರ ಕನಸುಗಳಲ್ಲಿ ಕಾಣುವ ದೃಶ್ಯಗಳು ವರ್ಣರಹಿತವಾಗಿರುತ್ತವೆ; ಕನಸು ಕಾಣುವಾಗ ನಮ್ಮ ನಿದ್ರೆ ಕಡಿಮೆ ಗಾಢವಾಗಿರುತ್ತದೆ; ಸಾಮಾನ್ಯವಾಗಿ ಒಂದು ರಾತ್ರಿಯ ನಿದ್ರೆಯಲ್ಲಿ ನಾಲ್ಕೈದು ಕನಸುಗಳು ಬೀಳುತ್ತವೆ; ಕನಸು ಕಾಣುವಾಗ ಹೊರಗಿನಿಂದ ಶರೀರಕ್ಕೆ ಬರುವ ಪ್ರಚೋದನೆಗಳು ಕನಸಿನ "ಕಥೆ"ಯಲ್ಲಿ ಹೊಸ ಅಂಶಗಳಾಗಿ ಸೇರಿಕೊಳ್ಳಬಹುದು. (ಉದಾ:– ಕನಸಿನಲ್ಲಿದ್ದವರ ಮೇಲೆ ನೀರು ಸಿಂಪಡಿಸಿದರೆ ಅವರಿಗೆ ಕನಸಿನಲ್ಲಿ ಮಳೆಯಾದಂತೆ ತೋರಬಹುದು!)— ಇತ್ಯಾದಿ *

ಇದೆಲ್ಲ ಸರಿ. ಆದರೆ ಕನಸು ಕಾಣುವುದರಿಂದೇನು ಪ್ರಯೋಜನ? ಕನಸಿಲ್ಲದಿದ್ದರೇನಾಗುತ್ತದೆ? ಕೂಸುಗಳು ಕನಸು ಕಾಣುತ್ತವೆಯೆ? ಇತ್ಯಾದಿ ಪ್ರಶ್ನೆಗಳು ಇದರಿಂದ ಉದ್ಭವಿಸುತ್ತವೆ. ಇವುಗಳಿಗೆ ಉತ್ತರ ಕಂಡುಹಿಡಿಯಲು ಡಾ. ಕ್ಲೈಟ್ಮನ್ನರ ಶಿಷ್ಯರಾಗಿದ್ದ ಡಾ. ಡಿಮೆಂಟರು ಕೆಲ ಮನೋವಿಜ್ಞಾನಿಗಳ ಸಹಕಾರದಿಂದ ಪ್ರಯೋಗಗಳನ್ನು ಎಂಟು ವರ್ಷಗಳ ಹಿಂದೆ ಪ್ರಾರಂಭಿಸಿದರು.

ಡಾ. ವಿಲಿಯಂ ಡಿಮೆಂಟರ ನ್ಯೂಯಾರ್ಕ್ ಪ್ರಯೋಗ ಶಾಲೆಯಲ್ಲಿ ಪ್ರತಿ ರಾತ್ರಿ "ಹಣಕ್ಕಾಗಿ ಕನಸು ಕಾಣುವವರು" ಬರಹೋಗುವುದು ಪ್ರಾರಂಭವಾಯಿತು. ಈ "ನಿದ್ರಕ"ರ ತಲೆಯ ಮತ್ತು ಎದೆಯ ಮೇಲೆ ತಂತಿಗಳ ಜಾಲವೊಂದು ಹಬ್ಬಿರುತ್ತದೆ. ಅವುಗಳನ್ನು ಬೇರೆಬೇರೆ ಯಂತ್ರಗಳಿಗೆ ಜೋಡಿಸಲಾಗುತ್ತದೆ. ಒಂದು ನಿದ್ರಕನ ಮಿದುಳಿನ ವಿದ್ಯುತ್ತರಂಗಗಳ ಏಳುಬೀಳುಗಳನ್ನು ಗುರುತು ಹಾಕುತ್ತದೆ; ಮತ್ತೊಂದು ಎದೆಬಡಿತಗಳನ್ನು, ಇನ್ನೊಂದು ಶರೀರದ ಉಷ್ಣತಾಮಾನವನ್ನು ಮತ್ತು ಎಲ್ಲಕ್ಕೂ ಮುಖ್ಯವಾಗಿ ಮತ್ತೊಂದು ಅವನ ಕಣ್ಣು ಗುಡ್ಡೆಗಳ ಚಲನವನ್ನು.

ನಿದ್ದೆ ಹತ್ತಿದ್ದನ್ನು ಸ್ವಯಂಸೇವಕನ ಮಿದುಳಿನ ಅಲೆಗಳು ತೋರಿಸುತ್ತವೆ. ಕೆಲ ಹೊತ್ತು ಗಾಢ ನಿದ್ರೆಯ ಅಲೆಗಳು ಕಂಡು ಬಂದ ಮೇಲೆ ಕಣ್ಣು ಗುಡ್ಡೆಗಳು ರಭಸದಿಂದ ಚಲಿಸುವುದು ಪ್ರಾರಂಭವಾಗುತ್ತದೆ. ಈ ಲಕ್ಷಣ ತೋರಿಬಂದೊಡನೆ

---

* "ಕಸ್ತೂರಿ" ಮಾರ್ಚ್ ೧೯೫೯ ಸಂಚಿಕೆಯಲ್ಲಿ ವಿವರಗಳನ್ನು ಕಾಣಬಹುದು. ಡಿ.ಕೆ.

ಡಾ. ಡಿಮೆಂಟರು ದೊಡ್ಡದಾಗಿ ಗಂಟೆಯ ಸಪ್ಪಳ ವಾಗುವಂತೆ ಮಾಡಿ ನಿದ್ರಿತನನ್ನು ಎಚ್ಚರಗೊಳಿಸಿದರು. ಕೆಲ ಕಾಲ ಅವನನ್ನು ಎಚ್ಚರದಲ್ಲಿರಿಸಿ ಮತ್ತೆ ಮಲಗಗೊಡುತ್ತಿದ್ದರು. ಅವನಿಗೆ ಪುನಃ ನಿದ್ರೆ ಬಂದು ಕನಸು ಬೀಳತೊಡಗಿತೋ ಪುನಃ ಅವನನ್ನು ಎಚ್ಚರಗೊಳಿಸಲಾಗುತ್ತಿತ್ತು. ಎಷ್ಟು ಸಲ ಕನಸು ಬೀಳತೊಡಗಿತೋ ಅಷ್ಟೂ ಸಲ ಸ್ವಪ್ನಭಂಗ ಮಾಡುತ್ತಿದ್ದರು.

ಇದು ನಿರಂತರವಾಗಿ ಪ್ರತಿ ರಾತ್ರಿಯೂ ಮುಂದುವರಿಯಿತು. ಸ್ವಪ್ನಭಂಗಕ್ಕೊಳಗಾದವರ ಚರ್ಯೆಯಲ್ಲಿ ವಿಚಿತ್ರ ಬದಲಾವಣೆಗಳಾಗ ತೊಡಗಿದವು. ಮೊದಲ ಒಂದೆರಡು ರಾತ್ರಿಗಳ ನಂತರ ಅವರ ಹಗಲಿನ ಚರ್ಯೆಯಲ್ಲಿ ಶೀಘ್ರ ಕೋಪ, ಮರವೆ, ಉದ್ರೇಕಗಳು ಹೆಚ್ಚಿದವು. ಮೂರು ರಾತ್ರಿಗಳ ನಂತರ ಅನೇಕರ ಹಸಿವು ವಿಪರೀತ ಹೆಚ್ಚಿ ಅವರು ಸಿಕ್ಕಾಬಟ್ಟೆ ತಿನ್ನಲಾರಂಭಿಸಿದರು. ಆದರೂ ಹೊಟ್ಟೆ ಖಾಲಿಯಾಗಿದೆ ಎಂಬ ಭ್ರಾಂತಿ ಅವರನ್ನು ಸದಾ ಬಾಧಿಸುತ್ತಿತ್ತು.

ಒಬ್ಬೊಬ್ಬರನ್ನು ನಿರಂತರವಾಗಿ ಐದು ದಿನಗಳ ವರೆಗೆ ಮಾತ್ರ ಸ್ವಪ್ನಭಂಗಕ್ಕೊಳಗುಮಾಡಲಾಗುತ್ತಿತ್ತು. ಆದರೆ ಆ ಅವಧಿ ಮುಗಿಯುವುದರೊಳಗೇ ಭಗ್ನಸ್ವಪ್ನಿಗಳ ಚರ್ಯೆಯಲ್ಲಿ ನಾಟಕೀಯ ಬದಲಾವಣೆಗಳು ಕಂಡುಬಂದವು. ಎಚ್ಚರವಿದ್ದಾಗಲೇ ಅವರಿಗೆ ಇಲ್ಲದ್ದೆಲ್ಲ ಕಾಣಿಸ ತೊಡಗಿತು. ಒಬ್ಬನಿಗೆ ತನ್ನ ಪ್ರೇಯಸಿ ಬರುತ್ತಿರುವಂತೆ ಭಾಸವಾಯಿತು. ಇನ್ನೊಬ್ಬ ಪೋಲೀಸ್ ಕಚೇರಿಗೆ ಧಾವಿಸಿ ಯಾವಳೋ ಕಾಲ್ಪನಿಕ ವ್ಯಕ್ತಿಯನ್ನು ಹಿಡಿಯಿರಿ ಎಂದು ಕೂಗಿದ. ಆ ವ್ಯಕ್ತಿ ಅವನಿಗೆ ಕಾಣಿಸುತ್ತಿದ್ದಳು, ಪೋಲೀಸರಿಗೆ ಕಾಣಿಸುತ್ತಿರಲಿಲ್ಲ !

ಆದರೆ ಇದೆಲ್ಲ ಕನಸಿನ ಅಭಾವದಿಂದಲೇ ಆಯಿತೆಂದು ಹೇಗೆ ಗೊತ್ತು? ನಿದ್ದೆಗೇಡಿನಿಂದಲೆ ಆಗಿರಬಾರದೇಕೆ ? ಡಿಮೆಂಟರು ಇದನ್ನೂ ಪರಿಶೀಲಿಸಿ ನೋಡಿದರು. ಅದೇ ನಿದ್ರಾಸ್ವಯಂಸೇವಕರನ್ನು ನಿರಂತರ ಐದು ರಾತ್ರಿಗಳ ವರೆಗೆ, ಕನಸುಗಳಿಲ್ಲದ ಸಮಯಗಳಲ್ಲಿ ಅಷ್ಟೇ ಸಲ ಎಚ್ಚರಿಸಿ ಅಷ್ಟೇ ಹೊತ್ತು ಎಚ್ಚರದಲ್ಲಿರಿಸಿದರು. ಅವರ ಹಗಲಿನ ವರ್ತನೆಯಲ್ಲಿ ಹೇಳಿಕೊಳ್ಳುವ ಯಾವ ಬದಲಾವಣೆಯೂ ಆಗಲಿಲ್ಲ.

ಡಾ. ಡಿಮೆಂಟರು ಒಟ್ಟು ಮೂರು ಶ್ರೇಣಿಗಳಲ್ಲಿ ಈ ಪ್ರಯೋಗಗಳನ್ನು ಮಾಡಿ ಸಂಶಯಗಳನ್ನು ನಿವಾರಿಸಿಕೊಂಡರು. ಒಂದುರಾತ್ರಿಯಲ್ಲಿ ಸಾಮಾನ್ಯವಾಗಿ ನಾಲ್ಕೈದು ಕಂತುಗಳಲ್ಲಿ ಒಟ್ಟು ಎರಡು ತಾಸುಗಳಷ್ಟು ಕಾಲ ಜನರು ಕನಸು ಕಂಡು ಉಳಿದ ಸಮಯದಲ್ಲಿ ನಿಃಸ್ವಪ್ನ ನಿದ್ರೆಯನ್ನನುಭವಿಸುತ್ತಿರುತ್ತಾರೆ. ಆದರೆ ಸ್ವಪ್ನಭಂಗ ಮಾಡುತ್ತ ಹೋದಾಗ ಒಂದೇ ರಾತ್ರಿ ಹತ್ತು ಹದಿನೈದು ಸಲ ಕನಸು ಪ್ರಾರಂಭವಾದುದುಂಟು. ಐದು ದಿನದ ಸ್ವಪ್ನಭಂಗ ಮುಗಿದು ಇಚ್ಛಾನುಸಾರ ಕನಸು ಕಾಣಲು ಅವಕಾಶ ಸಿಕ್ಕಿದೊಡನೆ ಭಗ್ನಸ್ವಪ್ನಿಗಳು ರಾತ್ರಿಯೆಲ್ಲ ಕನಸು ಕಂಡು ಕಳೆದುಹೋದ ಕನಸಿನ ಸಂದರ್ಭಗಳನ್ನು ತುಂಬಿಕೊಂಡರು. ಆಮೇಲೆ ಅವರ ಮಿತಿಮೀರಿದ ಹಸಿವು ತಾನಾಗಿ ಕುಂದಿ ನಿತ್ಯಸ್ಥಿತಿಗೆ ಬಂತು.

ಕನಸುಗಳು ನಮ್ಮ ಪ್ರಕೃತಿಯ ಎಷ್ಟು ಮಹತ್ವದ ಹಂಬಲಗಳೆಂದು ಇದರಿಂದ ವ್ಯಕ್ತವಾಗುತ್ತದೆ ಕನಸು ಕಾಣುವಾಗ ನಮ್ಮ ಕಣ್ಣುಗುಡ್ಡೆಗಳು ಮಾತ್ರವಲ್ಲದೆ ನಮ್ಮ ಮಿದುಳಿನ ತರಂಗಗಳೂ ಒಂದು ವಿಶಿಷ್ಟ ಕ್ರಮದಲ್ಲಿ ಏಳುಬೀಳುತ್ತವೆ. ಇದನ್ನನುಸರಿಸಿ ಪರೀಕ್ಷಿಸಿದಾಗ ಹಸುಕೂಸುಗಳು ಮತ್ತು ಬೆಕ್ಕಿನಂಥ ಪ್ರಾಣಿಗಳು ಕೂಡ ಕನಸು ಕಾಣುತ್ತವೆಂಬ ಬಲವಾದ ನಂಬಿಕೆ ಡಾ. ಡಿಮೆಂಟರಲ್ಲಿ ಮೂಡಿದೆ.

ಇದೆಲ್ಲದರ ಅರ್ಥವೇನು? ಫ್ರಾಯ್ಡ್ ಮತ್ತು ಇತರ ಮನೋವಿಜ್ಞಾನಿಗಳು, ಕನಸುಗಳು ನಮ್ಮ ಅತೃಪ್ತ ಕಾಮನೆಗಳನ್ನು ಪೂರೈಸಿಕೊಳ್ಳುವ ಒಂದು ಸಾಧನವೆಂದು ಹೇಳುತ್ತ ಬಂದಿದ್ದಾರೆ. ಭಯ ಅಥವಾ ಲಜ್ಜೆಯ ಮೂಲಕ, ಮನಸ್ಸಾಕ್ಷಿಯ ಆಕ್ಷೇಪದ ಮೂಲಕ, ನಮ್ಮ

# ಎರಡು ವರ್ಗಗಳು

ಒಮ್ಮೆ ಹಡ್ಡರ್ಸ್‌ಫೀಲ್ಡಿನ ಕಾರ್ಮಿಕರನ್ನು ಉದ್ದೇಶಿಸಿ ಕಾಬ್ಡನ್ ಮಹಾಶಯರು ಹೇಳಿದರು: "ಈ ಜಗತ್ತು ಎರಡು ವರ್ಗದ ಜನರಿಂದ ಕೂಡಿಕೊಂಡಿರುವುದು;-ಉಳಿಸುವವರು ಮತ್ತು ವ್ಯಯಿಸುವವರು. ಒಂದು ವರ್ಗ ಮಿತವ್ಯಯ ಮಾಡುವವರದು, ಉಳಿತಾಯಗಾರರದು. ಇನ್ನೊಂದು ಮನಬಂದಂತೆ ವೆಚ್ಚ ಮಾಡುವವರದು, ದುಂದುಗಾರರದು. ಮಾನವರನ್ನು ನಾಗರಿಕರನ್ನಾಗಿ ಸುಖಜೀವಿಗಳನ್ನಾಗಿ ಮಾಡಲು ನೆರವಾಗುವ ಮನೆ ಮಂದಿರ, ಕಾರ್ಖಾನೆ, ಕರ್ಮಶಾಲೆ, ಸಂಕಸೇತುವೆ, ಹಡಗ, ವಿಮಾನ ಇತ್ಯಾದಿ ಸಾಧನಗಳೆಲ್ಲವೂ ಈ ಮೊದಲ ವರ್ಗದ ಜನರ ಸಾಧನೆಗಳು. ಹಣವನ್ನು ಪೋಲು ಮಾಡುವವರು ಯಾವಾಗಲೂ ಅಸಂತುಷ್ಟಿಗಳಾಗಿ, ಈ ಮೊದಲನೆಯ ವರ್ಗದ ಜನರ ದಾಸರಾಗಿ ಎಂಬಂತೆ ಬಾಳಬೇಕಾಗುವುದು."

ಶಕ್ತಿಯ ಇತಿಮಿತಿಗಳ ಮೂಲಕ ನಮ್ಮ ಜಾಗ್ರತ ಜೀವನದಲ್ಲಿ ನಮ್ಮ ಅಸಂಖ್ಯ ಇಚ್ಛೆಗಳು ಅತೃಪ್ತವಾಗಿ ಉಳಿಯುತ್ತವೆ, ಇಲ್ಲವೆ ಹತ್ತಿಕ್ಕಲ್ಪಡುತ್ತವೆ. ಆದರೆ ಕನಸಿನಲ್ಲಿ ನೀವು ನಿಮ್ಮಿಚ್ಛೆಯಂತೆ ಕೊಲ್ಲಬಲ್ಲಿರಿ, ಪ್ರೀತಿಸಬಲ್ಲಿರಿ, ವೀರರಾಗಬಲ್ಲಿರಿ. ಹೀಗೆ ಕನಸಿನ ನೆರವಿನಿಂದ ಅಪಾಯವಿಲ್ಲದೆ ಇಚ್ಛೆಗಳನ್ನು ಪೂರೈಸಿಕೊಂಡು ಮರುದಿನ ನೀವು ಹೆಚ್ಚು ಸಂತುಷ್ಟಿಯಿಂದ ಜೀವನವನ್ನಾರಂಭಿಸಬಲ್ಲಿರಿ.

ಡಾ. ಡಿಮೆಂಟರ ಪ್ರಯೋಗಗಳು ಈ ಊಹೆಯನ್ನು ನಿರೀಕ್ಷಿಸಿದ್ದಕ್ಕಿಂತ ಬಲವಾಗಿಯೇ ದೃಢೀಕರಿಸುತ್ತವೆನ್ನಬಹುದು. ಪ್ರತಿ ರಾತ್ರಿ ಒಂದಿಷ್ಟು ಅವಧಿಯ ವರೆಗೆ ಕನಸು ಕಾಣುವುದು ನಿಮ್ಮ ಬುದ್ಧಿ ಸ್ತಿಮಿತದಲ್ಲಿರಲು ಅತ್ಯಗತ್ಯ. ದೀರ್ಘಕಾಲ ಕನಸು ಇಲ್ಲದಿದ್ದರೆ ಎಚ್ಚರದಲ್ಲೇ "ಕನಸು" ಬೀಳಲಾರಂಭಿಸುತ್ತದೆ. ಅಂದರೆ ನಿಮ್ಮ ಬುದ್ಧಿ ಸತ್ಯದಿಂದ ಕಲ್ಪನೆಯನ್ನು ಪ್ರತ್ಯೇಕಿಸುವ ಸಾಮರ್ಥ್ಯವನ್ನು ಕಳೆದುಕೊಳ್ಳುತ್ತದೆ.

ಎಚ್ಚರದಲ್ಲೇ ಕನಸು ಕಾಣುವುದು ಮತ್ತು ಅದನ್ನು ನಿಜವೆಂದು ನಂಬುವುದು ಸಾಮಾನ್ಯ ಜೀವನದಲ್ಲಿ ಎರಡು ವಿಶಿಷ್ಟ ಸಂದರ್ಭಗಳಲ್ಲಿ ಸಾಧ್ಯವಿರುವುದು ಅನುಭವಕ್ಕೆ ಬಂದಿದೆ. ಒಂದು, ಅತಿಯಾಗಿ ದೀರ್ಘಕಾಲ ಮದ್ಯ ಅಥವಾ ಇತರ ಅಮಲು ಪದಾರ್ಥಗಳನ್ನು ಸೇವಿಸಿದಾಗ. ಇನ್ನೊಂದು, ದೀರ್ಘವಾಗಿ ನಿದ್ದೆಗೆಟ್ಟಾಗ.

ಇವೆರಡು ಅವಸ್ಥೆಗಳಲ್ಲಿಯೂ ಉಂಟಾಗುವ ಭ್ರಾಂತಿಗಳು ಕನಸಿನ ಅಭಾವದಿಂದಲೇ ಇರಬಹುದೆಂದು ವಿಜ್ಞಾನಿಗಳೀಗ ಸಂಶಯಪಡುತ್ತಿದ್ದಾರೆ. ಅಮಲು ಪದಾರ್ಥಗಳ ಸೇವನೆಯು ನಿದ್ರೆಯಲ್ಲಿ ಕನಸಿನ ಚಟುವಟಿಕೆಗಳಿಗೆ ಆತಂಕ ಮಾಡುತ್ತದೆಂಬ ಅಂಶ ಸಿದ್ಧವಾಗಿದೆ. ಕನಸುಗಳು ಮೊಟಕುಗೊಳಿಸಲ್ಪಟ್ಟದ್ದರಿಂದಲೇ ಅಂಥವರಿಗೆ ಎಚ್ಚರದಲ್ಲಿ ಭ್ರಾಂತಾವಸೆಯುಂಟಾಗುತ್ತಿರಬಹುದೆ?

ಬಹುಕಾಲ ನಿದ್ದೆಗೆಟ್ಟವರಿಗೂ ಹಾಗಾಗುತ್ತದೆ. ನಿದ್ದೆಗೆಟ್ಟಿದ್ದಕ್ಕಿಂತಲೂ ಕನಸುಗೆಟ್ಟದ್ದರಿಂದಲೇ ಇಲ್ಲದ್ದು ಕಾಣಿಸುವುದು, ಕೇಳಿಸುವುದೇ ಮೊದಲಾದ ಭ್ರಾಂತಿವಿಲಾಸಗಳು ಅವರಿಗೊದಗುತ್ತಿರಬಹುದು. ನಿದ್ದೆಗಿಂತ ಕನಸೇ ಮಹತ್ವದ್ದೆಂದು ಡಿಮೆಂಟರ ಪ್ರಯೋಗಗಳಿಂದ ಸೂಚಿತವಾಗುತ್ತದೆ.

ಐದು ರಾತ್ರಿಗಳ ವರೆಗೆ ಸಂತತವಾಗಿ ಕನಸುಗೇಡಾದರೆ ಮನುಷ್ಯನಿಗೆ ಶಾಶ್ವತವಾದ ಯಾವ ಅಪಾಯವೂ ಆಗಲಾರದೆಂದು ಡಿಮೆಂಟರ ಸಹಕಾರಿ ಮನೋವೈಜ್ಞಾನಿಕ ಡಾ. ಫಿಶರರು ಅಭಿಪ್ರಾಯಪಟ್ಟಿದ್ದಾರೆ. ಅದಕ್ಕೂ ದೀರ್ಘಕಾಲ ಕನಸುಗೆಟ್ಟರೆ ಗಂಭೀರವಾದ ದುಷ್ಪರಿಣಾಮವಾಗುವ ಭಯವಿದೆ. ಕನಸುಗೇಡು ಮನೋವಿಕಾರದಲ್ಲಿ ಪರಿಣಮಿಸಬಹುದು.

ಇದು ಕನಸಿನ ಮೋಹಕ ಪ್ರಪಂಚದ ಒಂದಂಶದ ಪರೀಕ್ಷೆ ಮಾತ್ರ. ಅತೃಪ್ತಕಾಮನೆಗಳ ಪೂರ್ತಿಯೊಂದೇ ಅದರ ಧ್ಯೇಯವಲ್ಲೆಂಬುದಕ್ಕೆ ಪ್ರಮಾಣಗಳಿವೆ. ಅದು ನಮ್ಮ ಪ್ರಜ್ಞಾವಸೆಯ ಹೊರಗಿನ ಅಜ್ಞಾತ ಜಗತ್ತಿನೊಡನೆ ಹೇಗೋ ನಮಗೆ ಸಂಪರ್ಕವನ್ನು ಸಾಧಿಸುವಂತಿದೆ. ನಮ್ಮ ಸುಪ್ತಚೇತನದ ಅಂಧಕಾರದಲ್ಲಿ ಹುದುಗಿದ ಅಜ್ಞಾತ ಶಕ್ತಿಗಳನ್ನು ಅದು ಮೇಲಕ್ಕೆ ತರುವಂತೆಯೂ ಕಾಣುತ್ತದೆ. ರಾಮಾನುಜನ್ ಅತ್ಯಂತ ಜಟಿಲ ಗಣಿತ ಸಮಸ್ಯೆಗಳನ್ನು ಕನಸಿನಲ್ಲಿ ಬಿಡಿಸುತ್ತಿದ್ದ. ಕೋಲರಿಜ್ ಕವಿ ತನ್ನ ಕವಿತೆಯೊಂದನ್ನು ಕನಸಿನಲ್ಲೆ ಕಟ್ಟಿದನು. ಸಂಗೀತಗಾರ ಜೋಸೆಫ್ ಟಾರ್ಟಿನಿಗೆ ಅವನ ಪ್ರಸಿದ್ಧ Devil's Trill ಎಂಬ ಸೊನಾಟಾವೊಂದರ ಸ್ವರಪ್ರಸ್ತಾರ ಕನಸಿನಲ್ಲೇ ಹೊಳೆಯಿತಂತೆ.

ಕನಸಿನ ಸಂಶೋಧನೆ ಮಾನವನ ಅಂತರಂಗದ ಕಾಮನೆಗಳ ಸ್ವರೂಪವನ್ನಷ್ಟೇ ಅಲ್ಲ, ಅದರ ಕಲಾತ್ಮಕ, ಜ್ಞಾನಾತ್ಮಕ ಪ್ರೇರಣೆಗಳ ತಿಳಿವಳಿಕೆಯನ್ನೂ ಹೆಚ್ಚಿಸಬಹುದು. *



ಕಳ್ಳ ಪರೀಕ್ಷೆಯಲ್ಲಿ ಪಾಸಾಗಿ ಬಿಟ್ಟಿದ್ದ

# ಕಳವಿನ ಕಥೆ

ಮೂಲ ಜರ್ಮನ್ : ಹೇಂರ್‍ಛ್ ರಿಸ್

ಕೆಲಸದಾಕೆ ಬಾಗಿಲನ್ನು ತೆರೆದಳು. ಬಾಗಿಲಲ್ಲಿ ಇಳಿವಯಸ್ಸಿನ ಅಪರಿಚಿತನೊಬ್ಬ ನಿಂತಿದ್ದ. ಆತ ಅವಳನ್ನು ಕಂಡೊಡನೆ ತಲೆಯ ಮೇಲಿನ ಹ್ಯಾಟು ತೆಗೆದ. ವಿದೇಶದವ ಎಂದು ಕೆಲಸದಾಕೆ ಮನದಲ್ಲೆ ಅಂದುಕೊಂಡಳು. ಅವನ ಉಡುಪು ಈ ದೇಶದವರಂತಿರಲಿಲ್ಲ—ವಿಶೇಷತಃ ಆ ನೆಕ್‌ಟೈ; ಅದು ರಬ್ಬು ಬಣ್ಣದ್ದಾಗಿತ್ತು.

"ಏನು ಬೇಕು ?" ಕೆಲಸದಾಕೆ ಕೇಳಿದಳು.

"ಮಿ. ನಿಸಿಂಗರೊಡನೆ ಮಾತಾಡಬೇಕಾಗಿದೆ. ಅವರಿನ್ನೂ ಇಲ್ಲಿಯೇ ಇರುತ್ತಾರೆ ಅಲ್ಲವೆ ?"

"ಹೌದು. ಇರುತ್ತಾರೆ. ಆದರೆ ನೀವು ಅವರೊಡನೆ ಮಾತಾಡಲಾರಿರಿ."

"ಮಾತಾಡಲಾರೆ ?" ಆ ಗೃಹಸ್ಥ ಆಶ್ಚರ್ಯದಿಂದ, ಸಂದಿಗ್ಧದಲ್ಲಿ ಬಿದ್ದವರಂತೆ ನುಡಿದ. "ಮಿ. ನಿಸಿಂಗ್ ಏನಾದರೂ ಸತ್ತು ಹೋಗಿಲ್ಲವಷ್ಟೆ ? ಅವರೇನಾದರೂ ಪ್ರವಾಸಕ್ಕೆ ಹೋಗಿದ್ದಾರೆಯೆ ?"

ಕೆಲಸದಾಕೆ ತುಸು ಸಂಕೋಚಪಟ್ಟುಕೊಂಡೇ ಹೇಳಿದಳು. "ಇಲ್ಲ. ಮಿ. ನಿಸಿಂಗರು ಸತ್ತೂ ಇಲ್ಲ, ಪ್ರವಾಸಕ್ಕೂ ಹೋಗಿಲ್ಲ. ಅವರು

'ಸ್ಕಾಲಾ' ದಿಂದ

ಈ ನಿಮಿಷದಲ್ಲಿ ಸ್ನಾನಮಾಡುತ್ತಿದ್ದಾರೆ, ಅಷ್ಟೆ."

"ಸರಿ. ಈಗ ಸರಿಹೋಯಿತು. ಅವರ ಸ್ನಾನ ಮುಗಿಯುವ ವರೆಗೂ ಕಾಯುತ್ತೇನೆ. ನಾನು ಅವರ ಕಚೇರಿ ಕೋಣೆಯಲ್ಲಿ ಕೂಡ್ರುವೆ. ಬಲ ಗಡೆಯ ಆ ಮೊದಲನೆ ಕೋಣೆ ತಾನೇ ಅವರ ಕಚೇರಿ ?"

ಆ ಗೃಹಸ್ಥ ಒಳಗೆ ಬಂದರು. "ಈ ಮನೆಯ ಪರಿಚಯ ನಿಮಗೆ ಚೆನ್ನಾಗಿ ಇದ್ದಂತಿದೆ" ಕೆಲಸ ದಾಕೆ ಹೇಳಿದಳು.

"ಹೌದು, ಚೆನ್ನಾಗಿ ಬಲ್ಲೆ. ನಿಸಿಂಗರ ತಂದೆ ಈ ಮನೆಯನ್ನು ಕಟ್ಟಿಸುತ್ತಿದ್ದಾಗ ನಾನು ಇಲ್ಲಿಯೆ ಇದ್ದೆ. ಆಗ ನೀನಿನ್ನೂ ಬಹುಶಃ ಹುಟ್ಟಿ ದ್ದೆಯೋ ಇಲ್ಲವೋ ?"

"ಹೌದು."

"ಸರಿ" ಎಂದು ಆ ಗೃಹಸ್ಥ ಕಚೇರಿ ಕೋ-ಣೆಯ ಬಾಗಿಲು ತೆರೆಯುತ್ತ "ನನ್ನ ಹ್ಯಾಟನ್ನು ಗೂಟಕ್ಕೆ ತೂಗಹಾಕಬಹುದು. ಥ್ಯಾಂಕ್ಸ್" ಎಂದರು.

ಹ್ಯಾಟನ್ನು ಇಸಿದುಕೊಳ್ಳುತ್ತ ಕೆಲಸದಾಕೆ "ಮಿ. ನಿಸಿಂಗರು ಬರಲು ಒಂದಿಷ್ಟು ತಡವೇ ಆಗ ಬಹುದು. ಅವರು ಇದೇ ಈಗಷ್ಟೆ ಬಚ್ಚಲುಮನೆಗೆ ಹೋಗಿದ್ದಾರೆ" ಎಂದಳು.

"ಒಂದಿಷ್ಟು ತಡ! ಒಂದಿಷ್ಟು ಎಂದರೇನು? ನಾನು ಅವರನ್ನು ನೋಡದೆ ಮೂವತ್ತು ವರ್ಷ ಗಳಾಗಿ— ನಾನು ನಿಸಿಂಗರನ್ನು ಕೊನೆಯ ಬಾರಿ ಕಂಡಿದ್ದು ಮೂವತ್ತುಮೂರು ವರ್ಷ ನಾಲ್ಕು ತಿಂಗಳ ಹಿಂದೆ."

"ಆಂ!" ಕೆಲಸದಾಕೆ ಬಾಗಿಲನ್ನು ಮುಚ್ಚಿ ಕೊಂಡು ನಡೆದಳು.

ಆ ಗೃಹಸ್ಥ ಕೋಣೆಯ ಸುತ್ತು ಕಣ್ಣು ಹಾಯಿಸಿದರು. ಎಲ್ಲವೂ ಮೊದಲಿನಂತೆಯೇ ಇತ್ತು. ಕಾಲ ಯಾವುದನ್ನೂ ಬದಲು ಮಾಡಿರ ಲಿಲ್ಲ. ಆ ಮೇಜು, ಆ ಖುರ್ಚಿ— ಅದರ ಮೇಲಿನ ಚರ್ಮದ ಹೊದಿಕೆ ಮಾತ್ರ ಒಂದಿಷ್ಟು ಮಸುಕಾಗಿತ್ತು-ಎಲ್ಲ ಹಾಗೆಯೇ ಇದ್ದವು. ತಾನು ಎಲೆಲ್ಲಿಯೋ ಗಾಳಿಗೆ ಸಿಕ್ಕ ತರಗೆಲೆಯಂತೆ ಅಲೆದಾಡುತ್ತಿದ್ದಾಗ ಈ ಖುರ್ಚಿ ಮೇಜುಗಳನ್ನು ಪ್ರತಿ ವರ್ಷವೂ ಉಜ್ಜಿ-ತಿಕ್ಕಿ ಚೆನ್ನಾಗಿಡುತ್ತಿದ್ದ ರಲ್ಲ ಎಂಬ ವಿಚಾರ ಬಂದು ಆ ಗೃಹಸ್ಥ ಒಂದಿಷ್ಟು ಅಸ್ವಸ್ಥರಾದರು ಮತ್ತು ತಾನು ಹಿಂದೆ ಮಾಡಿದ್ದ ದುಷ್ಕೃತ್ಯವೊಂದು ಅವರ ವಿವೇಕವನ್ನು ಚುಚ್ಚು ತ್ತಲೇ ಇತ್ತು. ಅದು ಬರೀ ದುಷ್ಕೃತ್ಯವಾಗಿರದೆ ಹೀನ ಕಾರ್ಯವೂ ಆಗಿತ್ತು.

ಅವರು ಆ ಮೇಜನ್ನು ನೋಡಿದರು. ಅದರ ನಡುವಿನ ಕಣಕ್ಕೆ ಇದ್ದ ಸಡಿಲಾದ ಹಿಡಿಕೆ ಅವರು ಬೀಗದ ಕೈ ತಿರುವಿದಾಗ ಸಪ್ಪಳ ಮಾಡಿತ್ತು. ಈಗ ಆ ಹಿಡಿಕೆಯ ಸ್ಕ್ರೂ ತಿರುಗಿಸಿ ಬಲವಾಗಿ ಕೂಡ್ರಿಸಿ ದ್ದರು. ಬೀಗದ ಕೈ ಈಗಲೂ ಕಣಕ್ಕೆ ಹಾಕಿ ಕೊಂಡೇ ಇತ್ತು- ಮೊದಲಿನಂತೆಯೆ. ಏನೂ ಬದ ಲಾವಣೆ ಇಲ್ಲ. ಆದರೆ ಇಂದು ನಡೆಯಲಿರುವು ದಕ್ಕೂ ಇವೆಲ್ಲವಕ್ಕೂ ಸಂಬಂಧವಾದರೂ ಏನು? ಮೂವತ್ತುಮೂರು ವರ್ಷ ನಾಲ್ಕು ತಿಂಗಳ ಹಿಂದೆ ಅವರು ಇದೇ ಕೀಲೀಕೈಯನ್ನು ಕೈಯಲ್ಲಿ ಹಿಡಿದಿದ್ದರು. ಘಟನೆಗಳ ಪುನರಾವೃತ್ತಿಯಾಗು ವುದೂ ಎಂಥ ವಿಚಿತ್ರ ! ಹಠಾತ್ತಾಗಿ ಈಗಲೂ ತಾನು ಆ ಕೀಲಿಕೈ ಹಿಡಿದಿರುವುದು ಆ ಗೃಹಸ್ಥರ ಗಮನಕ್ಕೆ ಬಂತು. ಅವರು ಅದನ್ನು ತಿರುಗಿಸ ತೊಡಗಿದ್ದರು. ಆದರೆ ಇಂದು ಅವರು ಮಾಡುವ ಕಾರ್ಯಕ್ಕೆ ಗೌಪ್ಯದ ಅಗತ್ಯವೇನೂ ಇರಲಿಲ್ಲ. ಅವರು ಎಲ್ಲವನ್ನೂ ಇಂದು ಬಹಿರಂಗವಾಗಿ ಪ್ರಾಮಾಣಿಕವಾಗಿ, ಮುಚ್ಚುಮರೆಯಿಲ್ಲದೆ ಒಪ್ಪಿ ಕೊಳ್ಳಲಿದ್ದರು— ತಪ್ಪು ಮಾಡಿದ್ದೇನೆ, ಅದರ ಪ್ರಾಯಶ್ಚಿತ್ತವಾಗಬೇಕು ಎಂಬ ಒಂದೇ ಒಂದು ಕಲ್ಪನೆಯಿಂದ.

ಆದರೆ ಹಾಗಾಗುವುದು ಬರೆದಿಲ್ಲವೇನೊ? ಅವರು ಕೀಲಿಕೈ ತಿರುಗಿಸಿದರು. ಕಣ ತೆರೆ ಯಿತು. ಅದರಲ್ಲಿರುವ ವಸ್ತುಗಳನ್ನು ಅಚ್ಚುಕ ಟ್ಟಾಗಿ ಇಟ್ಟಿದ್ದರು ಎಡಗಡೆಗೆ ಎರಡು ಜಮಾ ಖರ್ಚಿನ ಪುಸ್ತಕಗಳಿದ್ದವು. ನಡುವೆ ಚೆಕ್ ಬುಕ್‌ಗಳೂ ಬ್ಯಾಂಕ್ ಕಾಗದ ಪತ್ರಗಳೂ




# ಲೈಫ್‌ಬಾಯ್ ಎಲ್ಲಿದೆಯೋ ಅಲ್ಲಿದೆ ಆರೋಗ್ಯ!

ಆಹಾ! ಲೈಫ್‌ಬಾಯ್‌ಯಿಂದ ಮಾಡುವ ಸ್ನಾನ ಎಷ್ಟು ಆನಂದಕರ!
● ಸ್ವಚ್ಛತೆ, ಆರೋಗ್ಯ, ಉಲ್ಲಾಸ . . . ನಿಶ್ಚಯವಾಗಿಯೂ ನಿಮಗೆ ಸಂತೃಪ್ತಿಯುಂಟಾಗುವುದು!
ಆಟವಾಡುವಾಗಲೂ, ಕೆಲಸ ಮಾಡುವಾಗಲೂ ನಮ್ಮ ಮೈಕೈಗಳಿಗೆ ಕೊಳೆ ತಗಲುತ್ತದೆ. ಇದರಿಂದ ತಪ್ಪಿಸಿಕೊಳ್ಳಲು ಯಾರಿಂಗೂ ಸಾಧ್ಯವಿಲ್ಲ. ಲೈಫ್‌ಬಾಯ್‌ಯ ಸಮೃದ್ಧ ನೊರೆ ಕೊಳೆಯಲ್ಲಿರುವ ಕ್ರಿಮಿಗಳನ್ನು ತೊಳೆದು ತೆಗೆಯುತ್ತದೆ ಮತ್ತು ಆರೋಗ್ಯವನ್ನು ರಕ್ಷಿಸುತ್ತದೆ. ನೀವೂ ನಿಮ್ಮ ಮನೆಯುವರೆಲ್ಲರೂ ಇಂದಿನಿಂದಲೇ ಲೈಫ್‌ಬಾಯ್ ಉಪಯೋಗಿಸುವ ಅಭ್ಯಾಸವನ್ನು ಏಕೆ ಇಟ್ಟುಕೊಳ್ಳಬಾರದು?

L. 16-X29 KN

ಹಿಂದುಸ್ಥಾನ್ ಲೀವರ್ ಅವರ ತಯಾರಿಕೆ.

ಇದ್ದವು. ಬಲಗಡೆಗೆ ಸರಿಯಾಗಿ ಜೋಡಿಸಿ ಕಟ್ಟಿಟ್ಟ ಬ್ಯಾಂಕ್ ನೋಟುಗಳ ಕಟ್ಟುಗಳು ಇದ್ದವು. ಹಿಂದಿನಂತೆಯೆ ಈಗಲೂ ಅಲ್ಲಿ ಕೈ ಹಾಕಿದರೆ ಸಾಕಿತ್ತು. ನಿಸಿಂಗ್ ಎಂದಾದರೂ ಹಣವನ್ನು ಎಣಿಸಿಡುತ್ತಿದ್ದರೇ ಎಂಬುದು ಸಂದೇಹದ ಮಾತೇ ಆಗಿತ್ತು. ವಿದೇಶದಿಂದ ಬಂದ ಈ ಆಗಂತುಕನಿಗೆ ಎಲ್ಲವನ್ನೂ ಒಪ್ಪಿಕೊಳ್ಳಬೇಕೆಂದಿತ್ತು. ಆದರೆ ಈಗ ಅದಕ್ಕೂ ಸುಲಭವಾದ ಒಂದು ಹಾದಿ ಕಾಣಿಸಿತು. ಹಾಗೆ ನೋಡಿದರೆ ಮೂವತ್ತುಮೂರು ವರ್ಷ ನಾಲ್ಕು ತಿಂಗಳು ಎಂದರೇನು? ಒಂದು ದಿನಕ್ಕಿಂತಲೂ ಕಡಿಮೆ. ಮೇಜಿನ ಕಣದಲ್ಲಿದ್ದ ಹಣವನ್ನು ನೀವು ಮುಂಜಾನೆ ತೆಗೆದುಕೊಂಡು ಮಧ್ಯಾಹ್ನ ತಿರುಗಿ ಇಡುತ್ತೀರಿ. ಆಗಂತುಕ ತನ್ನ ಕಿಸೆಯಿಂದ ನೋಟುಗಳ ಕಟ್ಟೊಂದನ್ನು ತೆಗೆದು ಅವಸರದಿಂದ ಎಣಿಸಿದರು. ಅಸಲು ಮತ್ತು ಬಡ್ಡಿ — ಮೂರು ಸಾವಿರ ಎಂದುಕೊಂಡು ಅಷ್ಟನ್ನು ಇಟ್ಟುಕೊಂಡು ಉಳಿದ ನೋಟುಗಳನ್ನು ಕಿಸೆಗೆ ಸೇರಿಸಿದರು. ಆದರೆ ಅವರು ಆ ಮೂರು ಸಾವಿರದ ನೋಟುಗಳನ್ನು ಕಣದೊಳಗೆ ಕೂಡಲೆ ಇಡಲಿಲ್ಲ. ಮಾಡಿದ್ದ ದುಷ್ಕೃತ್ಯದ ಪರಿಹಾರ ಇಷ್ಟು ಸುಲಭದಲ್ಲಿ ಆಗದು ಎಂದು ಅವರು ಯೋಚಿಸುತ್ತಿದ್ದ ಹಾಗೆ ಹೊರಗೆ ಪಡಸಾಲೆಯಲ್ಲಿ ಹೆಜ್ಜೆಯ ಸಪ್ಪಳ ಕೇಳಿಸಿತು. ಒಂದು ನಿರ್ಣಯಕ್ಕೆ ಬರುವುದು ಈಗ ಅಗತ್ಯವಾಯಿತು. ಅವರು ಕೂಡಲೇ ಕೈಲಿದ್ದ ನೋಟುಗಳನ್ನು ಕಣದಲ್ಲಿದ್ದ ನೋಟುಗಳ ಬುಡದಲ್ಲಿ ಇಟ್ಟು ಕಣವನ್ನು ಮುಚ್ಚಿದರು.

ಮರುಕ್ಷಣದಲ್ಲಿ ಒಳಗೆ ಬಂದು ನಿಸಿಂಗ್ ಅತಿಥಿಯನ್ನು ಕೂಡಲೇ ಗುರುತಿಸಿ "ಓಹೋ! ನೀವೇ? ನಿಮ್ಮನ್ನು ಕಂಡು ಬಲು ಆನಂದವಾಯಿತು. ವಿದೇಶದಲ್ಲಿ ವಾಸಿಸುತ್ತಿದ್ದೀರಿ, ಅಲ್ಲವೆ? ಜಯಶಾಲಿಗಳೂ ಆಗಿದ್ದೀರಂತೆ. ನಿಮ್ಮ ಕಾರಖಾನೆಯಲ್ಲಿದ್ದ ಒಬ್ಬರು ನನಗೆ ಭೆಟ್ಟಿಯಾಗಿದ್ದರು. ಮತ್ತೆ ನೀವು ಮಾತ್ರ ನನಗೆ ಒಮ್ಮೆಯೂ ಒಂದು ಸಾಲು ಕೂಡ ಬರೆಯಲಿಲ್ಲ" ಎಂದರು.

"ಬರೆಯಲಿಲ್ಲ."

"ಮೊದಲು ಕಷ್ಟನಿಷ್ಠುರಗಳನ್ನು ಎದುರಿಸಿದಿರಿ ಅಲ್ಲವೆ? ಆದರೆ ಅದೆಲ್ಲ ಈಗ ಗತಕಾಲದ ಕಥೆ ತಾನೆ? ಕೆಲವು ದಿನ ಇಲ್ಲಿರುತ್ತೀರಿ ಎಂದು ತಿಳಿದಿದ್ದೇನೆ. ಹಾದು. ನನ್ನ ಅತಿಥಿಯಾಗಿಯೆ ಇರಬೇಕು. ಮನೆಯಲ್ಲಿ ಬೇಕಷ್ಟು ಜಾಗೆಯಿದೆ."

ಆಗಂತುಕ ಹೇಳಿದರು: "ಇಲ್ಲ. ನಿಜವಾಗಿಯೂ ನಾನು ನಾಳೆಯೆ ಹೊರಡಬೇಕು. ಹಡಗು ನಾಳೆಯೆ ಹೊರಡುತ್ತದೆ. ಮೊದಲು ನನ್ನ ಬಳಿ ಬೇಕಷ್ಟು ಸಮಯವಿರುತ್ತಿತ್ತು. ಈಗ ಹಣವಿದೆ. ಬಹುಶಃ ಇವೆರಡೂ ಏಕಕಾಲದಲ್ಲಿ ಒಬ್ಬನ ಬಳಿ ಇರದಿರುವುದೇ ಜಗತ್ತಿನ ನಿಯಮವೆಂದು ಕಾಣುತ್ತದೆ. ದಯವಿಟ್ಟು ಅನ್ಯಥಾ ಭಾವಿಸಬೇಡಿ. ನಿಮ್ಮನ್ನು ಒಮ್ಮೆ ಕಂಡು ಹೋಗಬೇಕು, ಒಂದು ಐದು ನಿಮಿಷವೇ ಆಗಲಿ, ನಿಮ್ಮೊಡನೆ ಮಾತನಾಡಿದರೆ ನನಗೆ ಸಂತೋಷವಾಗುವುದು ಎಂದು ಬಂದೆ. ನಿಮ್ಮನ್ನು ಕಂಡು ನಿಮ್ಮ ಕ್ಷಮೆ ಕೇಳಬೇಕು ಎಂಬುದೇ. . . ."

ನಿಸಿಂಗ್ ನಕ್ಕರು. "ಕ್ಷಮೆ ಕೇಳುತ್ತೀರಾ? ವಿಚಿತ್ರರಿದ್ದೀರಿ. ಕಾಗದ ಬರೆಯಲಿಲ್ಲ ಎಂದ ಮಾತ್ರಕ್ಕೆ ಕ್ಷಮೆ ಕೇಳುವುದೇ? ನನ್ನ ನಿಮ್ಮ ಸ್ನೇಹ ಪತ್ರವ್ಯವಹಾರವನ್ನೆಂದೂ ಅವಲಂಬಿಸಿರಲಿಲ್ಲ."

ಆಗಂತುಕನ ಬೆನ್ನು ಚಪ್ಪರಿಸುತ್ತ ನಿಸಿಂಗರು "ನಡೆಯಿರಿ. ಒಂದು ಗ್ಲಾಸು ಮದ್ಯ ಕುಡಿಯೋಣ" ಎಂದರು. ಹಾ, ಬೇಲಿಯ ಬಳಿಯೇನೊ ಬಂದಿದ್ದೆ, ಆದರೆ ಜಿಗಿಯುವ ಧೈರ್ಯವಾಗಲಿಲ್ಲ ಎಂದು ಆಗಂತುಕ ಯೋಚಿಸಿದರು. ಇಬ್ಬರೂ ಮಗ್ಗಲಿನ ಕೋಣೆಗೆ ಹೋದರು.

"ಲಗ್ನ ಮಾಡಿಕೊಂಡಿದ್ದೀರಾ?" ಆಗಂತುಕ ಪ್ರಶ್ನಿಸಿದ.

"ಆಗಿದ್ದೆ. ಹತ್ತು ವರ್ಷಗಳ ಹಿಂದೆ ಹೆಂಡತಿ ಸತ್ತಳು. ಮತ್ತೆ ನೀವು?"

"ನಾನು ಒಂಟಿಗ. ಮಕ್ಕಳಿದ್ದಾರೆಯೆ?"

"ಒಬ್ಬನೇ ಮಗನಿದ್ದಾನೆ. ೨೨ ವರ್ಷ ಅವ

ನಿಗೆ."

"ಇಪ್ಪತ್ತೆರಡು. ಅವಕಾಶಗಳ ಸಂಧಿಕಾಲ."

"ಹೌದು. ಭವಿಷ್ಯಸೂಚಕ ಕಾಲ."

ಆಗಂತುಕ ಒಂದು ಕ್ಷಣಕಾಲ ಯೋಚಿಸಿ "ನೀವು ಹಾಗನ್ನುತ್ತೀರಾ? ಭವಿಷ್ಯದಲ್ಲಿ ಅವಿಶ್ವಾಸವಿರುವವರಂತೆ ಮಾತಾಡುವಿರಿ. ಕ್ಷಮಿಸಿ, ನಿಮ್ಮ ಧ್ವನಿಯಲ್ಲಿ ಏನೊ ಸಂದೇಹವಿದ್ದಂತೆ ಭಾಸವಾಯಿತು. ಬಹುಶಃ ನಾನು ತಪ್ಪು...."

"ಇಲ್ಲ ಇಲ್ಲ. ನಿಮ್ಮ ಕಲ್ಪನೆ ತಪ್ಪಿಲ್ಲ. ಆದರೆ ನಾನು ಈಗ ಖಂಡಿತವಾಗಿ ಏನನ್ನೂ ಹೇಳಲಾರೆ. ಕೆಲ ಸಮಯದ ನಂತರ ಹೇಳಬಲ್ಲೆನೇನೋ! ಎಲ್ಲವೂ ನಡೆಯಲಿರುವ ಪರೀಕ್ಷೆಯನ್ನವಲಂಬಿಸಿದೆ. ಆತ ಅದರಲ್ಲಿ ಪಾಸಾಗುತ್ತಾನೊ ಎಂಬುದನ್ನು— ನಾನು ನನ್ನ ಮಗನನ್ನು ಪರೀಕ್ಷಿಸುತ್ತಿದ್ದೇನೆ ಎಂಬುದು ನಿಮ್ಮ ಗಮನಕ್ಕೆ ಬಂತು ತಾನೆ?"

"ಆಂ! ಎಂಥ ಪರೀಕ್ಷೆ."

ನಿಸಿಂಗ್ ತಮ್ಮ ಖುರ್ಚಿಯಲ್ಲಿ ಒರಗಿದರು. "ನಾನು ಇಷ್ಟು ಬೇಗನೆ ಅದರ ಬಗ್ಗೆ ಹೇಳಬೇಕೇ ಅಥವಾ ಫಲಿತಾಂಶ ಗೊತ್ತಾಗುವ ವರೆಗೂ ತಡೆಯಬೇಕೇ ಎಂಬುದು ತಿಳಿಯಲೊಲ್ಲದು. ಅಥವಾ ಇದರಲ್ಲಿ ಆಗುವ ಹಾನಿಯಾದರೂ ಏನು? ನಾವಿಬ್ಬರೂ ಒಳ್ಳೆಯ ಸ್ನೇಹಿತರು ತಾನೆ."

ನಿಸಿಂಗರ ಆತ್ಮೀಯಭಾವದಿಂದ ಸಂಕೋಚಗೊಂಡ ಆಗಂತುಕ, "ಹೌದು. ಒಳ್ಳೆಯ ಸ್ನೇಹಿತರು" ಎಂದರು.

ನಿಸಿಂಗ್ ಒಮ್ಮೆಲೆ ಕೇಳಿದರು, "ನಿಮಗೆ ನೆನಪಿದೆಯೆ? ಈಗೆಷ್ಟೋ ವರ್ಷಗಳ ಹಿಂದೆ ನನ್ನ ಒಂದಿಷ್ಟು ಹಣ ಕಳವಾಗಿತ್ತು, ನೆನಪಿದೆಯೆ? ದೊಡ್ಡ ರಕಮೇನಲ್ಲ. ಸುಮಾರು ೧೦೦೦-೧೨೦೦ ಕ್ರೌನ್‌ಗಳಿರಬಹುದು ಅಷ್ಟೆ. ಆದರೆ ಆ ಕಾಲದಲ್ಲಿ ಅದೇ ನನ್ನಮಟ್ಟಿಗೆ ದೊಡ್ಡ ಗಂಟಾಗಿತ್ತು. ನನ್ನ ಮೊದಲನೆಯ ಶೋಧದಿಂದ ಬಂದ ಪ್ರಾಪ್ತಿಯಾಗಿತ್ತದು. ನಾನದನ್ನು ನನ್ನ ತಂದೆಯ ಮೇಜಿನಲ್ಲಿಟ್ಟಿದ್ದೆ. ಅವರು ಈ ಕಳವಾಗುವುದಕ್ಕೆ ಕೆಲ ದಿನ ಮೊದಲು ಸತ್ತಿದ್ದರು. ಛೆ! ಛೆ! ನಿಮಗೆ ಇದೆಲ್ಲ ಗೊತ್ತಿರಲಿಕ್ಕಿಲ್ಲ. ಅದಕ್ಕೂ ಮೊದಲೇ ನೀವು ವಿದೇಶಕ್ಕೆ ಹೋಗಿಬಿಟ್ಟಿದ್ದಿರಿ."

ಆಗಂತುಕರಿಗೆ ಗಂಟಲು ಒಣಗುತ್ತಿರುವಂತೆ ಭಾಸವಾಯಿತು. "ನೀವು ಹಣವನ್ನು ಕಣದಲ್ಲಿಟ್ಟಿದ್ದಿರಿ, ಬೀಗ ಹಾಕಿರಲಿಲ್ಲ, ಅಲ್ಲವೆ?"

"ಬೀಗ ಹಾಕಿದ್ದೆ."

"ಆದರೂ ಹಣ ಹೋಯಿತು."

"ಹೌದು. ಆದರೆ ಎಲ್ಲ ಅಲ್ಲ, ಅರ್ಧದಷ್ಟನ್ನು ಕಳ್ಳ ಬಿಟ್ಟುಹೋಗಿದ್ದ."

"ನೀವು ಯಾರ ಮೇಲಾದರೂ ಸಂಶಯ ತಾಳಿದಿರಾ?"

"ಮತ್ತೆ! ಆಗಿನ ನನ್ನ ಕೆಲಸದಾಕೆಯೆ ಕದ್ದಿರಬೇಕು ಎಂದು ತಿಳಿದೆ. ಅವಳ ವಿನಾ ಇನ್ನಾರಿಗೂ ಸಾಧ್ಯವಿರಲಿಲ್ಲ. ಅವಳನ್ನು ಕೆಲಸದಿಂದ ತೆಗೆದು ಹಾಕಿದೆ."

"ಕಾರಣ ಹೇಳಿದಿರೇನು?"

"ಇಲ್ಲ. ಅದರಿಂದೇನೂ ಪ್ರಯೋಜನವಾಗುವಂತಿರಲಿಲ್ಲ. ಅವಳು ಒಪ್ಪುತ್ತಿರಲಿಲ್ಲ. ನನ್ನ ಬಳಿ ಪುರಾವೆ ಇರಲಿಲ್ಲ."

"ಆ ಮೇಲೆ?"

"ಅಂದಿನಿಂದ ನಾನು ಒಂದಿಷ್ಟು ಸಂದೇಹ ಪ್ರಕೃತಿಯವನಾಗಿದ್ದೇನೆ. ನಾನು ಈಗಲೂ ಮೊದಲಿನ ರೀತಿಯಲ್ಲಿಯೆ ಹಣವಿಡುತ್ತಿರುವುದು ನಿಜವಾದರೂ ಇಡುವುದನ್ನು ಎಣಿಸಿ ಅದರ ಬಳಿ ಹೋಗುವ ಪ್ರತಿಯೊಬ್ಬನ ಮೇಲೂ ಕಣ್ಣಿಡುತ್ತೇನೆ. ಹೀಗೆ ಅವರನ್ನು ಪರೀಕ್ಷಿಸುತ್ತೇನೆ."

"ನಿಮ್ಮ ಮಗನನ್ನು ಕೂಡ!"

"ಹೌದು."

"ಅವನ ಪರೀಕ್ಷೆಗಾಗಿ ಎಂದು ಎಲ್ಲಿ ಹಣ ಇಡುತ್ತೀರಿ?"

"ಕಚೇರಿಕೋಣೆಯ ಮೇಜಿನ ಕಣದಲ್ಲಿ."

"ಅದರಲ್ಲಿರುವ ನೋಟುಗಳ ನಂಬರುಗಳನ್ನು ಬರೆದುಕೊಂಡಿರುವಿರಾ? ಎಷ್ಟಿದೆ ಎಂದು ಬರೆದಿಟ್ಟಿರುವಿರಾ?"

"ಇಲ್ಲ. ಆದರೆ ನನಗೆ ಎಲ್ಲ ಬಾಯಿಪಾಠವಿದೆ."

ಆಗಂತುಕ ಭುಜ ಹಾರಿಸಿದರು. "ಅಂಕೆಗಳು ಎಂದಮೇಲೆ ತಪ್ಪುಗಳು ಆಗೇ ಆಗುತ್ತವೆ."

ಅಷ್ಟರಲ್ಲಿ ಮುಂಬಾಗಿಲು ತೆರೆದ ಸದ್ದು ಕೇಳಿಸಿತು. "ನನ್ನ ಮಗ, ಇಂದು ಮಧ್ಯಾಹ್ನವನ್ನು ಸ್ನೇಹಿತರ ಜೊತೆ ಕಳೆಯುವುದಾಗಿ ನನಗೆ ಹೇಳಿದ್ದ. ನಾನೆಲ್ಲಿಯಾದರೂ ಹೊರಗೆ ಹೋಗುವೆನೆ ಎಂಬ ಆತನ ಪ್ರಶ್ನೆಗೆ ನಾನು ಉತ್ತರ ಕೊಡಲಿಲ್ಲ. ಕೆಲಸದಾಕೆಯನ್ನು ಇದೇ ಈಗ ಮನೆಗೆ ಕಳಿಸಿದ್ದೇನೆ. ಮನೆಯಲ್ಲಿ ನಾನಿಲ್ಲವೆಂದು ನನ್ನ ಮಗ ತಿಳಿದಿರುತ್ತಾನೆ" ನಿಸಿಂಗ್ ಹೇಳಿದರು.

ಮಾಳಿಗೆಯನ್ನು ದಡದಡ ಹತ್ತುತ್ತಿದ್ದ ಅವರ ಮಗನ ಹೆಜ್ಜೆಯ ಸದ್ದು ಕೇಳದಂತಾಯಿತು. "ಬಟ್ಟೆ ಬದಲಾಯಿಸಿಕೊಳ್ಳಲು ಹೋಗಿದ್ದಾನೆ" ಎಂದರು ನಿಸಿಂಗ್.

"ಅಲಾ, ನಿಮ್ಮ ಮಗನ ಮೇಲೆಯೇ ಹೀಗೆ ಸಂದೇಹ ತಾಳುವುದು ಕ್ರೂರವಲ್ಲವೆ? ನಿಮ್ಮ ಸಂದೇಹಕ್ಕೇನಾದರೂ ಆಧಾರವಿದೆಯೆ?" ಆಗಂತುಕ ಕೇಳಿದರು.

"ಒಂದಲ್ಲ—ಎರಡು, ಮೂರು, ನಾಲ್ಕು, ಐದು ಕಾರಣಗಳಿವೆ. ಆತನ ಷೋಕಿ ಜೀವನ, ಅವನ ಸಾಲ—ಅವನ್ನೆಲ್ಲ ವರ್ಣಿಸುವ ತಾಪದಿಂದ ನನ್ನನ್ನು ಉಳಿಸಿರಿ. ಆದರೆ ಅವನಲ್ಲಿ ವಿಶ್ವಾಸವಿಡಬಹುದೇ, ಬಾರದೇ ಎಂಬುದು ನನಗೆ ಬೇಗನೆ ತಿಳಿಯುವುದು."

ಇಬ್ಬರೂ ಮದ್ಯವನ್ನು ಸೀಪುತ್ತ ವಿಚಾರ ಮಗ್ನರಾಗಿ ಕುಳಿತರು ಕೆಲ ನಿಮಿಷಗಳಲ್ಲಿ ಮಾಳಿಗೆ ಇಳಿಯುವ ಹೆಜ್ಜೆಗಳ ಸದ್ದು ಕೇಳಿತು. ಬಾಗಿಲನ್ನು ಧಡಾರನೆ ಹಾಕಿದ್ದೂ ಕೇಳಿಸಿತು.

"ಆತನೀಗ ನನ್ನ ಕಚೇರಿ ಕೋಣೆಗೆ ಹೋಗಿದ್ದಾನೆ" ಆಗಂತುಕ ತಲೆಯಲ್ಲಾಡಿಸಿದರು. ಎರಡು ಮೂರು ನಿಮಿಷಗಳು— ಸಹನಾತೀತವಾದ ಸಂದೇಹ- ಆತುರಗಳಲ್ಲಿ ಅದು ಅನಂತ ಕಾಲವೆನಿಸಿತು. ಬಾಗಿಲು ಹಾಕಿದ ಸದ್ದು ಮತ್ತೆ ಕೇಳಿತು— ಆ ಮೇಲೆ ನಿಶ್ಶಬ್ದ.

"ಆತ ಹೊರಗೆ ಹೋಗುವ ಮೊದಲು ನೀವು ಅವನೊಡನೆ ಏನಾದರೂ ಮಾತನಾಡಬೇಕು" ಎನ್ನುತ್ತ ಆಗಂತುಕ ಏಳೆಲೆತ್ನಿಸಿದರು.

"ಛೆ! ಛೆ! ಈಗ ಎಲ್ಲವೂ ಇತ್ಯರ್ಥವಾಯಿತು."

"ಹೋದದ್ದು ನಿಮ್ಮ ಕೆಲಸದಾಕೆ ಎಂದ...."

"ಇಲ್ಲ. ಖಂಡಿತವಾಗಿ ನನ್ನ ಮಗನೇ ಸರಿ."

ಮುಂಬಾಗಿಲು ಮುಚ್ಚಿದ ಸಪ್ಪಳ ಕೇಳಿದೊಡನೆ ನಿಸಿಂಗ್ ಎದ್ದರು. "ಎರಡೇ ನಿಮಿಷ, ಬಂದೆ" ಎಂದರವರು. ಆಗಂತುಕ ತಲೆಯಲ್ಲಾಡಿಸಿದರು. "ನಾನು ಒಪ್ಪಿಕೊಳ್ಳಬೇಕಾಗಿತ್ತು. ಆದರೆ ಯಾರ ಮುಂದೆ? ಈ ನನ್ನ ಸಂಶೋಧಕ ಮಿತ್ರ—ಈ ಬಲೆಗಾರನ ಮುಂದೆಯೆ? ಛೆ! ಸಾಧ್ಯವಿಲ್ಲದ ಮಾತು" ಅವರು ಮತ್ತೆ ಖುರ್ಚಿಯಲ್ಲೊರಗಿದರು. ನಿಸಿಂಗ್ ತಿರುಗಿ ಬರಲು ಹತ್ತು ನಿಮಿಷಗಳು ಹಿಡಿದವು. ಆ ಹತ್ತು ನಿಮಿಷಗಳು ಅಸಾಧ್ಯ ಕುತೂಹಲದ್ದಾಗಿದ್ದವು.

"ವಿಚಿತ್ರ, ಬಲು ವಿಚಿತ್ರ" ಎನ್ನುತ್ತಲೇ ನಿಸಿಂಗ್ ಬಂದರು.

"ಏನು ವಿಚಿತ್ರ?"

"ಹಣದ ಲೆಕ್ಕ ಬಾಯಿಗೂಡುವುದಿಲ್ಲ."

"ಅಂದರೆ, ಆತ ಒಂದಿಷ್ಟು ಕದ್ದಿದ್ದಾನೆಯೆ?"

"ಇಲ್ಲ." ನಿಸಿಂಗ್ ತುಂಬ ಗೊಂದಲಕ್ಕೆ ಸಿಲುಕಿದ್ದರು. ಅವರ ಧ್ವನಿ ಎತ್ತರವಾಗುತ್ತಲೇ ಹೋಯಿತು. "ಇಲ್ಲ, ಆತ ಕದ್ದಿಲ್ಲ ಅಥವಾ ನಾನೇ ಏನಾದರೂ ತಪ್ಪು ಮಾಡಿರಬೇಕು. ಹೇಗೆ ಹೇಳಲಿ? ಲೆಕ್ಕ ಸರಿಗೂಡುವುದಿಲ್ಲ ನಾನು ಬರೆದಿಟ್ಟುಕೊಂಡಿದ್ದರೇನೇ ಯೋಗ್ಯವಾಗುತ್ತಿತ್ತು."

"ಏನಾಗಿದೆ ಈಗ?"

"ನಾನಿಟ್ಟಿದ್ದಕ್ಕಿಂತಲೂ ಹೆಚ್ಚಿಗೆ ಹಣ ಇದೆ ಅಲ್ಲಿ ನಾನಿಟ್ಟಿದ್ದಕ್ಕಿಂತಲೂ ಹೆಚ್ಚು ಒಂದು ಸಾವಿರ ಕ್ರಾನುಗಳು ಅಲ್ಲಿವೆ."

ತಮ್ಮ ಉದ್ವಿಗ್ನತೆಯನ್ನು ನಿಯಂತ್ರಿಸಿಕೊಳ್ಳಲಾರದ ಆಗಂತುಕರು "ನೀವಿಟ್ಟ ಹಣ ಎಷ್ಟು

ಎಂಬುದು ನಿಮಗೆ ಸರಿಯಾಗಿ ನೆನಪಿಲ್ಲ" ಎಂದರು. ಅವರಿಗೆ ಗೊತ್ತಿದ್ದಂತೆ ಒಂದು ಸಾವಿರ ಹೆಚ್ಚು ಎಂದರೆ ಎರಡು ಸಾವಿರ ಕ್ರಾನು ಕಡಿಮೆಯಾಗಿತ್ತು.

"ಹೌದು. ಆದರೆ ನನ್ನ ಮಗ ಒಂದು ಸಾವಿರ ಕ್ರಾನುಗಳನ್ನು ಅಲ್ಲೇಕಿಡಬೇಕು? ಅವನ ಹತ್ತಿರ ಅಷ್ಟು ಹಣ ಬಂತೆಂದರೆ ಅವನು ಎಲ್ಲಿಯೊ ಕದ್ದಿರಲೇಬೇಕು."

"ಕದ್ದಿರಲೇಬೇಕು ಎನಿಸುತ್ತದೆ."

"ನಿಮ್ಮ ಅಭಿಪ್ರಾಯವೇನು?"

"ಏನೂ ಹೇಳಲಾರೆ."

ಇಬ್ಬರೂ ಮೌನವಾಗಿ ಕುಳಿತರು. ಆ ಮೇಲೆ ಊಟವಾಯಿತು. ಮಾತು ಬೇರೆ ವಿಚಾರಕ್ಕೆ ತಿರುಗಿತು. "ನಾನು ಒಪ್ಪಿಕೊಳ್ಳಲೇಬೇಕು. ಆದರೆ ಇಲ್ಲಿ ಅಲ್ಲ. ಎಲ್ಲ ಎಂಥ ಗೊಂದಲ!" ಆಗಂತುಕ ಯೋಚಿಸುತ್ತಿದ್ದರು. ಆ ಮೇಲೆ "ನಾನು ದಣಿದಿದ್ದೇನೆ" ಎಂದು ಆಕಳಿಸಿದರು.

ನಿಸಿಂಗರು ಅವರನ್ನು ಅತಿಥಿ ಕೋಣೆಗೆ ಒಯ್ದು ಹಾಸಿಗೆ ತೋರಿಸಿ "ಗುಡ್‌ನೈಟ್" ಎಂದರು.

"ಗುಡ್‌ನೈಟ್."

ನಿಸಿಂಗ್ ಹೋದಮೇಲೆ ಆಗಂತುಕ ಮಲಗಿಕೊಳ್ಳಲಿಲ್ಲ. ಆರಾಮ ಖುರ್ಚಿಯಲ್ಲಿ ಒರಗಿದರು. ಎರಡು ಸಾವಿರ ಕ್ರಾನುಗಳನ್ನು ಕದ್ದೂ ಹುಡುಗ ಪರೀಕ್ಷೆ ಪಾಸಾಗಿದ್ದ. ಹಾಗಿದ್ದರೂ ಒಂದು ಸಾವಿರ ಕ್ರಾನು ಕದ್ದು ನಿರಪರಾಧಿಯೊಬ್ಬಳನ್ನು ದಂಡನೆಗೆ ಗುರಿ ಮಾಡಿದ್ದಕ್ಕಿಂತ ಹೆಚ್ಚಿನ ಅಪ-ರಾಧವೇನೂ ಇದಾಗಿರಲಿಲ್ಲ "ನನ ಹಣದ ಸದುಪಯೋಗವಾಯಿತು. ನಿಷ್ಪ್ರಯೋಜಕನೊಬ್ಬ ಸಂದೇಹಮುಕ್ತನಾಗಿದ್ದಾನೆ. ಸರಿ. ದೇವರಿಗೆ ಇದು ಮೆಚ್ಚಿಗೆಯಾದೀತು."

ಆದರೆ ಇನ್ನು ಮುಂದೆ? ಈಗ ಒಪ್ಪಿಕೊಂಡರೆ ಯಾರೂ ನಂಬಲಿಕ್ಕಿಲ್ಲ. ಮೂವತ್ತ್ಮೂರು ವರ್ಷ ನಾಲ್ಕು ತಿಂಗಳ ಹಿಂದೆ ತಾನೆಸಗಿದ ಅಪರಾಧವನ್ನು ಇದುವರೆಗೂ ಮುಚ್ಚಿಟ್ಟುಕೊಂಡು ಈಗ ಇನ್ನೊಬ್ಬರ ಮೇಲೆ ಅಂಥ ಅಪರಾಧವನ್ನು ಹೊರಿಸಿದರೆ ಯಾರು ನಂಬಬೇಕು? ನಿಸಿಂಗನ ಮಗ ಬರುವವರೆಗೂ ಕಾಯ್ದು ಅವನೊಡನೆ ಮಾತಾಡಬೇಕು. ಅವನೆದುರು ಒಪ್ಪಿಕೊಳ್ಳಬೇಕು. ಎರಡು ಸಾವಿರ ಕ್ರಾನುಗಳು ಕಳವಾದದ್ದು ತನಗೆ ಗೊತ್ತಿದೆಯೆಂದು ಹೇಳಬೇಕು. ಆದರೆ ಆ ಹೊಣೆಗೇಡಿ ಯುವಕ ಬಹಳವೆಂದರೆ ಭುಜ ಹಾರಿಸಿ ಮಲಗಲೆಂದು ಎದ್ದು ಹೋದಾನು. ಯಾವುದನ್ನು ಸಿದ್ಧಮಾಡಲು ಸಾಧ್ಯವಿಲ್ಲವೊ ಅಂಥ ಅಪರಾಧವನ್ನು ತರುಣರು ಸಹಸಾ ಒಪ್ಪುವುದಿಲ್ಲ. ಅವರ ವಿವೇಕ ಅಷ್ಟು ಜಾಗೃತವಾಗಿರುವುದಿಲ್ಲ.

ನಸುಕಿನ ನಾಲ್ಕು ಗಂಟೆಯಾಯಿತು. ಒಳಗಿನ ಛಾಯೆ ಕಿಟಕಿಯ ಆಚೆ ಇದ್ದ ಗಿಡಗಳನ್ನು ದಾಟಿ ಕೆಳಗೆ ಹರಿಯತೊಡಗಿತ್ತು. ಆಗಂತುಕ ಎದ್ದು ಮೇಜಿನ ಬಳಿ ಕುಳಿತು ಒಂದು ಪತ್ರ ಬರೆಯತೊಡಗಿದರು. ಹೊರಡುವ ಮೊದಲು ಇನ್ನೊಬ್ಬರನ್ನು ಭೆಟ್ಟಿಯಾಗುವ ಅಗತ್ಯ ತಟ್ಟನೆ ನೆನಪಿಗೆ ಬಂತು, ಹೇಳದೆಕೇಳದೆ ಹೋದದ್ದಕ್ಕೆ ಕ್ಷಮಿಸಬೇಕು ಎಂದು ನಿಸಿಂಗರಿಗೆ ಆತ ಪತ್ರ ಬರೆದರು. "ಮತ್ತೆ ನಿಮ್ಮ ಮಗನ ವಿಚಾರವೇನು? ನನ್ನ ಕಾರಖಾನೆಗೆ ಕಳಿಸುವಿರಾ? ಆತನು ಯೋಗ್ಯವಾದ ಕೆಲಸ ಮಾಡಲಿ. ನನಗೆ ವಾರಸುದಾರರಿಲ್ಲ ಎಂದು ನಿಮಗೆ ತಿಳಿದಿದೆ. ಆದರೆ ಆ ವಿಚಾರ ಏನಾದೀತು ಎಂದು ಭವಿಷ್ಯತ್ತೇ ಬಲ್ಲುದು" ಎಂದು ಆಗಂತುಕ ಬರೆದಿದ್ದರು.

"ಕಳವಿನ ಸಂದೇಹ ಯಾರ ಮೇಲಿದೆಯೋ ಅವರು ಕಳ್ಳರಂತೆಯೆ ಸರಿ ಅವರಿಗೆ ಹೇಗೆನಿಸುವುದೆಂಬುದನ್ನು ಸ್ವಂತ ಅನುಭವದಿಂದ ಬಲ್ಲೆ." ಪತ್ರದೊಳಗಿನ "ಅನುಭವ" ಎಂಬ ಶಬ್ದವನ್ನು ಕಾಟು ಹಾಕಬೇಕೆಂದು ಅವರಿಗನಿಸಿತು. ಆದರೆ ಅದಕ್ಕೆ ಅನೇಕ ಅರ್ಥಗಳನ್ನು ಹಚ್ಚಬಹುದು ಎಂದು ಹೊಳೆಯಲು ಅವರದನ್ನು ಹಾಗೆಯೆ ಉಳಿಯಗೊಟ್ಟರು.

"ಒಬ್ಬನನ್ನು ಅವನಲ್ಲಿ ನಂಬಿಕೆಯಿಟ್ಟು ಸುಧಾರಿಸಬಹುದು. ಒಬ್ಬನು ಇನ್ನೊಬ್ಬನನ್ನು ಎಂದೂ

ಪರೀಕ್ಷಿಸಬಾರದು. ಏಕೆಂದರೆ ಅದರಲ್ಲಿ ಆತ ಉತ್ತೀರ್ಣನಾಗುವುದಿಲ್ಲ. ಆದರೆ ಕಣ್ಮುಚ್ಚಿ ಅವರನ್ನು ವಾರಸುದಾರರು ಎಂದೆಣಿಸಿದರೆ ಅವರು ಯಾವ ಸತ್ಕಾರ್ಯವನ್ನಾದರೂ ಮಾಡಬಲ್ಲರು" ಎಂದೂ ಅವರು ಬರೆದರು. ತಪ್ಪುಒಪ್ಪಿಗೆ ಇದೇ, ನ್ಯಾಯಬುದ್ಧಿ ಇದು ಎಂದು ಅವರು ಯೋಚಿಸಿದರು.

ಪತ್ರವನ್ನು ಮೇಜಿನ ಮೇಲಿಟ್ಟು ಅವರು ಕಳ್ಳ ಹೆಜ್ಜೆಯಿಂದ ಹೊರಬಿದ್ದರು. ಮನೆಯ ಹೊರಗೆ ಬಂದ ಮೇಲೆಯೇ ಕಾಲಿಗೆ ಬೂಟ್ಸು ಹಾಕಿಕೊಂಡರು.

ಕಂಪೌಂಡಿನಬಾಗಿಲು ದಾಟಿದ ಬಳಿಕ ಅವರು ತಿರುಗಿ ಆ ಮನೆಯನ್ನು ನೋಡಿದರು. ತನ್ನ ಮಿತ್ರನ ಕೋಣೆಯಲ್ಲಿನ್ನೂ ದೀಪ ಉರಿಯುತ್ತಿದೆ ಎಂದು ಅವರಿಗನಿಸಿತು. ಆದರೆ ನಿಸಿಂಗರ ಕೋಣೆಯ ಕಿಟಕಿಯ ಕಾಜಿನ ಮೇಲೆ ಬಿದ್ದು ಪ್ರತಿಫಲಿಸುತ್ತಿದ್ದ ಉದಯಿಸುತ್ತಿದ್ದ ಸೂರ್ಯನ ಕೆಂಬಣ್ಣದ ಕಿರಣಗಳು ತನ್ನ ಕಣ್ಣುಗಳನ್ನು ಮೋಸಗೊಳಿಸುತ್ತಿದ್ದರೂ ಇರಬಹುದು ಎಂದು ಅವರೆಂದುಕೊಂಡರು. *

---

(೬೨ ನೇ ಪುಟದ ಸಮಸ್ಯೆಗಳ ಉತ್ತರ)

**ಸಮಸ್ಯೆ ೧**

ಮೂವರ ವಯಸ್ಸಿನ ಗುಣಲಬ್ಧ ೪೪೧. ಅಂದ ಮೇಲೆ ಒಳಗಿದ್ದವರ ಸಂಭಾವ್ಯ ವಯಸ್ಸುಗಳು ಈ ಕೆಳಗಿನ ಐದು ವಿಧಗಳಲ್ಲಿ ಒಂದು ವಿಧವಾಗಿ ಮಾತ್ರ ಇರಬಲ್ಲವು: (೧) ೯, ೪೯, ೧; (೨) ೨೧, ೨೧, ೧; (೩) ೩, ೪೯, ೩; (೪) ೩, ೨೧, ೭; ಮತ್ತು (೫) ೯, ೭, ೭.

ಗಂಡ ಹೆಂಡತಿಯರ ವಯಸ್ಸುಗಳು ಮೇಲಿನ ಪೈಕಿ ೨ ನೇ ವಿಧದಲ್ಲಿ ಮಾತ್ರ ಇರಬಲ್ಲವಾದ್ದರಿಂದ ಮನೆಯವರ ವಯಸ್ಸುಗಳು ೨೧, ೨೧, ೧ ಎಂದು ರಾಮಾನುಜಂ ನಿಶ್ಚೈಸಿದ.

**ಸಮಸ್ಯೆ ೨**

ರಾಮಾನುಜಂ ಎಲ್ಲ ಪೆಟ್ಟಿಗೆಗಳನ್ನು ಬಿಚ್ಚಿ ಒಂದನೆಯದರಿಂದ ಒಂದು, ಎರಡನೆಯದರಿಂದ ಎರಡು, ಮೂರನೆಯದರಿಂದ ಮೂರು. . . . ಇದೇ ಪ್ರಕಾರವಾಗಿ ಚೆಂಡುಗಳನ್ನು ತೆಗೆದ. ಒಟ್ಟು ೫೫ ಚೆಂಡುಗಳಾದವು. ಅವನ್ನೆಲ್ಲ ಒಮ್ಮೆಯೆ ೧೦ ನ. ಪೈ. ಹಾಕಿ ತೂಗಿದ.

ಎಲ್ಲ ಚೆಂಡುಗಳು ಸರಿಯಾದ ತೂಕದವಿದ್ದರೆ ಒಟ್ಟು ತೂಕ ೫೫ × ೫॥ ಔಂಸ್ ಆಗಬೇಕಿತ್ತು.

ಒಂದನೇ ಪೆಟ್ಟಿಗೆಯಲ್ಲಿ ಮೋಸದ ಚೆಂಡುಗಳಿದ್ದರೆ ಒಟ್ಟು ತೂಕ ಔಂಸ್ ೫೪ × ೫॥ + ೫।. ಎರಡನೇ ಪೆಟ್ಟಿಗೆಯಲ್ಲಿ ಮೋಸದ ಚೆಂಡುಗಳಿದ್ದರೆ ಒಟ್ಟು ತೂಕ ಔಂಸ್ (೫೩ × ೫॥) + (೫। × ೨)

ಮೂರನೇ ಪೆಟ್ಟಿಗೆಯಲ್ಲಿ ಮೋಸದ ಚೆಂಡುಗಳಿದ್ದರೆ ಒಟ್ಟು ತೂಕ ಔಂಸ್ (೫೨ × ೫॥) + (೫। × ೩)

ಇತ್ಯಾದಿಯಾಗಿ ಹತ್ತು ತರಹದ ಒಟ್ಟು ತೂಕಗಳು ಹೊರಡಬಲ್ಲವು. ಯಾವ ತೂಕ ಸರಿ ಹೊಂದಿತೋ ಆ ಪೆಟ್ಟಿಗೆಯಲ್ಲಿ ಕೊರತೆ ತೂಕದ ಚೆಂಡುಗಳಿವೆಯೆಂದು ತಿಳಿಯುತ್ತದೆ.

# ಧನುರ್ವಾತ: ಭೀಕರ ರೋಗ

ಮನುಷ್ಯನಿಗೆ ಗೊತ್ತಿರುವ ರೋಗಗಳಲ್ಲಿ ಧನುರ್ವಾತವು ಅತ್ಯಂತ ಘಾತುಕವೂ ಕಷ್ಟದಾಯಕವೂ ಆಗಿದೆ. ಹೃದಯವಿಕಾರ, ಕ್ಯಾನ್ಸರ್‌ಗಳಿಗಿಂತಲೂ ಭೀಕರವಾಗಿದೆ ಈ ರೋಗ. ಸ್ಟ್ರಿಕ್ನೈನ್ ವಿಷದಿಂದ, ನಾಯಿ ಕಡಿತದಿಂದ ಬರುವ ರೋಗಗಳು ಮತ್ತು ಮಿದುಳು ಪೊರೆಯ ಬಾವಿನ ರೋಗಗಳಲ್ಲಿ ಮಾತ್ರ ಧನುರ್ವಾತದಂಥ ಭೀಕರ ಲಕ್ಷಣಗಳು ಕಾಣಿಸಿಕೊಳ್ಳುತ್ತವೆ.

ದೇಹಕ್ಕಾಗುವ ಪ್ರತಿಯೊಂದು ಚಿಕ್ಕ ಗಾಯ ಅಥವಾ ಅಂಥದೇ ಪೆಟ್ಟು ರೋಗದ ಸೋಂಕಿಗೆ ಕಾರಣವಾಗಬಹುದು. ಮನೆಯಲ್ಲಿ, ತೋಟದಲ್ಲಿ, ಅಂಗಡಿಯಲ್ಲಿ ಕೆಲಸ ಮಾಡುವವರು, ತಮ್ಮ ಸಾಕುಪ್ರಾಣಿಗಳೊಡನೆ ಚಿನ್ನಾಟವಾಡುವವರು ಧನುರ್ವಾತ ರೋಗಕ್ಕೆ ಕಾರಣವಾಗುವ ಪರಿಸ್ಥಿತಿಯ ಸಮ್ಮುಖದಲ್ಲಿರುತ್ತಾರೆ.

ಪ್ರತಿಯೊಬ್ಬನೂ ಧನುರ್ವಾತ ನಿರೋಧಕ ಔಷಧಿ ಅಗತ್ಯವಿಲ್ಲೆಂದು ಭಾವಿಸಿದ ಹೆಚ್ಚಿನ ಪ್ರಸಂಗಗಳಲ್ಲಿ ಧನುರ್ವಾತ ಅಂಟಿಕೊಳ್ಳುತ್ತದೆ. ಗಾಯ ತೀರ ಸಣ್ಣದು, ಡಾಕ್ಟರರ ಹತ್ತಿರ ಹೋಗುವುದೇಕೆ ಎಂದು ಅಸಡ್ಡೆ ಮಾಡಿದ ಸಂದರ್ಭಗಳು ಈ ಭೀಕರ ರೋಗಕ್ಕೆ ಕಾರಣವಾಗಬಹುದು.

ಶತಮಾನಗಳ ಹಿಂದೆಯೇ ಧನುರ್ವಾತ ರೋಗವನ್ನು ಜನ ಅರಿತಿದ್ದರು. ಕ್ರಿಸ್ತನಿಗಿಂತ ೪೦೦ ವರ್ಷಗಳ ಮೊದಲು ಬದುಕಿದ್ದ ಗ್ರೀಸಿನ ಸುಪ್ರಸಿದ್ಧ ವೈದ್ಯ ಹಿಪ್ಪೊಕ್ರೇಟ್ಸ್ ಧನುರ್ವಾತದ ವಿವರವನ್ನು ಇಂದಿನ ಆಧುನಿಕ ವೈದ್ಯಶಾಸ್ತ್ರ ವಿವರಿಸುವಷ್ಟೇ ಚೆನ್ನಾಗಿ ಬರೆದಿಟ್ಟಿದ್ದಾನೆ. *

ಇಂದು ವೈದ್ಯಕೀಯ ಶಾಸ್ತ್ರ ಇಷ್ಟೊಂದು ಪ್ರಗತಿಹೊಂದಿದ್ದರೂ ಧನುರ್ವಾತ ರೋಗದಿಂದ ಆಗುವ ಮರಣಗಳ ಸಂಖ್ಯೆಯನ್ನು ಕಡಿಮೆ ಮಾಡುವುದರಲ್ಲಿ ಸಮರ್ಥವಾಗಿಲ್ಲ ಎಂದೇ ಹೇಳಬೇಕು.

ಕೇವಲ ಅತ್ಯಂತ ಶಕ್ತಿಯುತ ಸೂಕ್ಷ್ಮದರ್ಶಕ ಯಂತ್ರದಿಂದ ಮಾತ್ರ ನುಗ್ಗೆಕಾಯಿ ಆಕಾರದಲ್ಲಿರುವ ಧನುರ್ವಾತ ರೋಗ ಕ್ರಿಮಿಯನ್ನು ಕಾಣಬಹುದು. ಈ ಸೂಕ್ಷ್ಮಜೀವಿಗೆ ಬಹುಕಾಲ ಬದುಕಿರುವ ಶಕ್ತಿಯಿದೆ. ಸಾಬೂನು ಮತ್ತು ನಂಜುನಿವಾರಕ ಔಷಧಿಗಳಿಗೆ ಇದು ಬಗ್ಗುವುದಿಲ್ಲ. ಧನುರ್ವಾತ ಕ್ರಿಮಿ ಹುಟ್ಟಿಸುವ ಬೀಜಾಣುಗಳು ಇನ್ನೂ ಗಟ್ಟಿಮುಟ್ಟಾಗಿರುತ್ತವೆ. ಇವು ಹತ್ತು ವರ್ಷಗಳಿಗಿಂತಲೂ ಹೆಚ್ಚು ಕಾಲ ಬದುಕಬಲ್ಲವು. ಕ್ರಿಮಿನಾಶಕ ಔಷಧಿಗಳಿಂದ ಇವು ಸಾಯುವುದಿಲ್ಲ. ಉಗಿಯಲ್ಲಿ ಹಿಡಿದಾಗಲೂ ಸಾಯದ ಇವು ಕುದಿಸಿದಾಗ ಮಾತ್ರ ನಾಶವಾಗಬಹುದು.

ಈ ಸೂಕ್ಷ್ಮ ಕ್ರಿಮಿ ಅಥವಾ ಅವುಗಳ ಮರಿಗಳು ಸಾಮಾನ್ಯವಾಗಿ ಸಾಕು ಪ್ರಾಣಿಗಳ, ವಿಶೇಷತಃ ಕುದುರೆ ಮತ್ತು ಆಕಳುಗಳ ಹೊಟ್ಟೆಯ ಕರುಳಿನಲ್ಲಿ ಇರುವವು. ಅನೇಕ ಜನರ ಚರ್ಮದ ಮೇಲೆ, ಬಟ್ಟೆಯ ಮೇಲೆ, ಹೊಲಿಯುವ,

* ಆಯುರ್ವೇದವೂ ಈ ರೋಗದ ವರ್ಣನೆ ಮಾಡಿದೆ.

ಮೀನು ಹಿಡಿಯುವ, ತೋಟಗಾರಿಕೆಯ ಉಪಕರಣಗಳ ಮೇಲೆ ಇವನ್ನು ಕಾಣಬಹುದು. ನಿಮ್ಮ ಮನೆಯ ಹೊರಗೆ ಮತ್ತು ಒಳಗೆ ಇವು ಇಲ್ಲದ ಸ್ಥಳವೇ ಇಲ್ಲವೆನ್ನಬಹುದು.

ಧನುರ್ವಾತ ರೋಗಾಣು (ಕ್ಲೊಸ್ಟ್ರಿಡಿಯಂ ಟಿಟಾನಿ) ಗಾಳಿ ಇಲ್ಲದಲ್ಲಿ ಚೆನ್ನಾಗಿ ಅಭಿವೃದ್ಧಿ ಹೊಂದುತ್ತದೆ. ಗಾಳಿ ಅವುಗಳ ಬೆಳವಣಿಗೆಯನ್ನು ತಡೆಯುತ್ತದೆ. ಆದುದರಿಂದ ಗಾಳಿ ಸಿಗದ ಗಾಯಗಳೇ ಹೆಚ್ಚು ಗಂಡಾಂತರಕಾರಿಯೆನಿಸುವವು.

ರೋಗಾಣುಗಳು ದೇಹದೊಳಗೆ ಸೇರಿದಾಗ ಅವು ಇಡೀ ದೇಹದ ತುಂಬ ಪಸರಿಸುವುದಿಲ್ಲ. ಆದರೆ ಅವುಗಳ ವಿಷ ದೇಹಾದ್ಯಂತ ವ್ಯಾಪಿಸಿ ರೋಗವುಂಟುಮಾಡುತ್ತದೆ. ಈ ವಿಷಕ್ಕೆ ನರಗಳ ಕೋಶಗಳೇ ಪ್ರಿಯವಾಗಿರುತ್ತದೆ. ವಿಶೇಷತಃ ಬೆನ್ನುಹುರಿ, ಮಿದುಳು, ಸ್ನಾಯುಗಳು ಹಾಗೂ ನರಗಳ ತುದಿಯ ಸಂಧಿಯಲ್ಲಿ ಈ ವಿಷ ವ್ಯಾಪಿಸಿಕೊಳ್ಳುತ್ತದೆ.

ನೀರಿನಲ್ಲಿ ಕರಗುವ ಈ ಕ್ರೂರ ವಿಷ ಸೋಂಕಿನ ಸ್ಥಳದಿಂದ ರಕ್ತದೊಡನೆ ದೇಹದೊಳಗೆ ಹೋಗುವುದೆಂದು ಕಾಣುತ್ತದೆ. ನರಗಳ ಪೇಶಿಗಳಲ್ಲಿ ಠಾಣ್ಯ ಹೂಡಿದ ಮೇಲೆ ಡಾಕ್ಟರರ ಬಳಿ ಇರುವ ಯಾವ ಔಷಧವೂ ಅದನ್ನು ಶಕ್ತಿಹೀನಗೊಳಿಸಲಾರದು.

ಆದ್ದರಿಂದ ಹಾಗಾಗುವ ಮೊದಲೇ ಚಿಕಿತ್ಸೆ ಪ್ರಾರಂಭವಾಗುವುದು ಅಗತ್ಯವಿದೆ. ಧನುರ್ವಾತ ವಿಷ ನರಗಳ ಪೇಶಿಗಳಿಗೆ ತಲುಪುವ ಮೊದಲಿನ ಅವಧಿಗೆ ಪರಿಪಾಕಾವಸ್ಥೆಯ ಕಾಲ ಎನ್ನುತ್ತಾರೆ. ಈ ಕಾಲದ ಮಿತಿ ಎರಡರಿಂದ ಐವತ್ತು ದಿನಗಳವರೆಗಿರುತ್ತದೆ. ಈ ಅವಸ್ಥೆಯಲ್ಲಿ ನಿರೋಧಕ ಔಷಧಿ ಪ್ರಯೋಜನದ್ದಾಗುವುದಿಲ್ಲ. ಏಕೆಂದರೆ ಔಷಧಿಯು ಪರಿಣಾಮಕಾರಿಯಾಗಲು ಐದರಿಂದ ಆರು ವಾರಗಳು ಬೇಕಾಗುತ್ತವೆ.

ವಿಚಿತ್ರವೆಂದರೆ ಪರಿಪಾಕಾವಸ್ಥೆಯ ಕಾಲ ಕಡಿಮೆಯಾದಷ್ಟೂ ರೋಗದ ಭೀಕರತೆ ಹೆಚ್ಚುತ್ತದೆ. ಮರಣದ ಪ್ರಮಾಣ ಹೆಚ್ಚುತ್ತದೆ. ಪರಿಪಾಕಾವಸ್ಥೆಯ ಕಾಲ ಐದು ದಿನಗಳಿಗಿಂತ ಕಡಿಮೆಯಿದ್ದರೆ ಮರಣ ಸಂಖ್ಯೆ ಹೆಚ್ಚು ಕಡಿಮೆ ನೂರಕ್ಕೆ ನೂರರಷ್ಟೇ ಇರುತ್ತದೆ. ಇಪ್ಪತ್ತು ನಾಲ್ಕು ಗಂಟೆಯೊಳಗಾಗಿ ತಕ್ಕ ಚಿಕಿತ್ಸೆ ಶುರು ಮಾಡದಿದ್ದರೆ ಮರಣದ ಪ್ರಮಾಣ ಖಂಡಿತವಾಗಿಯೂ ನೂರಕ್ಕೆ ನೂರರಷ್ಟಾಗುವುದು.

ಧನುರ್ವಾತ ರೋಗದ ಗಂಡಾಂತರ ಇರುವುದು ತೀರ ನಿರುಪದ್ರವಿಯೆನಿಸುವ ಸಣ್ಣ ಪುಟ್ಟ ಗಾಯಗಳಲ್ಲಿ ಈ ಭೀಕರ ರೋಗಾಣುಗಳು ಇರುವುದೇ ಆಗಿದೆ. ಒಂದು ಗುಂಡಿ ಹೊಲಿಯುವಾಗ ಸೂಜಿ ಚುಚ್ಚಿ ಆಗುವ ಅತಿ ಚಿಕ್ಕ ಗಾಯವೇ ಈ ರೋಗವನ್ನುಂಟುಮಾಡಲು ಕಾರಣವೆನಿಸಬಹುದು.

ಧನುರ್ವಾತದಿಂದ ಬರುವ ಮರಣ ಅತ್ಯಂತ ಕ್ರೂರವಾದದ್ದು. ರೋಗಿ ಅತ್ಯಂತ ವೇದನೆಯನ್ನು ಅನುಭವಿಸುತ್ತಾನೆ. ಆತನಿಗೆ ವಿಪರೀತ ತಲೆನೋವಾಗುತ್ತದೆ. ಕುತ್ತಿಗೆ, ಹೊಟ್ಟೆ, ಮತ್ತು ಬೆನ್ನುಗಳಲ್ಲಿ ಸೆಳೆತವಿರುತ್ತದೆ. ಆಹಾರ ಜಗಿಯಲು, ನುಂಗಲು ಕಷ್ಟವಾಗುತ್ತದೆ. ಆ ಮೇಲೆ ಬೆನ್ನು ಬಿಲ್ಲಿನಂತೆ ಮಣಿಯತೊಡಗುತ್ತದೆ. (ಆದ್ದರಿಂದಲೇ ಧನುರ್ವಾತವೆಂದು ಹೆಸರು). ದವಡೆಯ ಸ್ನಾಯುಗಳು ಸೆಟೆದುಕೊಳ್ಳುತ್ತವೆ. ಬೆನ್ನು ಮಣಿದು ಆಗುವ ವಿಪರೀತ ವೇದನೆಯಿಂದ ಆತ ನಿತ್ರಾಣನಾಗುತ್ತಾನೆ. ಅತಿ ಚಿಕ್ಕ ಸದ್ದು, ಗಾಳಿಯ ಮಂದ ಝುಳಕು ಕೂಡ ಬೆನ್ನು ಮಣಿಯುವಿಕೆಯ ಪ್ರಮಾಣವನ್ನು ಹೆಚ್ಚಿಸುವವು. ಎದೆಯ ಸ್ನಾಯುಗಳ ಸೆಳೆತಗಳಿಂದ, ಅಂಥ ಭಯಂಕರ ನೋವಿದ್ದರೂ ಅವನಿಗೆ ನರಳಲು ಕೂಡ ಆಗುವುದಿಲ್ಲ.

ಶ್ವಾಸೋಚ್ಛ್ವಾಸದ ಸ್ನಾಯುಗಳ ಈ ಬಗೆಯ ಅವಸ್ಥೆಯಿಂದ ಆತ ನೀಲಿಗಟ್ಟುತ್ತಾನೆ. ಹೃದಯದ ಬಡಿತ ಹೆಚ್ಚಾಗುತ್ತದೆ. ಸೆಳೆತಗಳು ಹೆಚ್ಚಾಗಿ, ಪ್ರಾಣವಾಯುವಿನ ಅಭಾವವಾಗಿ ರೋಗಿ ಸಾಯುತ್ತಾನೆ. ಆದರೆ ಮರಣಕ್ಕೆ ಮುಂಚಿತವಾಗಿ

ಪ್ರಜ್ಞೆ ತಪ್ಪುವುದು ಮಾತ್ರ ತೀರ ವಿರಳ.

ರೋಗ ತಗಲಿದ ಮೇಲೆ ಚಿಕಿತ್ಸೆ ನಿರುಪಯೋಗವಾಗುವುದೇ ಹೆಚ್ಚಾದ್ದರಿಂದ ಡಾಕ್ಟರರು ಧನುರ್ವಾತ ನಿರೋಧಕ ಮದ್ದನ್ನು ಪ್ರತಿಯೊಬ್ಬನೂ ಚುಚ್ಚಿಸಿಕೊಳ್ಳಬೇಕು ಎಂದರೆ ಆಶ್ಚರ್ಯವೇನಲ್ಲ. ಈ ರೋಗಕ್ಕೆ ಮದ್ದಿಲ್ಲ. ಪ್ರತಿಬಂಧಕೋಪಾಯವೇ ತಾರಕವಾಗಿದೆ.

ಟಿಟ್ ಎಂದು ಕರೆಯಲ್ಪಡುವ ಆ್ಯಂಟಿಟಾಕ್ಸಿನ್ ಮದ್ದನ್ನು ಕುದುರೆಯ ಸೀರಂನಿಂದ ತಯಾರಿಸುತ್ತಾರೆ. ಗಾಯವಾಗಿ ಕೂಡಲೆ ಚಿಕಿತ್ಸೆ ಮಾಡಬೇಕಾದ ಸಂದರ್ಭದಲ್ಲಿ ಇದನ್ನು ಚುಚ್ಚುತ್ತಾರೆ. ಇದರ ಪರಿಣಾಮ ೧೪ ದಿನಗಳ ವರೆಗೆ ಮಾತ್ರ ಇರುತ್ತದೆ. ಇದರಿಂದ ರೋಗಾಣುವಿನ ಪರಿಪಾಕಾವಸ್ಥೆಯ ಅವಧಿ ಹೆಚ್ಚಬಹುದು. ಈ ಔಷಧದ ಪ್ರತಿಕ್ರಿಯೆ ಕೂಡ ತಾಪದಾಯಕವಾಗಿರುತ್ತದಾದರೂ ರೋಗದ ಕಷ್ಟದ ಎದುರು ಇದು ಹೆಚ್ಚೆನಿಸುವುದಿಲ್ಲ.

ಟಿಟಾನಿಕ್ ಟೊಕ್ಸಾಯ್ಡ್ ಮದ್ದಿನಿಂದ ದೀರ್ಘಕಾಲದ ವರೆಗೆ ರೋಗಭಯ ತಪ್ಪುತ್ತದೆ. ಇದನ್ನು ಟಿಟಾನಸ್ ಎಂಟಿಜೆನ್ ಮತ್ತು ಆಲ್ಯುಮಿನಂ ಫಾಸ್ಫೇಟಿನಿಂದ ತಯಾರಿಸುತ್ತಾರೆ. ಈ ಔಷಧದಿಂದ ಪ್ರತಿಕ್ರಿಯೆಗಳೇನೂ ಆಗುವುದಿಲ್ಲ. ಇದನ್ನು ಇಂಜಕ್ಶನ್ ಮೂಲಕ ಕೊಡುತ್ತಾರೆ. ಮೊದಲನೆಯ ಇಂಜಕ್ಶನ್ನಿನ ನಂತರ ನಾಲ್ಕರಿಂದ ಎಂಟು ವಾರಗಳೊಳಗಾಗಿ ಇನ್ನೊಂದು ಇಂಜಕ್ಶನ್ ಕೊಡುತ್ತಾರೆ. ಒಂದು ವರ್ಷದ ನಂತರ ಮತ್ತೊಂದನ್ನು ಕೊಡುತ್ತಾರೆ. ಮುಂದೆ ಪ್ರತಿ ಮೂರು ಅಥವಾ ಐದು ವರ್ಷಗಳಿಗೊಮ್ಮೆ ಇಲ್ಲವೆ ಗಾಯವಾದಾಗಲೆಲ್ಲ ಇಂಜಕ್ಶನ್ ಕೊಡುತ್ತಾರೆ.

ಧನುರ್ವಾತ ಭೀಕರ ರೋಗ. ಅದನ್ನು ಗುಣಪಡಿಸುವ ಖಚಿತ ಔಷಧಿಯಿಲ್ಲದಿರುವುದರಿಂದ ಪ್ರತಿಬಂಧಕ ಮದ್ದನ್ನು ಚುಚ್ಚಿಸಿಕೊಳ್ಳುವುದೇ ಶ್ರೇಯಸ್ಕರ. *



# ಜೋಕಾಲಿಯ ದೈತ್ಯರು:

# ನೆಲ್ಸನ್ ಬಂಧುಗಳು

ಶಿವಾಜಿ ಶಂಕರ ಕಾರ್ಲೇಕರ

ವಿದ್ಯುದ್ದೀಪಗಳಿಂದ ಥಳಥಳಿಸುವ, ಕರ್ಣ ಮಧುರ ಬ್ಯಾಂಡ್ ಸಂಗೀತದಿಂದ ನಿನದಿಸುವ ಮತ್ತು ರಂಗು ರಂಗಿನ ಪೋಷಾಕುಗಳಿಂದ ಶೋಭಿಸುವ ಆ ಸರ್ಕಸ್ಸೆಂದರೆ ಧರಾತಲದ ಮೇಲಿನ ಇಂದ್ರನಗರಿಯೆ ಆಗಿತ್ತು. ಆಟಗಾರರ ಕಸರತ್ತಿನ ಚಪಲ ಪ್ರಯೋಗಗಳನ್ನು ಕಂಡು ಪ್ರೇಕ್ಷಾಗಾರವೆ ತಲೆತೂಗುತ್ತಿತ್ತು. ಎಷ್ಟೋ ಪ್ರಯೋಗಗಳಾದ ನಂತರ ಕೊನೆಗೆ ಫ್ಲಾಯಿಂಗ್ ಟ್ರಾಪೀಝ್‌ನ ಕೆಲಸ ಸುರುವಾಯಿತು. ನೆಲ್ಸನ್ ಬಂಧುಗಳಿಬ್ಬರು ಮತ್ತು ಮಿಸೆಸ್ ಮೇರಿ ನೆಲ್ಸ-ನ್ ಇವರು ರಿಂಗಿನೊಳಗೆ ಬಂದರು ಚಪ್ಪಾಳೆ ತಟ್ಟಿ ಪ್ರೇಕ್ಷಕರು ಅವರನ್ನು ಸ್ವಾಗತಿಸಿದರು. ಮೂವರೂ ಎತ್ತರದ ಜೋಕಾಲಿಗಳನ್ನೇರಿದರು. ಜೊತೆಯಲ್ಲಿ ವಿದೂಷಕನೂ ಇದ್ದ. ನೆಲ್ಸನ್ ಬಂಧುಗಳಲ್ಲೊಬ್ಬನಾದ ಜೋಸೆಫ್ ನೆಲ್ಸನ್ ಮೊಣಕಾಲುಗಳಲ್ಲಿ ಜೋಕಾಲಿಯ ಕೋಲನ್ನು ಹಿಡಿದು ತಲೆಯನ್ನು ಕೆಳಗೆ ಜೋಲುಬಿಟ್ಟ. ಆತ 'ಕ್ಯಾಚರ್.' ಎರಡನೇ ಜೋಕಾಲಿಯಿಂದ ಫಿಲಿಪ್ ನೆಲ್ಸನ್ ತೂಗಿ ಹಾರಿ ಅಂತರಾಳದಲ್ಲಿ ಮೂರು ಗಿರಕಿ ಹೊಡೆದು ಜೋಸೆಫ್‌ನ ಕೈ ಹಿಡಿದು ತೂಗುಬಿದ್ದ. ಪ್ರೇಕ್ಷಕರ ಕರತಾಡನ ಮತ್ತೊಮ್ಮೆ ಆಯಿತು.

೧೯೩೫ರಲ್ಲಿ ಕಾರ್ಲೇಕರ ಸರ್ಕಸ್ ಕಂಪನಿಯ ಕ್ಯಾಂಪು ಕಲಕತ್ತೆಯಲ್ಲಿದ್ದಾಗ ಅಲ್ಲಿಯ ಪ್ರೇಕ್ಷಕರಿಗೆ ನೆಲ್ಸನ್ ಬಂಧುಗಳ 'ಫ್ಲಾಯಿಂಗ್-ಟ್ರಾಪೀಝ್' (ಅಂತರಾಳದ ಜೋಕಾಲಿಯ ಆಟ) ನೋಡುವ ಸುಯೋಗ ಒದಗಿತು. ಭಾರತೀಯರು ಈ ಪ್ರಯೋಗವನ್ನು ವೀಕ್ಷಿಸಿದ್ದು ಇದೇ ಮೊದಲ ಬಾರಿ. ಆಗಲೇ ಕಲಕತ್ತೆಯಲ್ಲಿ ಜಪಾನಿನ "ಇಸಾಕೊ" ಎಂಬ ಇನ್ನೊಂದು ಸರ್ಕಸ್

ಕ್ಯಾಂಪ್ ಹಾಕಿತ್ತು. ಜಪಾನೀಯರೊಂದಿಗೆ ಸ್ಪರ್ಧಿಸಲೆಂದು ಕಾರ್ಲೇಕರ ಸರ್ಕಸ್ಸಿನ ಮ್ಯಾನೇಜರರಾದ ರಾಮಭಾವು ಜೋಶಿಯವರು ಯುರೋಪಿನಲ್ಲಿ ಖ್ಯಾತರಾದ ನೆಲ್ಸನ್ ಬಂಧುಗಳನ್ನು ಭಾರೀ ಪಗಾರ ಗೊತ್ತು ಮಾಡಿ ಕರೆಸಿಕೊಂಡಿದ್ದರು.

ಈ ಬಂಧುಗಳು ಹುಟ್ಟಿದ್ದು ದಕ್ಷಿಣ ಆಫ್ರಿಕೆಯಲ್ಲಿ,ಒಂದು ಇಂಗ್ಲೀಷ್ ಕುಟುಂಬದಲ್ಲಿ. ಇವರ ತಂದೆ ರಾಬರ್ಟ್ ನೆಲ್ಸನ್‌ರು ಆಗ ದಕ್ಷಿಣ ಆಫ್ರಿಕೆಯಲ್ಲಿ ವಜ್ರದ ಗಣಿಯೊಂದರ ಮ್ಯಾನೇಜರರಾಗಿದ್ದರು. ಅವರು ಉತ್ತಮ ಶಿಕಾರಿಗಳು. ಬೇಟೆಗಾಗಿ ಅವರು ಆಗಾಗ ದಟ್ಟಡವಿಯಲ್ಲಿ ಸುತ್ತುತ್ತಿದ್ದರು. ಹೀಗೇ ಒಮ್ಮೆ ಬೆಲ್ಜಿಯನ್ ಕಾಂಗೋದ ಅಡವಿಗಳಿಗೆ ಹೋಗಿದ್ದರು. ಅಲ್ಲೊಂದು ಅದ್ಭುತ ಘಟನೆ ಸಂಭವಿಸಿತು.

ರಾಬರ್ಟ್ ನೆಲ್ಸನ್ ಮತ್ತು ಅವರ ಮೂರು-ನಾಲ್ಕು ಜನ ನೌಕರರು ಗೋರಿಲ್ಲಾ ಜಾತಿಯ ಒಂದು ಯುಗಲ ಓಡುತ್ತಿರುವುದನ್ನು ಕಂಡರು. ಹೆಣ್ಣು ಗೋರಿಲ್ಲಾ ಒಂದು ಮರಿಯನ್ನು ಹೊಟ್ಟೆಗೆ ತಬ್ಬಿಕೊಂಡಿತ್ತು. ರಾಬರ್ಟರು ಆ ಮಂಗಗಳ ಜೋಡಿಯನ್ನು ಕಂಡವರೇ ಗುರಿ ಇಟ್ಟು ಗುಂಡು ಹಾಕಿದರು. ಗುಂಡು ಹೆಣ್ಣು ಮಂಗನಿಗೆ ತಾಕಿ ಅದು ತತ್ಕಾಲ ನೆಲಕ್ಕುರುಳಿತು. ಮರಿ ದೂರ ಚೆಲ್ಲಲ್ಪಟ್ಟಿತು. ಗುಂಡಿನ ಸಪ್ಪಳ ಕೇಳಿ ಗಂಡು ಮಂಗ ದೂರ ಓಡಿತು. ಆದರೆ ತನ್ನ ಪ್ರಿಯತಮೆಯ ಮರಣದಿಂದ ದುಃಖಿತವಾಗಿ ಸ್ವಲ್ಪ ಹೊತ್ತಿನಲ್ಲೇ ಹಿಂದಿರುಗಿತು. ಇತ್ತ ರಾಬರ್ಟರು ಮೃತಮಂಗವನ್ನೂ ಮರಿಯನ್ನೂ ತೆಗೆದುಕೊಂಡು ತಮ್ಮ ನಿವಾಸದತ್ತ ಹೊರಟರು. ಅಷ್ಟರಲ್ಲಿ ಕರ್ಣಕರ್ಕಶ ಸಪ್ಪಳ ಅವರ ಕಿವಿಯ ಮೇಲೆ ಬಿತ್ತು. ಬೆಚ್ಚಿ ನೋಡಿದರೆ ಗಂಡು ಗೋರಿಲಾ ಗಿಡದ ಮೇಲೆ ಕೂತು ಚೀತ್ಕಾರ ಮಾಡುತ್ತಿತ್ತು. ಗುಂಡು ಹಾಕಲೆಂದು ರಾಬರ್ಟರು ಸಜ್ಜಾಗುವಷ್ಟರಲ್ಲಿ ಅದು ಕಣ್ಮರೆಯಾಯಿತು.

ರಾಬರ್ಟರು ನಿವಾಸಕ್ಕೆ ಮರಳಿದ ಮೇಲೆ ಮರಿಯನ್ನು ತಾಯಿ ಮಂಗನ ಬಳಿ ಇಟ್ಟರು. ಅದಕ್ಕೆ ಪಾಪ, ತಾಯಿ ಸತ್ತಿರುವಳೆಂಬುದೂ ತಿಳಿಯಲಿಲ್ಲ. ಅದು ತಾಯಿಯ ಮೈಮೇಲೆ ಜಿಗಿದಾಡಿ ತಾಯಿಯ ಮೈ ನೆಕ್ಕಲಾರಂಭಿಸಿತು. ಅದನ್ನು ಕಂಡು ಕಲ್ಲೆದೆಯ ರಾಬರ್ಟರೂ ಮರುಗಿದರು. ತಾಯಿಯನ್ನು ಕೊಂದು ಈ ಮರಿಯನ್ನು ಪರದೇಶಿಮಾಡಿದೆನೆಂದು ಅವರಿಗನಿಸಿತು. ಆಗ ಅವರಿಗೆ ಅವರ ಮಗ ಜೋಸೆಫ್‌ನ ನೆನಪಾಯಿತು. (ಆತ ಐದು ವರ್ಷದವನಿದ್ದ.) ಮಂಗನ ಮರಿ ಬಹಳ ಮುದ್ದಾಗಿತ್ತು. ಅದಕ್ಕೆ ಮಾತೃವಿಯೋಗದ ದುಃಖವಾಗಬಾರದೆಂದು ತಾಯಿ-ಮಂಗನ ಶವದಲ್ಲಿ ರಾಸಾಯನಿಕ ದ್ರವ್ಯಗಳನ್ನು ತುಂಬಿ ಅದನ್ನು ಇದ್ದಕ್ಕಿದ್ದಂತೆ ಇಟ್ಟುಬಿಟ್ಟರು. ಮರಿ ಆ ಮೃತದೇಹದ ಮೇಲೆ ಆಡಿ ಸಮಾಧಾನ ಹೊಂದುತ್ತಿತ್ತು.

ಒಂದು ರಾತ್ರಿ ಅವರು ತಮ್ಮ ಚಿಕ್ಕ ಡೇರೆಯಲ್ಲಿ ಮಲಗಿಕೊಂಡಾಗ ಎದೆಯ ಮೇಲೆ ಏನೋ ಭಾರವಾದ ಪದಾರ್ಥ ಬಿದ್ದಂತೆನಿಸಿತು. ಕಣ್ತೆರೆದು ನೋಡಿದಾಗ ಅದು ಗಂಡು ಗೋರಿಲ್ಲಾ ಎಂದು ಗೊತ್ತಾಯಿತು. ತಮ್ಮ ಅವಸ್ಥೆ ಮುಗಿಯಿತೆಂದೇ ತಿಳಿದರವರು. ಏಕೆಂದರೆ ಸಿಟ್ಟಿಗೆದ್ದ ಗೋರಿಲ್ಲಾದ ಶಕ್ತಿ ಹತ್ತು ಜನರ ಶಕ್ತಿಯಷ್ಟಿರುತ್ತದೆ. ನಿಶ್ಶಸ್ತ್ರ ಮನುಷ್ಯನ ಆಟ ಅದರ ಮುಂದೆ ನಡೆಯಲಾರದು. ಎದೆಯ ಮೇಲೆ ಕೂತ ಗೋ-ರಿಲ್ಲಾ ಇನ್ನು ತನ್ನ ಕುತ್ತಿಗೆಯನ್ನು ಹಿಚುಕುತ್ತದೆಂದು ತಿಳಿದಾಕ್ಷಣವೆ ಅವರು ಎಲ್ಲ ಶಕ್ತಿಯನ್ನು ಒಟ್ಟುಗೂಡಿಸಿ ಚೀರಿದರು. ಕೂಡಲೆ ರಾಬರ್ಟರ ಸಹಕಾರಿಗಳು ಧಾವಿಸಿ ಬಂದರು. ಆದರೆ ಅಷ್ಟರಲ್ಲಿ ಗೋರಿಲ್ಲಾ ಕತ್ತಲೆಯಲ್ಲಿ ಕಣ್ಮರೆಯಾಗಿತ್ತು.

ಇದರಿಂದ ರಾಬರ್ಟರ ಚಿತ್ತದ ಮೇಲೆ ಎಂದೂ ಅಳಿಯದ ಹೆದರಿಕೆಯ ಮುದ್ರೆ ಉಳಿಯಿತು. ಮನೆಗೆ ಬಂದೊಡನೆಯೆ ಅವರು ಮೃತ ಮಂಗನನ್ನೂ ಮರಿ ಮಂಗನನ್ನೂ ಒಂದು ಪಂಜರದಲ್ಲಿ ಹಾಕಿ ಇಟ್ಟರು. ಮುಂದೆ ಜೋಸೆಫ್ ಈ ಮರಿ ಮಂಗನೊಂದಿಗೆ ಆಡತೊಡಗಿದ. ಆಗ ಒಂದು

ವಿಲಕ್ಷಣ ಘಟನೆಯಾಯಿತು.

ಒಂದು ದಿನ ಜೋಸೆಫ್ ಮರಿಯನ್ನು ಪಂಜರದಿಂದ ಹೊರತೆಗೆದು ಅದರೊಂದಿಗೆ ಆಡುತ್ತ ಕೂತಿದ್ದ. ಇಷ್ಟರಲ್ಲಿ ಎಲ್ಲಿಂದಲೊ ಆ ಗಂಡು ಗೋರಿಲ್ಲಾ ಬಂದು ತನ್ನ ಮರಿಯನ್ನೂ ಜೋಸೆಫ್‌ನನ್ನೂ ಎತ್ತಿಕೊಂಡು ಓಡಿತು. ಜೋಸೆಫ್ ಬಲವಾಗಿ ಚೀರಿದ. ಮನೆಯೊಳಗಿನ ಆಳುಗಳು ಹೊರಬಂದರು. ಅವರು ಗೋರಿಲ್ಲಾವನ್ನು ಕಂಡರು. ಆದರೂ ಏನನ್ನೂ ಮಾಡಲು ಸಾಧ್ಯವಿರಲಿಲ್ಲ. ಗೋರಿಲ್ಲಾ ಕ್ಷಣದಲೇ ಮರಿಯನ್ನೂ ಜೋಸೆಫ್‌ನನ್ನೂ ಹೊತ್ತುಕೊಂಡು ಕಾಡಿನಲ್ಲಿ ಮರೆಯಾಗಿತ್ತು.

ರಾಬರ್ಟರು ಆಗ ಗಣಿಗೆ ಹೋಗಿದ್ದರು. ಮನೆಗೆ ಬಂದ ಮೇಲೆ ನಡೆದ ವೃತ್ತಾಂತವನ್ನು ಕೇಳಿ ಮೂರ್ಛಿತರಾದರು. ಎಚ್ಚತ್ತ ಮೇಲೆ ಮತಿಭ್ರಾಂತರಾದವರಂತೆ ಮೊದಲು ಹೆಣ್ಣು ಗೋರಿಲ್ಲಾದ ಶರೀರವನ್ನು ಗುಂಡುಗಳಿಂದ ಛಿನ್ನ ವಿಚ್ಛಿನ್ನಗೊಳಿಸಿ ಅದನ್ನು ಸುಟ್ಟುಬಿಡಲು ಆಳುಗಳಿಗೆ ಹೇಳಿದರು. ಮತ್ತು ಬಂದೂಕನ್ನು ಹಿಡಿದುಕೊಂಡು ಹೊರಬಿದ್ದವರೇ ಎಲ್ಲಿದ್ದರೂ ಜೋಸೆಫ್‌ನನ್ನು ಹುಡುಕುವೆನೆಂದು ನಿರ್ಧಾರ ಮಾಡಿ ಹೊರಟರು. ದಾರಿಯಲ್ಲಿ ಕಾಣುವ ಪ್ರತಿ ಒಂದು ಗೋರಿಲ್ಲಾವನ್ನು ಕೊಲ್ಲತೊಡಗಿದರು. ಜನಮೇಜಯನ ಸರ್ಪಯಜ್ಞದಂತೆ ರಾಬರ್ಟ್ ಗೋರಿಲ್ಲಾ ಯಜ್ಞ ನಡೆಸಿದರು. ಆದರೂ ಜೋಸೆಫ್ ಸಿಗಲಿಲ್ಲ.

ಇತ್ತ ಗಂಡು ಗೋರಿಲ್ಲಾ ತನ್ನ ಮರಿಯೊಂದಿಗೇ ಜೋಸೆಫ್‌ನನ್ನು ತನ್ನ ಗುಂಪಿಗೆ ಒಯ್ದು ಸಾಕತೊಡಗಿತು. ಆದರೆ ಜೋಸೆಫ್‌ನೂ ಅವುಗಳಲ್ಲಿ ಕೂಡಿಕೊಂಡು ಅವುಗಳಂತೆಯೆ ಇರತೊಡಗಿದ್ದೇ ಆಶ್ಚರ್ಯ! ಈತ ಮಂಗಗಳ ನಡೆನುಡಿಗಳನ್ನು ಕಲಿತ. ಸಾಲದ್ದಕ್ಕೆ ಗಿಡದಿಂದ ಗಿಡಕ್ಕೆ ಹಾರಲಿಕ್ಕೂ ಕಲಿತ. ಸುಮಾರು ಐದು ವರ್ಷ ಮಂಗಗಳ ಗುಂಪಿನಲ್ಲಿ ಉಳಿದುದರಿಂದ ಆತ ತನ್ನ ತಾಯ್ನುಡಿಯನ್ನೇ ಮರೆತ.

ಒಂದು ದಿನ ಗೋರಿಲ್ಲಾ ಗುಂಪಿನೊಂದಿಗೆ ಜೋಸೆಫ್ ಅಡವಿಯಲ್ಲಿ ಓಡಾಡುತ್ತಿದ್ದಾಗ ಒಂದು ಶಿಕಾರಿ ಗುಂಪಿನ ಕೈಯಲ್ಲಿ ಸಿಕ್ಕಿಬಿದ್ದ. ಕೆಲ ಗೋರಿಲ್ಲಾ ಸತ್ತವು. ಕೆಲವು ಓಡಿಹೋದವು. ಜೋಸೆಫ್‌ನನ್ನು ಅವರು ಹಿಡಿದರು. ಗೋರಿಲ್ಲಾಗಳ ನಡುವೆ ಈ ಬಿಳಿಯ ಹುಡುಗನನ್ನು ನೋಡಿ ಅವರು ಚಕಿತರಾದರು. ಜೋಸೆಫ್‌ನಿಗೆ ಅವರು ಹಲವು ಪ್ರಶ್ನೆಗಳನ್ನು ಕೇಳಿದರು. ಉತ್ತರವಾಗಿ ಜೋಸೆಫ್ ಮಂಗನಂತೆ ಬರೇ ಚೀರುತ್ತಿದ್ದ. ಇಷ್ಟರಲ್ಲಿ ಅವರಲ್ಲೊಬ್ಬಾತನಿಗೆ ರಾಬರ್ಟ್ಸರ ಮಗನನ್ನು ಗೋರಿಲಾ ಹಾರಿಸಿಕೊಂಡು ಹೋದ ಸುದ್ದಿ ನೆನಪಾಯಿತು. ಆತ ರಾಬರ್ಟರ ಮಿತ್ರನೇ ಆಗಿದ್ದ. ಈತ ರಾಬರ್ಟರ ಮಗನೇ ಇರುವನೆಂದು ಆತ ಉಳಿದ ಬೇಟೆಗಾರರಿಗೆ ಮನವರಿಕೆ ಮಾಡಿಕೊಟ್ಟ. ಅವರೆಲ್ಲರೂ ಕೂಡಿ ಜೊಸೆಫ್‌ನನ್ನು ಕರಕೊಂಡು ರಾಬರ್ಟರ ಮನೆಗೆ ಬಂದರು. ಈ ವರೆಗೆ ಶೋಧಿಸಿ ನಿರಾಶನಾಗಿದ್ದ ರಾಬರ್ಟರು ಈಗ ಅಕಸ್ಮಾತ್ ತನ್ನ ಮಗ ಬಂದುದನ್ನು ಕಂಡು ಸಂತೋಷದಿಂದ ಅವನನ್ನು ಅಪ್ಪಿಕೊಂಡರು. ಆದರೆ ಜೋಸೆಫ್ ಮಂಗನಂತೆ ಚೀತ್ಕಾರವನ್ನೆ ಮಾಡಿದ. ಅದರಿಂದ ಹತಾಶರಾಗಿ ರಾಬರ್ಟ್ ತಲೆ ಹಿಡಿದು ನೆಲಕ್ಕೇ ಕೂತುಬಿಟ್ಟರು

ಬಹಳ ಪರಿಶ್ರಮದಿಂದ ಅವನಿಗೆ ಮತ್ತೆ ಮನುಷ್ಯರಂತೆ ಮಾತಾಡಲು. ತಿರುಗಾಡಲು, ವ್ಯವಹರಿಸಲು ಕಲಿಸಲಾಯಿತಾದರೂ ಮಂಗನಂತೆ ಹಾರಾಡುವ ಗುಣ ಮಾತ್ರ ಉಳಿದೇಬಿಟ್ಟಿತು. ಇಷ್ಟೇ ಅಲ್ಲ. ತನ್ನ ತಮ್ಮ ಫಿಲಿಪ್‌ನಿಗೂ ಆತ ಹಾರುವುದನ್ನು ಕಲಿಸಿದ.

ಒಂದು ದಿನ ಅವರಿಬ್ಬರೂ ಬಂಧುಗಳು ದರ್ಬಾನ್‌ನಗರದಲ್ಲಿ ಒಂದು ಸರ್ಕಸ್ ನೋಡಲು ಹೋಗಿದ್ದರು. ಅದರಲ್ಲಿ ಒಂದು ಮಂಗ ಒಂದು ಜೋಕಾಲಿಯಿಂದ ಇನ್ನೊಂದು ಜೋಕಾಲಿಗೆ ಹಾರಿಕೊಳ್ಳುತ್ತಿತ್ತು. ಅದನ್ನು ಕಂಡು ತಾನೂ ಹೀಗೆ ಹಾರಬಹುದು ಎಂದು ಜೋಸೆಫ್‌ನಿಗನ್ನಿಸಿ

ಆತ ಹಾಗೆ ಮ್ಯಾನೇಜರನಿಗೆ ತಿಳಿಸಿದ. ೬೦ ಅಡಿ ಎತ್ತರದಲ್ಲಿ ಕಟ್ಟಿದ್ದ ಆ ಎರಡು ಜೋಕಾಲಿಗಳ ನಡುವಿನ ಅಂತರ ೩೦ ಅಡಿಯಾಗಿತ್ತು. ಇಷ್ಟೆತ್ತರದಲ್ಲಿ ಇಷ್ಟು ದೂರ ಜಿಗಿಯುವುದು ಮಾನವನಿಗೆ ಸಾಧ್ಯವಿಲ್ಲ. ಆದ್ದರಿಂದ ಈತನಾರೊ ಹುಚ್ಚನಿರಬೇಕೆಂದು ಆತ ನಕ್ಕ. ಆದರೆ ಜೋಸೆಫ್ ಗಟ್ಟಿಸಿ ಹೇಳಿದ್ದರಿಂದ ನಾಳೆ ನೋಡೋಣ ಎಂದ.

ಮರುದಿನ ಈ ಸುದ್ದಿ ನಗರದಲ್ಲೆಲ್ಲ ಹಬ್ಬಿ ಅಸಂಖ್ಯ ಪ್ರೇಕ್ಷಕರು ಆಟ ನೋಡಲು ಬಂದರು. ಅಂದು ಮಂಗನ ಬದಲು ಜೋಸೆಫ್ ಮತ್ತು ಫಿಲಿಪ್ ಇಬ್ಬರೂ ಜೋಕಾಲಿಯ ಮೇಲೆ ಏರಿದರು. ಎಲ್ಲರ ಕಣ್ಣು ಅವರನ್ನೇ ನೋಡುತ್ತಿದ್ದವು. ಕಣ್ರೆಪ್ಪೆ ಬಡಿಯುವುದರೊಳಗೇ ಜೋಸೆಫ್ ಸರಕ್ಕನೆ ಈ ಜೋಕಾಲಿಯಿಂದ ಆ ಜೋಕಾಲಿಗೆ ಹಾರಿ ತೋರಿಸಿದ. ಅವನ ಹಿಂದಿನಿಂದೇ ಫಿಲಿಪ್‌ನೂ ಹಾರಿದ. ನೋಡಿದ ಪ್ರೇಕ್ಷಕರ ಕರತಾಡನದಿಂದ ಥಿಯೇಟರೆಲ್ಲ ಪ್ರತಿಧ್ವನಿತವಾಯಿತು. ಸರ್ಕಸ್ ಇತಿಹಾಸದಲ್ಲೇ ಮಾನವನು ಈ ರೀತಿ ಹಾರಿದ್ದು ಇದು ಮೊದಲ ಬಾರಿ.

ಅವರಿಬ್ಬರೂ ಕೆಳಗಿಳಿದಾಗ ಅಭಿನಂದನೆಯ ಸುರಿಮಳೆಯೆ ಅವರ ಮೇಲೆ ಆಯಿತು. ಮ್ಯಾನೇಜರ್ ಅವರನ್ನು ಅಪ್ಪಿಕೊಂಡ; 'ಕೇಳಿದಷ್ಟು ಸಂಬಳ ಕೊಡುತ್ತೇವೆ. ನೀವು ನಮ್ಮೊಟ್ಟಿಗೆ ಬರಲೇಬೇಕು' ಎಂದ. ಅದಕ್ಕೆ ಜೋಸೆಫ್, 'ತಂದೆಯವರನ್ನು ಕೇಳಿ ತಿಳಿಸುತ್ತೇನೆ'ಂದು ಭರವಸೆ ಇತ್ತ. ಆದರೆ ಮ್ಯಾನೇಜರ್ ಅವರು ತಿಳಿಸುವವರೆಗೆ ತಡೆಯಬೇಕಲ್ಲ; ಆತನೂ ಅವರೊಂದಿಗೇ ಅವರ ಮನೆಗೆ ಬಂದ. ಕಡೆಗೆ ಪ್ರತಿ ತಿಂಗಳೂ ಮೂರು ಸಾವಿರ ಪೌಂಡ್ ಸಂಬಳದ ಕರಾರು ಮಾಡಿ ಅವರಿಬ್ಬರೂ ಸರ್ಕಸ್ ಸೇರಬೇಕೆಂದಾಯಿತು.

ಇಬ್ಬರೂ ಆ ಸರ್ಕಸ್ಸಿನಲ್ಲಿ ಎರಡು ವರ್ಷ ಕೆಲಸ ಮಾಡಿದರು. ಈ ಮಾನವೀ ಪ್ರಾಣಿಗಳ ಸರ್ಕಸ್ ನೋಡಲು ಜನ ಕಿಕ್ಕಿರಿಯುತ್ತಿದ್ದರು. ಮೊದಮೊದಲು ಇವರ ಕೆಳಗೆ ಜಾಳಿಗೆಯನ್ನು ಹಿಡಿಯುತ್ತಿದ್ದಿಲ್ಲ. ಆದರೆ ಮುಂದೆ ಸಂರಕ್ಷಣಾರ್ಥ ಇರಲೇಬೇಕೆಂದು ಮಾಲಕರು ಒತ್ತಾಯಪಡಿಸಿದ್ದರಿಂದ ಕೆಳಗೆ ಜಾಳಿಗೆ ಹಿಡಿಯಲು ಆರಂಭವಾಯಿತು. ಅಲ್ಲಿ ಇರುವಾಗಲೇ ಜೋಸೆಫ್ ಅಲ್ಲಿಯೇ ಕೆಲಸ ಮಾಡುತ್ತಿದ್ದ ಮೇರಿ ಎಂಬವಳನ್ನು ಪ್ರೀತಿಸಿ ಮದುವೆಯಾದ. ಮೇರಿ ಸರ್ಕಸ್ಸಿನಲ್ಲಿ ತಂತಿಯ ಮೇಲಿನ ಆಟ ಮಾಡುತ್ತಿದ್ದಳು. ಲಗ್ನ ವಾದಮೇಲೆ ಜೋಸೆಫ್ ಮೇರಿ ಮತ್ತು ಫಿಲಿಪ್ ಮನೆಗೆ ಮರಳಿದರು. ಆಗ ಅವರ ತಂದೆ ಮರಣಾಸನ್ನರಾಗಿದ್ದರು. ಮುಂದೆ ಅವರು ಹಾಸಿಗೆ ಬಿಟ್ಟು ಏಳಲೇ ಇಲ್ಲ.

ಐದು ವರ್ಷ ಗೋರಿಲ್ಲಾಗಳೊಂದಿಗಿದ್ದ ಜೋಸೆಫ್ ತನ್ನ ಮಿತ್ರ ಮಂಗನನ್ನು ಮರೆತಿರಲಿಲ್ಲ. ಈಗ ಅದನ್ನು ಶೋಧಿಸಲು ಹೊರಟ. ಅದು ಇದ್ದ ಸ್ಥಳ ಈತನಿಗೆ ಗೊತ್ತಿತ್ತು. ಅಲ್ಲಿ ಹೋಗಿ ಚೀತ್ಕಾರ ಮಾಡಿದ. ಕೂಡಲೇ ಮಂಗ ಹಾರುತ್ತ ಹಾರುತ್ತ ಮುಂದೆ ಬಂತು. ಜೋಸೆಫ್‌ನ ಕುತ್ತಿಗೆಗೇ ಅಪ್ಪಿಕೊಂಡಿತು. ಅದನ್ನು ಕರೆದುಕೊಂಡು ಆತ ಮನೆಗೆ ಮರಳಿದ. ಆ ಮಂಗ ಕೊನೆಯ ವರೆಗೂ ಅವರೊಂದಿಗಿದ್ದು ಅವರ ಸರ್ಕಸ್ ಆಟದಲ್ಲಿ ತಾನೂ ಭಾಗಿಯಾಗುತ್ತಿತ್ತು.

ಯುರೋಪಿನ ಬೇರೆ ಬೇರೆ ಸರ್ಕಸ್‌ಗಳಲ್ಲಿ ಕೆಲಸಮಾಡಿ ಈತ ಅತುಲ ಸಂಪತ್ತನ್ನೂ ಕೀರ್ತಿಯನ್ನೂ ಸಂಪಾದಿಸಿದ. ನೆಲ್ಸನ್ ಬಂಧುಗಳು ಅಮೇರಿಕೆಯ ರಿಂಗ್‌ಲಿಂಗ್ ಸರ್ಕಸ್ಸಿನಲ್ಲಿ ಸೇರಿದರು. ಇಂದಿಗೂ ಈ ಸರ್ಕಸ್ ಜಗತ್ತಿನ ಅತಿದೊಡ್ಡ ಸರ್ಕಸ್ ಎಂದು ಗಣಿಸಲ್ಪಡುತ್ತದೆ. ಈ ಸರ್ಕಸ್ ಕಂಪನಿಯಲ್ಲಿ ಈಗ ಹತ್ತು ಸಾವಿರಕ್ಕೂ ಮಿಕ್ಕಿ ಆಟಗಾರರಿದ್ದಾರೆ. ಇದರಿಂದಲೇ ಇದು ಎಷ್ಟು ದೊಡ್ಡ ಸರ್ಕಸ್ ಎಂಬುದನ್ನು ಊಹಿಸಬಹುದು.

ಅಮೇರಿಕೆಯಲ್ಲಿದ್ದಾಗ ದುಡ್ಡು ಕೀರ್ತಿಗಳ ಕೊರತೆಯಾಗಲಿಲ್ಲವಾದರೂ ಮಾಲಕರೊಂದಿಗೆ ಹೊಂದದ್ದರಿಂದ ಇವರು ಆ ಸರ್ಕಸ್ ಬಿಟ್ಟು

ಮರಳಿ ಯುರೋಪಿಗೆ ಬಂದರು.

೧೯೫೫ ರಲ್ಲಿ ಇವರನ್ನು ಭಾರತದಲ್ಲಿ ಕಾರ್ಲೇಕರ ಗ್ರ್ಯಾಂಡ್ ಸರ್ಕಸ್ ಕರೆಸಿಕೊಂಡಿತು. ಇವರಿಗೂ ಭಾರತವನ್ನು ನೋಡುವ ಆಕಾಂಕ್ಷೆ ಇತ್ತು. ಯೋಗ ಬಂದದ್ದರಿಂದ ಆಮಂತ್ರಣಕ್ಕೆ ಒಪ್ಪಿದರು. ತಿಂಗಳ ಐದು ಸಾವಿರ ರೂಪಾಯಿ ಸಂಬಳಕ್ಕೆ ಒಪ್ಪಿಕೊಂಡು ಕಾರ್ಲೇಕರ ಗ್ರ್ಯಾಂಡ್ ಸರ್ಕಸ್ಸಿಗೆ ಬಂದರು. ಇಸಾಕೊ ಕಂಪನಿಯೊಂದಿಗೆ ಸ್ಪರ್ಧಿಸಲೆಂದು ಇವರನ್ನು ಕಾರ್ಲೇಕರರು ಕರೆಸಿದ್ದರೆಂದು ನೆಲ್ಸನ್ ಬಂಧುಗಳಿಗೆ ತಿಳಿದ ಕೂಡಲೆ ಒಂದು ಅದ್ಭುತವನ್ನು ತೋರಿಸಬೇಕೆಂದು ಅವರು ಯೋಜಿಸಿದರು. ಹುಗಲಿ ನದಿಯಮೇಲಿಂದ ತಾವು ಹಾರುವುದಾಗಿ ಕಲಕತ್ತೆಯಲ್ಲಿ ಸಾರಿದರು. ಹುಗಲಿಯ ಮೇಲಿರುವ ಈಗಿನ ಸೇತುವೆ ಆಗುವ ಮೊದಲು ಅಲ್ಲಿ ಇದ್ದ ಪೂಲನ್ನು ನಾವೆಗಳು ಹೋಗುಬರುವಾಗೊಮ್ಮೆ ಮೇಲಕ್ಕೆತ್ತಿ ಮತ್ತೆ ಕೆಳಗಿಟ್ಟು ಆ ಮೇಲೆ ರಹದಾರಿಯನ್ನು ಮುಂದುವರಿಸುತ್ತಿದ್ದರು.

ನೆಲ್ಸನ್‌ರ ಹಾರಾಟದ ಸುದ್ದಿಕೇಳಿ ಸುಮಾರು ಎರಡು ಲಕ್ಷ ಜನ ನದಿ ದಂಡೆಯಮೇಲೆ ಕೂಡಿದ್ದರು. ಹೌರಾ ಪೂಲಿನ ಎರಡೂ ಕಡೆಗೆ ಎರಡು ಜೋಕಾಲಿಗಳನ್ನು ಕಟ್ಟಲಾಗಿತ್ತು. ಒಂದರಲ್ಲಿ ಜೋಸೆಫ್ ಇನ್ನೊಂದರಲ್ಲಿ ಫಿಲಿಪ್ ಏರಿದರು. ಜೋಸೆಫ್ ಮೊಣಕಾಲಿನಲ್ಲಿ ಜೋಕಾಲಿಗೆ ತೂಗುಬಿದ್ದ. ಆಗ ಫಿಲಿಪ್ ತನ್ನ ಸರ್ವಶಕ್ತಿಯನ್ನು ಒಟ್ಟೈಸಿ ಅಂತರಾಳದಲ್ಲಿ ಹಾರಿ ಮೂರು ಸುತ್ತು ಹಾಕಿ ಆ ದಂಡೆಗಿದ್ದ ಜೋಸೆಫ್‌ನ ಕೈಹಿಡಿದ. ನೆಲ್ಸನ್ ಬಂಧುಗಳ ಆ ಐತಿಹಾಸಿಕ ಹಾರಾಟ ಯಶಸ್ವಿಯಾಯಿತು.

ಪ್ರೇಕ್ಷಕರ ಸಂತೋಷವನ್ನು ಶಬ್ದಗಳಿಂದ ಬಣ್ಣಿಸುವುದು ಅಸಾಧ್ಯವೇ ಸೈ. ನೆಲ್ಸನ್‌ಬಂಧುಗಳ ಕೀರ್ತಿ ದಶದಿಕ್ಕಿನಲ್ಲಿ ವ್ಯಾಪಿಸಿತು. ಇಸಾಕೊ ಕಂಪನಿಗೆ ಮಾತ್ರ ಬೇಗನೆ ಡೇರೆ ಕೀಳಬೇಕಾಯಿತು.

ಕಾರ್ಲೇಕರ ಸರ್ಕಸ್‌ನೊಂದಿಗೆ ನೆಲ್ಸನ್ ಬಂಧುಗಳು ಎರಡು ವರ್ಷದ ಕರಾರು ಮಾಡಿಕೊಂಡಿದ್ದರು. ಈ ಎರಡು ವರ್ಷಗಳಲ್ಲಿ ಭಾರತದಲ್ಲಷ್ಟೇ ಅಲ್ಲದೆ ಸಿಲೋನ್, ಮಲಯಾ, ಜಾವಾ, ಸುಮಾತ್ರಾ, ಫಿಲಿಪಾಯಿನ್ಸ್, ಸಯಾಮ, ಬ್ರಹ್ಮದೇಶ ಮುಂತಾದ ಕಡೆಗಳಲ್ಲೂ ತಿರುಗಿ ದುಡ್ಡನ್ನೂ ಕೀರ್ತಿಯನ್ನೂ ಬಹುವಾಗಿ ಸಂಪಾದಿಸಿದರು.

ಆಮೇಲೆ ಅವರು ಯುರೋಪಿಗೆ ತೆರಳಿದರು. ಭಾರತದ ಇನ್ನಿತರ ಕಂಪನಿಗಳೂ ಅವರನ್ನು ಕರೆದವು. ಆದರೆ ಅವರು ಯಾವ ಕಂಪನಿಯನ್ನೂ ಸೇರಲಿಲ್ಲ.

೧೯೩೦ ರಲ್ಲಿ ನೆಲ್ಸನ್ ಬಂಧುಗಳು ಕಾರ್ಲ-ಹೆಗನಬೆಗ್ ಎಂಬ ಸರ್ಕಸ್ಸಿನಲ್ಲಿದ್ದರು. ಕ್ಯಾಂಪು ಹ್ಯಾಂಬರ್ಗ್‌ನಲ್ಲಿತ್ತು. ಒಂದು ದಿನ ಫಿಲಿಪ್‌ನ ಮೈಯಲ್ಲಿ ನೆಟ್ಟಗಿರಲಿಲ್ಲ. ಆದರೂ ಆತ ಜೋ-ಕಾಲಿ ಏರಿದ. ನಿತ್ಯದ ಸಾಮಾನ್ಯ ಆಟ ಮುಗಿಸಿ ಕೊನೆಯದಾಗಿ ಅಂತರಾಳದಲ್ಲಿ ನಾಲ್ಕು ಸುತ್ತು ಹಾಕಿ ಜೋಸೆಫ್‌ನ ಕೈ ಹಿಡಿಯಲು ಹಾರಿಕೊಂಡ. ಆದರೆ ಮೈಯಲ್ಲಿ ವಿಪರೀತ ಜ್ವರ ಏರಿದ್ದರಿಂದ ಜೋಸೆಫ್‌ನ ಕೈ ಹಿಡಿಯಲಿಕ್ಕಾಗದೆ ಕೆಳಗೆ ಬಿದ್ದ. ಕೆಳಗೆ ಜಾಳಿಗೆಯೇನೊ ಇತ್ತು. ಆದರೆ ಫಿಲಿಪ್ ಜಾಳಿಗೆ ಬಿಟ್ಟು ಹೊರಗಡೆ ಕಬ್ಬಿಣ ಸಲಾಕೆಯೊಂದರ ಮೇಲೆ ಅಪ್ಪಳಿಸಿ ತತ್ಕಾಲ ಗತಪ್ರಾಣನಾದ ತಲೆಬುರುಡೆ ಒಡೆದು ಮೆದುಳು ಹೊರ ಬಂದಿತ್ತು. ಅದನ್ನು ಕಂಡವನೇ ಜೋಸೆಫ್ ಮೂರ್ಛಿತನಾದ.

ತಮ್ಮನ ಮೃತ್ಯುವಿನಿಂದ ಅಣ್ಣನ ಹೃದಯದ ಮೇಲೆ ವಜ್ರಾಘಾತವೆ ಆಯಿತು. ಅಂದಿನಿಂದ ಆತ ಭ್ರಮಿಷ್ಠನಂತೆ ಇರುತ್ತಿದ್ದ. ಆಗ ಮೇರಿ ಅವನನ್ನೂ ಅವನ ಗೋರಿಲ್ಲಾ ಮಿತ್ರನನ್ನೂ ಕರೆದುಕೊಂಡು ದ. ಆಫ್ರಿಕೆಯ ತಮ್ಮ ಮನೆಗೆ ಹೋದಳು. ಮುಂದೆ ೧೯೩೩ ರಲ್ಲಿ ಅಂತರಾಳದ ಜೋಕಾಲಿಯ ಆದ್ಯಪ್ರವರ್ತಕನಾದ ಜೋ-ಸೆಫ್ ತಲೆಕೆಟ್ಟಸ್ಥಿತಿಯಲ್ಲೇ ಮರಣ ಹೊಂದಿದ. *

ವ್ಯಕ್ತ ನಾದದಂತೆ ಅವ್ಯಕ್ತ ನಾದವೂ ಇದೆ!

# ಶಬ್ದಬ್ರಹ್ಮದ ಗೊಮ್ಮಟದಲ್ಲಿ

ಪ್ರಾಚೀನ ಭಾರತೀಯ ತತ್ವಜ್ಞಾನಿಗಳು "ಶಬ್ದಗುಣ ಆಕಾಶಃ" ಅಂದರೆ ಆಕಾಶದ ಗುಣವು ಶಬ್ದಕ್ಕೆ ಆಶ್ರಯವಾಗಿರುವುದು ಎಂದಿದ್ದಾರೆ. ಆದರೆ ನಿಜವಾಗಿ ಶಬ್ದವು ವಾಯುವಿನ ಗುಣ. ಗಾಳಿಯಿಲ್ಲದೆ ಶಬ್ದ ಕೇಳಿಸುವಂತಿಲ್ಲ. ಶಬ್ದವನ್ನು ಅದು ಹುಟ್ಟಿದ ಸ್ಥಾನದಿಂದ ನಮ್ಮ ಕಿವಿಗೆ ತಲುಪಿಸುವುದು ವಾಯು.

ಒಂದು ಕಲ್ಲನ್ನು ಶಾಂತವಾದ ನೀರಿಗೆ ಒಗೆದರೆ ನೀರಿನಲ್ಲಿ ಅಲೆಗಳೇಳುತ್ತವೆ. ಹಾಗೆಯೆ ಯಾವುದಾದರೊಂದು ವಸ್ತುವು ಕಂಪಿಸಿದರೆ ಅದು ತನ್ನ ಸುತ್ತಲ ಗಾಳಿಯ ಅಣುಗಳನು ಲಯಬದ್ಧವಾಗಿ ಒತ್ತಿಬಿಡುತ್ತದೆ. ಆಗ ಗಾಳಿಯನ್ನು ಎಲ್ಲ ದಿಕ್ಕುಗಳಲ್ಲಿ ಒಮ್ಮೆ ಒತ್ತಿ ಒಮ್ಮೆ ಸಡಿಲುಬಿಟ್ಟಂತೆ ಆಗಿ ಒಂದರ ಹಿಂದೊಂದು ತೆರೆಗಳು ಪಸರಿಸುತ್ತವೆ. ಅವು ಕಿವಿಗೆ ಅಪ್ಪಳಿಸುವಾಗ ನಮಗೆ ಶಬ್ದದ ಪ್ರಜ್ಞೆಯಾಗುತ್ತದೆ.

ಆದರೆ ಪದಾರ್ಥಗಳು ಕಂಪಿಸಿದಾಗೆಲ್ಲ ನಮಗೆ ಶಬ್ದ ಕೇಳಿಸುವುದೆಂದಲ್ಲ. ಯಾವುದಾದರೊಂದು ವಸ್ತು ಕನಿಷ್ಠ ಸೆಕೆಂಡಿಗೆ ೧೬ ಸಲ ಕಂಪಿಸಿ ಅಲೆಗಳನ್ನು ಹುಟ್ಟಿಸಿ ಬಿಟ್ಟರಷ್ಟೇ ಅದು ನಮಗೆ ಕೇಳಿಸುತ್ತದೆ. ಇದು ನಮ್ಮ ಕಿವಿಗೆ ಸಿಗಬಹುದಾದ ಅತಿ ಗಂಭೀರವಾದ, ಮಂದ್ರವಾದ ಧ್ವನಿ.

ಪ್ರತಿಸೆಕೆಂಡಿನ ಕಂಪನಗಳ ಸಂಖ್ಯೆ ಹೆಚ್ಚುತ್ತ ಹೋದಂತೆ ಶಬ್ದ ತೀವ್ರವಾಗುತ್ತ ಅಂದರೆ ಸೀರಾಗುತ್ತ ಹೋಗುತ್ತದೆ. ಗಂಡಸರ ಕಂಠವು ಕಡಿಮೆ ಕಂಪನಗಳನ್ನು ಹುಟ್ಟಿಸುವುದರಿಂದ ಅದು ಗಂಭೀರ ಮತ್ತು ಹೆಂಗಸರದು ಹೆಚ್ಚು ಕಂಪನಗಳನ್ನುಂಟುಮಾಡುವುದರಿಂದ ಅದು ತೀವ್ರವಾಗಿರುತ್ತದೆ. ತೀವ್ರ ಸ್ವರ ಕೇಳಿಸುವುದಕ್ಕೂ ಒಂದು ಮಿತಿ ಇದೆ. ಯಾವುದಾದರೊಂದು ಪದಾರ್ಥವು ಸೆಕೆಂಡಿಗೆ ೨೦,೦೦೦ ಕ್ಕೂ ಮಿಕ್ಕಿ ಕಂಪನಗಳನ್ನು ಹುಟ್ಟಿಸಿಬಿಟ್ಟರೆ ಅದೂ ನಮಗೆ ಕೇಳಿಸಲಾರದು.

ಹೀಗೆ ಸೆಕೆಂಡಿಗೆ ೧೬ ಮತ್ತು ೨೦,೦೦೦ ಕಂಪನಗಳ ನಡುವಿನ ಶಬ್ದಗಳು ಮಾನವನ ಶ್ರವಣಮಿತಿಯಾಗಿವೆ. ಆದರೆ ಎಲ್ಲ ಪ್ರಾಣಿಗಳೂ ಈ ಮಿತಿಗೊಳಪಟ್ಟಿಲ್ಲ. ನಮಗೆ ಕೇಳಿಸಲಾರದಷ್ಟು ತೀವ್ರವಾದ ಶಬ್ದಗಳು ನಾಯಿಗಳಿಗೆ ಕೇಳಿಸಬಲ್ಲವು. ಆದ್ದರಿಂದ "ನಾಯಿ ವ್ಹಿಸಲ್" ಗಳನ್ನು ನಿರ್ಮಿಸಲು ಸಾಧ್ಯವಾಗಿದೆ. ಈ ವ್ಹಿಸಲ್‌ಗಳನ್ನೂದಿದರೆ ಮಾನವರಿಗೆ ಕೇಳಿಸದು. ಆದರೆ ನಿಮ್ಮ ನಾಯಿ ಅದನ್ನು ಕೇಳಿ ನಿಮ್ಮತ್ತ ಓಡಿಬರುತ್ತದೆ. ಬೇರೆ ಕೆಲ ಪ್ರಾಣಿಗಳು ಅದಕ್ಕೂ ತೀವ್ರವಾದ ಶಬ್ದಗಳನ್ನು ಕೇಳುವ ಸಾಮರ್ಥ್ಯ ಪಡೆದಿವೆ. ಈಗ ತಿಳಿದ ಮಟ್ಟಿಗೆ ಅತ್ಯಂತ ತೀವ್ರವಾದ ಶಬ್ದಗಳನ್ನು ಕೇಳಿಸುವ ಕಿವಿಗಳು ಗಬ್ಬಿಲ (ತೊಗಲು ಬಾವಲಿ) ಗಳಿವೆ. ಅವು ತಮ್ಮ ವಿಚಿತ್ರ ಕಂಠದಿಂದ ಸೆಕೆಂಡಿಗೆ ೩೦,೦೦೦ ದಿಂದ ೮೦,೦೦೦ ಕಂಪನಗಳ ವರೆಗೆ ಹುಟ್ಟಿಸುತ್ತ ಅವುಗಳ ಪ್ರತಿಧ್ವನಿಯನ್ನಾಲಿಸುತ್ತ ಅದರ ಬಲದಿಂದ ಕಗ್ಗತ್ತ

ಲಲ್ಲೂ ಹಾರಾಡುತ್ತವೆ. ಪ್ರತಿಧ್ವನಿಗಳು ಕೇಳಿಸಿದರೆ ಆ ದಿಶೆಯಲ್ಲಿ ಏನೋ ಅಡ್ಡಬಂದಿದೆಯೆಂದು ಅವಕ್ಕೆ ಗೊತ್ತಾಗುತ್ತದೆ.

ಮನುಷ್ಯರಿಗೆ ಕೇಳಿಸದಷ್ಟು ತೀವ್ರವಾದ ಶಬ್ದವನ್ನು "ಶ್ರವಣಾತೀತ ಶಬ್ದ" (ultrasonic sound) ಎನ್ನುತ್ತಾರೆ. ವಿಜ್ಞಾನಿಗಳು ಇಂಥ ಶಬ್ದದಿಂದ ಆಶ್ಚರ್ಯಕರ ಕೆಲಸಗಳನ್ನು ಮಾಡಿಸುತ್ತಿದ್ದಾರೆ. ಅದರ ಸಹಾಯದಿಂದ ರಕ್ತಸಂಚಾರವನ್ನು ತೀವ್ರಗೊಳಿಸಿ, ಕ್ಯಾನ್ಸರಿನಂಥ ವ್ರಣಗಳನ್ನೂ ರೋಗಗಳನ್ನೂ ಗುಣಪಡಿಸಲಾಗುತ್ತದೆ. ಅತಿ ಹೆಚ್ಚು ತೀವ್ರವಾದ ಶ್ರವಣಾತೀತ ಶಬ್ದದಿಂದ ಉಕ್ಕಿನ ಕಂಬಿಗಳಲ್ಲಿ ಬೇಕಾದ ಆಕಾರದ ತೂತುಗಳನ್ನು ಕೊರೆಯಬಹುದು, ಪದಾರ್ಥಗಳಲ್ಲಿ ಸೂಕ್ಷ್ಮವಾದ ಬಿರುಕುಗಳುಂಟೇ ಎಂದು ನೋಡಬಹುದು, ಲೋಹದ ವಸ್ತುಗಳಲ್ಲಿ ಚಿಕ್ಕ ಪೊಳ್ಳುಗಳಿವೆಯೇ ಎಂದು ಕಂಡುಹಿಡಿಯಬಹುದು, ದ್ರವಪದಾರ್ಥಗಳನ್ನು ಘನೀಕರಿಸಬಹುದು.

ಶಬ್ದಗಳನ್ನು ನಾದ, ಸಪ್ಪಳ, ಸ್ಫೋಟ ಎಂದು ವಿಂಗಡಿಸಬಹುದು. ನಾದಗಳೆಂದರೆ ಪೂರ್ಣವಾಗಿ ಒಂದೇ ಕ್ರಮದಿಂದ ಆಗುವ ಕಂಪನಗಳಿಂದ ಹುಟ್ಟಿದವುಗಳು; ಸಪ್ಪಳವೆಂದರೆ ಯದ್ವಾತದ್ವಾ ಆಗುವ ಕಂಪನಗಳಿಂದಾದವು; ಸ್ಫೋಟವೆಂದರೆ ಗಾಳಿಯ ಒಂದೇ ಪ್ರಚಂಡ ಒತ್ತಾಟ.

ಶಬ್ದದ "ಗಟ್ಟಿತನ" ಬೇರೆ, "ತೀವ್ರತ್ವ" ಬೇರೆ ಎಂದು ನಾವು ಮನಗಾಣಬೇಕು. ಒಂದು ಲೋಹದ ತುಂಡನ್ನು ನೀವು ಹೆಚ್ಚು ಹೆಚ್ಚು ಬಲವಾಗಿ ಬಡಿದಂತೆ ಅದರ ಶಬ್ದ ಗಟ್ಟಿಯಾಗುತ್ತ ಹೋಗುತ್ತದೆ. ಆದರೆ ಅದರ ತೀವ್ರತೆಯೇನೂ ಹೆಚ್ಚುವುದಿಲ್ಲ ಹಾರ್ಮೋನಿಯಂನ ತಿದಿಯನ್ನು ಜೋರಾಗಿ ಒತ್ತಿದರೂ ಮೆತ್ತಗೆ ಒತ್ತಿದರೂ "ಸ" ಪಟ್ಟಿಯಿಂದ "ಸ" ವೇ ಹೊರಡುತ್ತದೆ— ಹೆಚ್ಚುಕಡಿಮೆ ಗಟ್ಟಿತನದಲ್ಲಿ ಮಾತ್ರ.

ಗಟ್ಟಿ ಮತ್ತು ಮೆಲು ದನಿಗಳ ವಿಷಯದಲ್ಲಿ ನಮ್ಮ ಕಿವಿ ವಿಚಿತ್ರವಾಗಿ ವರ್ತಿಸುತ್ತದೆ. ಮೆಲ್ದನಿಗಳ ಸಂಖ್ಯೆಯನ್ನು ಹೆಚ್ಚಿಸಿದರೆ ಅದನ್ನು ನಿಮ್ಮ ಕಿವಿ ಕೂಡಲೆ ಗುರುತಿಸುತ್ತದೆ. ಗಟ್ಟಿದನಿಗಳು ನಾಲ್ಕರ ಬದಲು ಎಂಟು ಸೇರಿದರೂ ಅಂತರವು ನಿಮಗೆ ಅಷ್ಟಾಗಿ ಗಮನಕ್ಕೆ ಬಾರದು.

ಶಬ್ದದ ವೇಗವನ್ನು ಮೊದಲು ಅಳೆದವನು ಸರ್ ಐಜಾಕ್ ನ್ಯೂಟನ್. ದೂರದಲ್ಲಿ ತೋಫು ಹಾರಿಸಿದಾಗ ಪ್ರಕಾಶವು ಗೋಚರವಾದ ಎಷ್ಟು ಸೆಕೆಂಡಿನ ಮೇಲೆ ಶಬ್ದವು ಕೇಳಿಸಿತೆಂದು ನೋಡಿ ಆತ ಶಬ್ದದ ವೇಗವನ್ನು ಗೊತ್ತುಪಡಿಸಿದ. ಆದರೆ ಅವನ ಲೆಕ್ಕಾಚಾರ ತಪ್ಪೆಂದು ಆ ಮೇಲೆ ಕಂಡುಬಂತು. ಕಾರಣವಿಷ್ಟೇ ನ್ಯೂಟನ್ನನು ಗಾಳಿಯ ಉಷ್ಣತೆಯನ್ನು ಗಮನಕ್ಕೆ ತಂದುಕೊಂಡಿರಲಿಲ್ಲ. ಗಾಳಿ ಉಷ್ಣವಾಗಿದ್ದಷ್ಟೂ ಶಬ್ದವು ವೇಗವಾಗಿ ಧಾವಿಸುತ್ತದಲ್ಲದೆ ಚೆನ್ನಾಗಿಯೂ ಸಾಗುತ್ತದೆ. ಈಗಿನ ಲೆಕ್ಕಾಚಾರದಂತೆ ಸಮುದ್ರಮಟ್ಟದಲ್ಲಿ, ಗಾಳಿಯ ಉಷ್ಣತೆ ೩೨ ಅಂಶ ಫೆರನ್‌ಹೀಟ್‌ನಷ್ಟಿದ್ದಾಗ, ಶಬ್ದವು ಸೆಕೆಂಡಿಗೆ ೧,೦೮೮ ಅಡಿ ವೇಗದಿಂದ ಧಾವಿಸುತ್ತದೆ.

ಗಾಳಿಯ ಮೂಲಕ ಸಾಗುವಾಗ ಶಬ್ದವು ಎದುರಿಗೇನಾದರೂ ಅಡ್ಡ ಬಂದರೆ ಪ್ರತಿಬಿಂಬಿಸಿ ಮೊದಲಿದ್ದಲ್ಲಿಗೇ ಬರುತ್ತದೆ. ಇದೇ ಪ್ರತಿಧ್ವನಿ. ಜರ್ಮನಿಯ ಹಾರ್ಜ್ ಪರ್ವತ ಶ್ರೇಣಿಯಲ್ಲಿ ಥೇಲ್ ಎಂಬಲ್ಲಿ ಪ್ರತಿಧ್ವನಿಯ ವೈಚಿತ್ರ್ಯವು ಯಾತ್ರಿಕರನ್ನು ಆಕರ್ಷಿಸುತ್ತದೆ. ಅಲ್ಲಿ ರೋಸ್ಟ್ರಾಪ್ ಮತ್ತು ಹೆಕ್ಸೆಂಟನ್ಸ್‌ಪ್ಲಾತ್ಸ್ ಎಂಬೆರಡು ಭಾರಿ ಬಂಡೆಗಲ್ಲುಗಳ ನಡುವೆ ನದಿಯೊಂದು ಹರಿಯುತ್ತದೆ. ಕಡಿದಾದ ಪ್ರಪಾತಗಳು ಅಲ್ಲಿ ವಿವಿಧ ಕೋನಗಳನ್ನು ರಚಿಸಿವೆ. ಈ ಕಣಿವೆಯಲ್ಲಿ ಒಂದು ಗುಂಡು ಹಾರಿಸಿದರೆ ಸಾಕು, ಶಬ್ದವು ಪುಟಿಯುವ ಚಂಡಿನಂತೆ ಪ್ರಪಾತದಿಂದ ಪ್ರಪಾತಕ್ಕೆ ನೆಗೆಯುತ್ತ ಹನ್ನೆರಡಾವರ್ತಿ ಪ್ರತಿಧ್ವನಿ ಮಾಡಿ ಶಾಂತವಾಗುತ್ತದೆ.

ಪ್ರತಿಧ್ವನಿ ಕೇಳಿಸಬೇಕಾದರೆ ಶಬ್ದವನ್ನು ಪ್ರತಿಫಲಿಸುವ ಅಡೆಯು ತೀರ ಹತ್ತಿರವಾಗಿರಬಾರದು. ಮತ್ತು ಗಾಳಿ ಶಾಂತವಾಗಿರಬೇಕು.

ಗಾಳಿ ಶಾಂತವಾಗಿರದಿದ್ದರೆ ಪ್ರತಿಧ್ವನಿ ದಾರಿ ತಪ್ಪಿ ಸಾಗುತ್ತದೆ. ತೀರ ಹತ್ತಿರದಲ್ಲಿ ತಡೆ ಇದ್ದರೆ ನೀವು ಶಬ್ದ ಹೊರಡಿಸಿದ ತತ್‌ಕ್ಷಣ ತಿರುಗಿ ಬಂದು ಧ್ವನಿಯೊಡನೆ ಪ್ರತಿಧ್ವನಿ ಬೆರೆತು ಹೋಗುತ್ತದಾದ್ದರಿಂದ ಪ್ರತಿಧ್ವನಿ ಪ್ರತ್ಯೇಕವಾಗಿ ಕೇಳದು. ಮುಚ್ಚಿದ ಕೋಣೆಗಳಲ್ಲಿ ಹಾಡಿದರೆ ಒಂದು ತರಹ ಗುಂಜನವಾಗಿ ನಾದಕ್ಕೆ ಕಳೆಯೇರಲು ಇದೇ ಕಾರಣ. ತದ್ವಿರುದ್ಧವಾಗಿ ಸುತ್ತಲೂ ಯಾವ ಮರಮಟ್ಟು ಏರುಗಳಿಲ್ಲದ ಬಯಲಲ್ಲಿ ಮಾಡಿದ ಶಬ್ದಕ್ಕೆ ಕಳೆಯೇರುವುದಿಲ್ಲ. ಏಕೆಂದರೆ ಅಲ್ಲಿ ಪ್ರತಿಧ್ವನಿಯೇ ಇರುವುದಿಲ್ಲ.

ವಕ್ರವಾದ ಗೋಡೆ ಇರುವಲ್ಲಿ ಆ ವಕ್ರದ ಕೇಂದ್ರಬಿಂದುವಿನಲ್ಲಿ ನೀವು ನಿಂತು ಮಾತಾಡಿದರೆ ಮೋಟಾರಿನ ದೀಪದಿಂದ ಹೊರಡುವ ಪ್ರಕಾಶದಂತೆ ನಿಮ್ಮ ಮಾತಿನ ಧ್ವನಿ ಒಂದೆಡೆ ಸೇರಿ ಧಾರೆಯಾಗಿ ಹರಿದೀತು. ಹೀಗೆ ಅಂತರ್ವಕ್ರವಾದ ಎರಡು ಗೋಡೆಗಳು ಎದುರು-ಬದುರಾಗಿವೆ ಯೆಂದುಕೊಳ್ಳಿ ಒಂದು ಗೋಡೆಯ ವಕ್ರತೆಯ ಕೇಂದ್ರ ಬಿಂದುವಿನಲ್ಲೊಬ್ಬ, ಇನ್ನೊಂದರ ಕೇಂದ್ರ ಬಿಂದುವಿನಲ್ಲಿ ಇನ್ನೊಬ್ಬ ನಿಂತು ಪಿಸು ನುಡಿಯಲ್ಲಿ ಮಾತಾಡುತ್ತಿದ್ದರೆ ಅದೇ ಕೋಣೆಯಲ್ಲಿದ್ದ ಮತ್ತಾರಿಗೂ ಆ ಮಾತು ಕೇಳಿಸಲಾರದು. ಬದಲಿಗೆ ಅವರಿಬ್ಬರಿಗೆ ಪರಸ್ಪರರ ಮಾತುಗಳು ಸಾಕಷ್ಟು ಗಟ್ಟಿಯಾಗಿ ಕೇಳಿಸುವವು. ಕಾರಣ ವಿಷ್ಟೇ: ಅವರ ವಿರುದ್ಧ ದಿಕ್ಕಿನ ಗೋಡೆಗಳು ಅವರ ಪಿಸು ಮಾತನ್ನು ತಮ್ಮ ಕೇಂದ್ರದತ್ತ ಪ್ರತಿಫಲಿಸುತ್ತವೆ. ಮತ್ತು ಅನೇಕ ಪ್ರತಿಧ್ವನಿಗಳು ಒಂದೇ ಕಡೆ ಕೂಡುವುದರಿಂದ ಮಾತು ಹೆಚ್ಚು ಗಟ್ಟಿಯಾಗಿ ಕೇಳಿಸುತ್ತದೆ.

ಈ ಮರ್ಮವನ್ನರಿತು ಜಗತ್ತಿನ ಅನೇಕ ಕಡೆ ಗುಣುಗುಟ್ಟುವ ಗುಮ್ಮಟಗಳ ರಚನೆಯಾಗಿದೆ. ಲಂಡನ್ನಿನ ಸೆಂಟ್‌ಪಾಲ್ಸ್ ಕೆಥೆಡ್ರಲ್, ಮತ್ತು ಪ್ಯಾರಿಸಿನ ವೇಧಶಾಲೆಗಳಲ್ಲಿ ಇಂಥ ಅಚ್ಚರಿಯನ್ನು ನೋಡುತ್ತೇವೆ. ವಿಜಾಪುರದ ಗೋಲು ಗುಮ್ಮಟದಲ್ಲಿ ಇಂಥದೇ ಇನ್ನೊಂದು ತರದ ವೈಚಿತ್ರ್ಯವಿದೆ.

೧೯೨೦ ರಲ್ಲಿ ಮಾಸ್ಕೋದಲ್ಲೊಂದು ಸ್ಫೋಟವಾಯಿತು. ಅದು ೩೦ ಮೈಲು ದೂರದವರೆಗೂ ಕೇಳಿಸಿತು. ಮುಂದೆ ಅದು ಮಾಯವಾಗಿಬಿಟ್ಟಿತು. ಆದರೆ ೯೦ ಮೈಲು ದೂರದಲ್ಲಿ ಪುನಃ ಕೇಳಿಸಿತು. ೩೦ ಮತ್ತು ೯೦ ಮೈಲುಗಳ ನಡುವಣ ೬೦ ಮೈಲು ಸ್ಥಳ ಮಾತ್ರ ನಿಶ್ಶಬ್ದವಾಗಿಯೆ ಇತ್ತು.

ಇಂಥ ವಿಚಿತ್ರ ಘಟನೆಗಳು ಬಹು ಕಾಲ ವಿಜ್ಞಾನಿಗಳನ್ನು ಅಪ್ರತಿಭರಾಗಿ ಮಾಡಿದ್ದವು. ಕಟ್ಟಕಡೆಗೆ ಹವಾಮಾನ ತಜ್ಞನೊಬ್ಬನು ಈ "ಮೌನವಲಯ"ದ ರಹಸ್ಯವನ್ನು ಬಿಡಿಸಿದನು. ಗಾಳಿಯ ಬೇರೆ ಬೇರೆ ಪದರುಗಳಲ್ಲಿ ಉಷ್ಣತಾಮಾನದ ಅಂತರವಿರುವುದೇ ಈ ವೈಚಿತ್ರ್ಯಕ್ಕೆ ಕಾರಣವೆಂದಾತ ತೋರಿಸಿಕೊಟ್ಟನು.

ಭೂಮಿಗೆ ತಗಲಿರುವ ಗಾಳಿಯ ಪದರು ಅದರ ಮೇಲಿನ ಗಾಳಿಯ ಪದರುಗಳಿಗಿಂತ ಸಾಮಾನ್ಯವಾಗಿ ಹೆಚ್ಚು ಬಿಸಿಯಾಗಿರುತ್ತದೆ. ಇದರಿಂದ ಶಬ್ದ ಮೇಲ್ಮುಖವಾಗಿ ಪರಾವರ್ತನೆ ಹೊಂದುತ್ತದೆ. ಶಬ್ದ ಎಲ್ಲಿಂದ ಹುಟ್ಟಿತೋ ಅಲ್ಲಿಂದ ಸಾಕಷ್ಟು ದೂರ ಹೋಗುವಷ್ಟರಲ್ಲಿ ಅದು ನಮ್ಮ ತಲೆಯ ಮೇಲಿಂದ ಹಾಯ್ದು ನಮಗೆ ಕೇಳಿಸದಂತಾಗುತ್ತದೆ. ಸುಮಾರು ೨೫ ಮೈಲೆತ್ತರದಲ್ಲಿ ಇನ್ನೊಂದು ಬಿಸಿಗಾಳಿಯ ಪದರು ಇರುವುದು ಕಂಡುಬಂದಿದೆ. ಅಷ್ಟೆತ್ತರಕ್ಕೆ ಮುಟ್ಟಿದಾಗ ಶಬ್ದವನ್ನು ಆ ಪದರು ಪುನಃ ಪರಾವರ್ತನೆಗೊಳಿಸಿ ಭೂಮಿಯತ್ತ ಕಳಿಸುತ್ತದೆ. ಹೀಗೆ ವಕ್ರಗತಿಯಿಂದ ಶಬ್ದ ಸಾಗುವುದರಿಂದ ನಡುವಣ ಪ್ರದೇಶದಲ್ಲಿ ಮೌನವೇ ಇರುತ್ತದೆ.

ಅಪರೂಪವಾಗಿ, ಹೀಗೆ ಊರ್ಧ್ವಮುಖವಾಗಿ ಹೋಗಿ ಆಮೇಲೆ ಅಧೋಮುಖವಾಗಿ ಭೂಮಿಗೆ ಮರಳಿದ ಶಬ್ದವನ್ನು ನೆಲದ ಸಮೀಪದ ಬಿಸಿ ಗಾಳಿ ಮತ್ತೊಮ್ಮೆ ಮೇಲ್ಮುಖವಾಗಿ ಹೊರಳಿಸಿ ಎರಡನೇ ಅಥವಾ ಮೂರನೇ ಮೌನ ವಲಯವನ್ನು ನಿರ್ಮಿಸುವುದುಂಟು. ★

# ಮಹಾಪೂರದಲ್ಲಿ ವಿಚಿತ್ರಗಳು

"ಶ್ರೀಯುತ" ದಿಂದ

ಇದೇ ಜುಲೈ ತಿಂಗಳಲ್ಲಿ ಪುಣೆ ನಗರ ಮಹಾಪೂರದ ಹೊಡೆತಕ್ಕೆ ಸಿಕ್ಕು ಅಸ್ತವ್ಯಸ್ತವಾಗಿ ಹೋಯಿತು. ಈ ಪ್ರಳಯ ಕಾಲದಲ್ಲಿ ಜರುಗಿದ ಅದ್ಭುತ ಘಟನೆಗಳಲ್ಲಿ ಕೆಲವನ್ನು ಇಲ್ಲಿ ಕೊಟ್ಟಿದೆ.

ಪುಣೆಯ ವಿದ್ಯುತ್ ಪೂರೈಕೆ ಕಂಪನಿಯ ಡೆಕ್ಕನ್ ಜಿಮಖಾನಾ ವಿಭಾಗದ ಕಚೇರಿಯ ಕೋಶಾಧಿಕಾರಿ ಶ್ರೀ ಪಾನಸೆಯವರಿಗೆ ಅವರ ಸಹಕಾರಿಗಳು "ಮಹಾಪೂರ ಬಂದಿದೆ. ನೀರು ಏರುತ್ತಲೇ ಇದೆ. ನಡೆಯಿರಿ ಹೊರಗೆ" ಎಂದು ಎಷ್ಟೇ ಬಿನ್ನವಿಸಿಕೊಂಡರೂ ಅವರು ಕೇಳಲಿಲ್ಲ. "ನನ್ನ ಹೊಣೆಗಾರಿಕೆ ಬಲು ದೊಡ್ಡದು. ನಾನು ನನ್ನ ಸ್ಥಳ ಬಿಟ್ಟು ಕದಲಲಾರೆ" ಎಂದರವರು. ಕಚೇರಿಯಲ್ಲಿ ನೀರು ಭರ ಭರ ಏರತೊಡಗಿತು. ಪಾನಸೆಯವರು ಕದಲಲಿಲ್ಲ. ಮಹಾಪೂರದ ನೀರು ಅವರನ್ನು ನುಂಗಿತು.



*

ಪುಣೆಯ ನ್ಯೂ ಇಂಗ್ಲಿಷ್ ಸ್ಕೂಲಿನ ಸೇವಾನಿವೃತ್ತ ಶಿಕ್ಷಕ ಶ್ರೀ ನಾರಳೀಕರರು ಅನೇಕ ದಿನಗಳಿಂದಲೂ ಅರ್ಧಾಂಗವಾಯುವಿನಿಂದ ಹಾಸಿಗೆ ಹಿಡಿದಿದ್ದರು. ಅವರ ಮನೆಯಲ್ಲಿ ನೀರು ಹೊಕ್ಕಾಗ ಅವರ ಹೆಂಡತಿ ಕೂಗಿಕೊಳ್ಳತೊಡಗಿದಳು. ಆ ಸಮಯದಲ್ಲಿ ಮಹಾಪೂರದಿಂದ ಜೀವವುಳಿಸಿಕೊಳ್ಳಲೆಂದು ಅದೇ ಮಾರ್ಗವಾಗಿ ಶ್ರೀ ನಾರಳೀಕರರ ಹಿಂದಿನ ನಾಲ್ವರು ವಿದ್ಯಾರ್ಥಿಗಳು ಓಡುತ್ತಿದ್ದರು. ತಮ್ಮ ಗುರುವಿನ ಮನೆಯಲ್ಲಿ ಗದ್ದಲ ಕೇಳಿ ಅವರು ಒಳಗೆ ಹೋದರು. ಗುರುಗಳನ್ನೂ ಗುರುಪತ್ನಿಯನ್ನೂ ಹೆಗಲ ಮೇಲೆ ಹೊತ್ತುಕೊಂಡು ೫ ಅಡಿ ನೀರಿನಲ್ಲಿ ಮಾರ್ಗ ಕ್ರಮಿಸಿ ಅವರನ್ನು ಸುರಕ್ಷಿತ ಸ್ಥಳಕ್ಕೆ ಸಾಗಿಸಿದರು.

*

ನಾರಾಯಣ ಪೇಟೆಯಲ್ಲಿ ಇರುತ್ತಿದ್ದ ಶ್ರೀ ಹರಿವಿ ಜಾನೋರಕರರು ಶ್ರೀ ವೈದ್ಯ ಎಂಬ ತಮ್ಮ ಮಿತ್ರರನ್ನು ಊಟಕ್ಕೆ ಕರೆದಿದ್ದರು. ಇಬ್ಬರೂ ಊಟ ಮಾಡುತ್ತಿದ್ದಾಗ ನೀರು ಏರಿ ಬಂತು. ಇಡೀ ಮನೆ ಕುಸಿದು ಬಿತ್ತು. ಜಾನೋರಕರರ ಪ್ರೇತ ಸಿಕ್ಕಾಗ ಅದಕ್ಕೆ ಕೈಕಾಲುಗಳಿರಲಿಲ್ಲ. ಅವರ ಇಡೀ ಮನೆ ನಾಮಶೇಷವಾಗಿದ್ದರೂ ಅವರ ಹೆಸರನ್ನು ಹೊತ್ತಿರುವ ಅರ್ಧವರ್ತುಲಾಕಾರದ ಹಲಗೆ ಮಾತ್ರ ಇದ್ದಕ್ಕಿದ್ದಂತೆಯೆ ಇದೆ.

*

ಮಹಾಪೂರದ ಪ್ರವಾಹದೊಡನೆ ತೇಲುತ್ತ ಬಂದ ಒಂದು ಎಮ್ಮೆ ಮೂರಂತಸ್ತಿನ ಮನೆಯ ಮಾಳಿಗೆಯ ಗಚ್ಚಿನ ಮೇಲೆ ಬಂದು ತಡೆಯಿತು. ಆ ಕಟ್ಟಡದಲ್ಲಿದ್ದವರೆಲ್ಲ ಮನೆ ಬಿಟ್ಟು ಹೋಗಿದ್ದರು. ನೀರು ಇಳಿದ ಮೇಲೆ ಅವರು ತಿರುಗಿ ಬಂದಾಗ ಗಚ್ಚಿನ ಮೇಲೆ ಎಮ್ಮೆ ನಿಂತಿರುವುದನ್ನು ಕಂಡರು. ಎಮ್ಮೆಯನ್ನು ಕೆಳಗಿಳಿಸುವುದು ಹೇಗೆ ಎಂದು ಅವರು ಪೇಚಿಗೆ ಬಿದ್ದರು.



ಮರಾಠಿ ನಾಟಕದ ಇತಿಹಾಸವನ್ನು ಬರೆಯುತ್ತಿರುವ ಪ್ರೊ. ಶ್ರೀ ನಾ. ಬನಹಟ್ಟಿಯವರ ಮನೆ ಮಹಾಪೂರಕ್ಕಾಹುತಿಯಾಯಿತು. ಅವರ ಎಲ್ಲ ಸಾಮಾನುಗಳು—ಸಾಹಿತ್ಯ ಸಂಪತ್ತು ಎಲ್ಲ ತೊಳೆದುಹೋಯಿತು. ಆದರೆ ನೀರು ಇಳಿದ ಮೇಲೆ ಅವರೊಂದು ಚಮತ್ಕಾರವನ್ನು ಕಂಡರು. ಅಡಿಗೆಮನೆಯಲ್ಲಿದ್ದ ಒಂದು ಮೇಜಿನ ಮೇಲೆ ಒಂದು ಪಾತ್ರೆಯಲ್ಲಿ ಬೆಣ್ಣೆಯ ಮುದ್ದೆಯನ್ನಿಟ್ಟಿದ್ದರು. ಒಂದು ಡಬ್ಬಿಯಲ್ಲಿ ರೊಟ್ಟಿ ಮತ್ತು ಪಲ್ಯವಿತ್ತು. ಈ ಪಾತ್ರೆ ಮತ್ತು ಅದರೊಳಗಿದ್ದ ಬೆಣ್ಣೆ, ಡಬ್ಬಿ ಮತ್ತು ಅದರೊಳಗಿದ್ದ ರೊಟ್ಟಿ-ಪಲ್ಯಗಳು ಮಹಾಪೂರದ ನೀರು ಮನೆಯಲ್ಲಿ ಆಳೆರಡ್ಮುಆಳು ಎತ್ತರದ ವರೆಗೆ ತುಂಬಿ ಹರಿದು ಹೋದಮೇಲೂ ಇದ್ದಕ್ಕಿದ್ದಂತೆಯೇ ಇದ್ದವು. ನೀರು ಸಾವಕಾಶವಾಗಿ ಮೇಲಕ್ಕೇರಿದಂತೆ ಮೇಜು ಮೇಲಕ್ಕೆತ್ತಲ್ಪಟ್ಟು ತೇಲತೊಡಗಿರಬೇಕು. ನೀರು ಇಳಿಯತೊಡಗಲು ಮತ್ತೆ ಸಾವಕಾಶವಾಗಿ ಕೆಳಗಿಳಿದು ಮೊದಲಿದ್ದ ಸ್ಥಳದಲ್ಲಿಯೇ ನಿಂತಿತ್ತು. ಮೇಜು ತೇಲುತ್ತಿದ್ದುದರಿಂದ ಅದರ ಮೇಲಿದ್ದ ಪದಾರ್ಥಗಳಿಗೆ ನೀರಿನ ಸ್ಪರ್ಶವಾಗಿರಲಿಲ್ಲ.



*

ಮಗುವೊಂದು ಕಟ್ಟಿಗೆಯ ತೊಟ್ಟಿಲಲ್ಲಿ ಸುಖವಾಗಿ ಮಲಗಿತ್ತು. ನೀರು ಬಂತು. ಮಗುವಿನ ಸಹಿತ ತೊಟ್ಟಿಲು ತೇಲುತ್ತ ಹೋಯಿತು. ಬ್ಯಾಂಡ್ ಗಾರ್ಡನ್ ಪೂಲಿನ ಕೆಳಗೆ ಅದು ಹೋಗುತ್ತಿದ್ದಾಗ ಸೈನಿಕನೊಬ್ಬ ಹಗ್ಗ ಹಾಕಿ ಅದನ್ನು ಮೇಲಕ್ಕೆಳೆದುಕೊಂಡಾಗ ಒಳಗಿದ್ದ ಮಗು ಸುಖರೂಪವಾಗಿತ್ತು.



ನಾರಾಯಣ ಪೇಟೆಯಲ್ಲಿ ಬಿದ್ದ ಮನೆಗಳ ರಾಶಿಯ ನಡುವೆ ಹಾದಿ ಮಾಡಿಕೊಳ್ಳುತ್ತ ಕೆಲವು ಅಧಿಕಾರಿಗಳು ಹೊರಟಿದ್ದರು. ಒಂದೆಡೆ ಕೆಸರು ಮೆತ್ತಿದ್ದ ಒಂದು ಟ್ರಂಕಿನ ಮೇಲೆ ಕೂಸಿಗೆ ಮೊಲೆಯುಣಿಸುತ್ತ ಒಬ್ಬಾಕೆ ಕುಳಿತಿದ್ದಳು. ಅವಳ ಮೈಮೇಲೆ ಮಾನರಕ್ಷಣೆಗೆ ಅವಶ್ಯವಿರುವಷ್ಟೂ ಬಟ್ಟೆ ಇರಲಿಲ್ಲ. ಅವಳ ಎದುರು ಜನ ಬರುತ್ತಿದ್ದಾರೆಂದು ಅವಳಿಗೆ ಗೊತ್ತಾದರೂ ಅವಳು ಬೆಪ್ಪು ಕಣ್ಣುಗಳಿಂದ ನೋಡುತ್ತಲೇ ಕುಳಿತಳು. ದುಃಖಾತಿರೇಕದಲ್ಲಿ ಅವಳು ನಾಚಿಕೆ ಸಂಕೋಚಗಳ ಭಾವನೆಗಳಿಂದ ಮುಕ್ತಳಾಗಿಬಿಟ್ಟಿದ್ದಳು. ಅವಳು ಶೂನ್ಯದೃಷ್ಟಿಯಿಂದ ದೂರ ಏನನ್ನೊ ದಿಟ್ಟಿಸುತ್ತ ಕುಳಿತಿದ್ದಳು. ಆ ಅಧಿಕಾರಿಗಳಲ್ಲಿ ಒಬ "ನಾನಿನ್ನು ಜೀವದಿಂದಿರುವ ವರೆಗೂ ಈ ದೃಶ್ಯವನ್ನು ಮರೆಯಲಾರೆ" ಎಂದ.



*

ಕಸಬಾ ಪೇಟೆಯಲ್ಲಿ ಮುರುಕು ಮನೆಯೊಂದರಲ್ಲಿ ಮಹಾಪೂರ ಇಳಿದ ನಂತರ ಒಬ್ಬ ಮುದುಕಿ ಅಳುತ್ತ ಕುಳಿತಿದ್ದಳು. ಅವಳ ಸರ್ವಸ್ವ ನಾಶವಾಗಿ ಹೋಗಿದ್ದರೂ ಅವಳು ಅದಕ್ಕಾಗಿ ದುಃಖಿಸುತ್ತಿರಲಿಲ್ಲ. ಅವಳ ದೇವರು ಈ ಗದ್ದಲದಲ್ಲಿ ಕಾಣೆಯಾಗಿ ಬಿಟ್ಟಿದ್ದ. ಆ ಕಳೆದ ಮೂರ್ತಿಗಾಗಿ ಅವಳು ಶೋಕಿಸುತ್ತಿದ್ದಳು. ತನ್ನ ಬಳಿ ಬಂದವರಿಗೆಲ್ಲ ಅವರು "ನನ್ನ ದೇವರೆಲ್ಲಿದ್ದಾನೆ?" ಎಂದು ಕೇಳುತ್ತಿದ್ದಳು.



*

ಸಿಕ್ಕ ಶವಗಳಲ್ಲಿ ಒಂದು ವೃದ್ಧ ದಂಪತಿಗಳ ಶವಗಳೂ ಇದ್ದವು. ಇಹಲೋಕವನ್ನು ತ್ಯಜಿಸು

ವಾಗ ಈ ವೃದ್ಧರು ಪರಸ್ಪರರನ್ನು ಕೊನೆಯ ದಾಗಿ ಆಲಿಂಗಿಸಿಕೊಂಡಿದ್ದರು. ಅವರ ಶವ ಗಳು ಅದೇ ಸ್ಥಿತಿಯಲ್ಲಿ ದೊರೆತವು.

*

ಮಹಾಪೂರ ಬಂದು ಹಿಂದೂ ಮಹಿಳಾಶ್ರಮ ದಲ್ಲಿಯ ನೂರಕ್ಕಿಂತ ಹೆಚ್ಚು ಹುಡುಗಿಯರು ಪ್ರಾಣಸಂಕಟಕ್ಕೊಳಗಾಗಿದ್ದರು. ಈ ಆಶ್ರಮದ ವ್ಯವಸ್ಥೆಯನ್ನು "ಕೇಸರಿ" ಪತ್ರಿಕೆಯ ಸಂಪಾ ಕದ ಶ್ರೀ ಜಯಂತರಾವ್ ತಿಲಕರ ತಾಯಿ ನೋಡಿಕೊಳ್ಳುತ್ತಾರೆ. ತಮ್ಮ ತಾಯಿಯನ್ನು ಉಳಿಸಲೆಂದು ಶ್ರೀ ಜಯಂತರಾವ್ ಅಲ್ಲಿಗೆ ಓಡಿದರು. ಆದರೆ, ಅವರೇ ಮಹಾಪೂರದಲ್ಲಿ ಸಿಕ್ಕರು. ಆಶ್ರಮದ ಕಟ್ಟಡದಲ್ಲಿ ನೀರು ಎರಡು ಅಂತಸ್ತುಗಳ ವರೆಗೆ ಏರಿತು. ಜಯಂತರಾವ್ ಮತ್ತು ಅವರ ತಾಯಿ ಹುಡುಗಿಯರನ್ನು ಕರೆದು ಕೊಂಡು ಮಾಳಿಗೆಯ ಛತ್ತಿನ ಮೇಲೆ ಹೋಗಿ ನಿಂತರು. ಎದುರಿನಲ್ಲಿ ಡಾ. ಚಪಲಾತಾಯಿ ಖಾಡಿಲಕರರ ನಾಲ್ಕಂತಸ್ತಿನ ಕಲ್ಲಿನ ಮನೆ ಯಿದೆ. ಇವೆರಡೂ ಮನೆಗಳು ಟೆಲಿಫೋನ್ ತಂತಿ ಗಳಿಂದ ಜೋಡಿಸಲ್ಪಟ್ಟಿವೆ. ಮಹಾಪೂರದಲ್ಲಿ ತೇಲಿಬಂದ ಹಲಗೆಗಳು ಈ ತಂತಿಗಳಿಗೆ ಸಿಕ್ಕು ತಡೆದು ನಿಂತವು. ಜಯಂತರಾವ್ ನವಾರಿನಿಂದ ಅವನ್ನು ತಂತಿಗಳಿಗೆ ಕಟ್ಟಿ ಪೂಲು ತಯಾರಿಸಿ ಹುಡುಗಿಯರ ಕೈಹಿಡಿದುಕೊಂಡು ನಡೆಸಿ ಡಾಕ್ಟ ರರ ಮನೆಗೆ ಮುಟ್ಟಿಸಿದರು. ಈ ತಂತಿಗಳು ನೆಲ ದಿಂದ ೨೦ ಅಡಿ ಎತ್ತರದ ಮೇಲಿದ್ದವು. *

---

## ಪುರುಸೊತ್ತಿಲ್ಲದ ಆಸಾಮಿ!

ನಾನಂದು ರೈಲಿನಲ್ಲಿ ೩ನೇ ತರಗತಿಯ ಡಬ್ಬಿಯಲ್ಲಿ ಕುಳಿತು ಮಂಗಳೂರಿಗೆ ಪ್ರಯಾಣ ಮಾಡುತ್ತಿದ್ದೆ.

ಗಾಡಿಯಲ್ಲಿ ಕಿಕ್ಕಿರಿದ ಜನಸಂದಣಿ ಏನೂ ಇದ್ದಿಲ್ಲ. ಜಾಗ ಸಾಕಷ್ಟಿತ್ತು. ಮಂಗಳೂರಿಗೆ ಮತ್ತೂ ಇಪ್ಪತ್ತು ಮೈಲುಗಳಷ್ಟು ದೂರವಿತ್ತು.

ನಮ್ಮ ಡಬ್ಬಿಯಲ್ಲಿ ಓರ್ವ ವ್ಯಕ್ತಿಯು ಜಾಗವಿದ್ದರೂ ಕುಳಿತುಕೊಳ್ಳದೆ ಅತ್ತಿಂದಿತ್ತ ಸಂಚರಿಸುತ್ತಲೇ ಇದ್ದ. ನನ್ನ ಬಳಿಯಲ್ಲಿ ತುಂಬಾ ಜಾಗವಿದ್ದ ಕಾರಣ, ನಿಂತುಕೊಳ್ಳುವ ಅವಶ್ಯಕತೆಯೇ ಅಲ್ಲಿ ಇದ್ದಿಲ್ಲ.

"ಯಾಕೆ ಸುಮ್ಮಗೆ ಕಷ್ಟಪಡುತ್ತಿರುವಿರಿ; ತುಂಬಾ ಜಾಗವಿದೆ. ಕುಳಿತು ಕೊಳ್ಳಬಾರದೆ?"– ಎಂದೆ ನಾನು ಅವನೊಡನೆ.

ಆದಕ್ಕವನು, "ಕ್ಷಮಿಸಿ; ನನಗೆ ಜರೂರಾಗಿ ಮಂಗಳೂರು ತಲುಪಬೇಕಾ ಗಿದೆ. ಕುಳಿತುಕೊಳ್ಳುವಷ್ಟು ಪುರುಸೊತ್ತು ಇಲ್ಲ" ಎಂದ.

—"ವಿಘ್ನೇಶ್ವರ", ಕುಂಬಳೆ

* * *

ಹೆಗ್ಗಡದೇವನ ಕೋಟೆಯ ಕೆಲವು ಭಾಗಗಳಲ್ಲಿರುವ ಜೇನುಕುರುಬರಲ್ಲಿ ವಿಚಿತ್ರವಾದ ಒಂದು ಸಂಪ್ರದಾಯವಿದೆ. ಮದುವೆಯಾಗದ ಗಂಡಸರೆಲ್ಲರೂ ಹಳ್ಳಿಯ ಚಾವಡಿಯ ಒಂದು ಜಗುಲಿಯ ಮೇಲೂ ಮದುವೆಯಾಗದ ಹೆಂಗಸ ರೆಲ್ಲರೂ ಆದೇ ಚಾವಡಿಯ ಇನ್ನೊಂದು ಕಡೆಯೂ ಮಲಗುವರು. ಇವರ ಮೇಲ್ವಿ- ಚಾರಣೆಗಾಗಿ ವಿವಾಹಿತ ಹಿರಿಯನೊಬ್ಬ ಈ ಎರಡೂ ಗುಂಪುಗಳ ಮಧ್ಯೆ ಮಲಗು ವನು.

— ರವೀಂದ್ರನಾಥ ಎಸ್. ಬಿ.



**ಸೋತವು...ಆದರೆ ಇವುಗಳಲ್ಲಿ ಯಾವುದು ? ಇವೆಲ್ಲವೂ ಸುರಕ್ಷಿತವಾದವುಗಳಾಗಿವೆ**

ಸುಪರ್‌ಫೈನ್ ಪೊಪ್ಲಿನ್‌ಗಳು...ಬೆಲೆ ಎಷ್ಟಿದ್ದರೂ ಉತ್ಕೃಷ್ಟವಾದ ಬಟ್ಟೆಯನ್ನೇ ಪಡೆಯುವ ಅಭಿರುಚಿಯುಳ್ಳವರಿಗೆ
ಪ್ಲಾಟಿನ್‌ನಮ್ ಟಚ್ · ರೇಡಿಯಂ ಟಚ್ · ಆಲ್‌ವೈಟ · ಕಸ್ಟಮ್ ವ್ಯಾರ್




ಫೈನ್ ಪೊಪ್ಲಿನ್‌ಗಳು ... ಉತ್ತಮವಾದ ತಯಾರಿಕೆ ... ನೋಡಲು ಮನೋಹರ ... ದೀರ್ಘ ಬಾಳಿಕೆಯುಳ್ಳ ... ಸಾಧಾರಣ ಬೆಲೆಯಲ್ಲಿ ದೊರೆಯುವ ಬಟ್ಟೆಗಳು
ಮಧು ಕುಂಜ್ · ನ್ಯೂ ಚೈನಾ ಸ್ಟಾರ್ · ಹಿಸ್ ಹೈನೆಸ್ · ನಿತ್ಯಕುಂಜ್

ಮಿಡ್ಯಮ್ ಪೊಪ್ಲಿನ್‌ಗಳು...ಕಡಿಮೆ ಖರ್ಚಿನಲ್ಲಿ ಸುಂದರವಾದ ಶರ್ಟುಗಳನ್ನು ಅಪೇಕ್ಷಿಸುವ ಪುರುಷರಿಗೆ
ನಟರಾಜ · ನೈನ್‌ಗಿನಿ · ಸ್ಕ್ಯಾನ್ ರೈಸ್ · ಪರಿಮಳ್

# ಮಫತ್‌ಲಾಲ್ ಗ್ರೂಪ್ ಪೊಪ್ಲಿನ್‌ಗಳು



ನ್ಯೂ ಕೊರಾಕಿ(...), ಅಹಮ್ಮದಾಬಾದ್. ನ್ಯೂ ಶೊರಾಕ್ ನಡಿಯಾದ್. ಸ್ಟ್ಯಾಂಡರ್ಡ್, ಬೊಂಬಾಯಿ. ಸ್ಟ್ಯಾಂಡರ್ಡ್, (ನ್ಯೂ ಚೈನಾ) ಬೊಂಬಾಯಿ. ಸ್ಟ್ಯಾಂಡರ್ಡ್, ಬರೋಡಾ. ಸಸೂನ್ ಬೊಂಬಾಯಿ. ಸಸೂನ್, (ನ್ಯೂ ಯುನಿಯನ್), ಬೊಂಬಾಯಿ. ಸುರತ್ ಕೋಟನ್, ಸೂರತ್. ಮಫತ್‌ಲಾಲ್ ಫೈನ್, ನವಸಾರಿ ಗಗಲ್‌ಭಾಯಿ ಜೂಟ್, ಕಲ್ಕತ್ತ. ಇಂಡಿಯನ್ ಡೈಸ್ಟಫ್, ಬೊಂಬಾಯಿ



ಇಂಕಾ ಸೂರ್ಯವಂಶದ ಇಂದಿನ ಪ್ರತಿನಿಧಿ

# ಅಮೇರಿಕದಲ್ಲಿ ಮತ್ತೆ ಸೂರ್ಯವಂಶ ರಾಜ್ಯವಾದೀತೆ?

ದಕ್ಷಿಣ ಅಮೇರಿಕದ ಶಾಂತಸಾಗರ ತೀರದಲ್ಲಿ ಬಹು ದೊಡ್ಡ ಪ್ರದೇಶದ ಮೇಲೆ ಇಂಕಾ ಜನರ ಪ್ರಭುತ್ವವಿತ್ತು. ಇಂಕಾ ಜನ ಬಲು ಧನಿಕರು. ಇವರ ದೇಶದಲ್ಲಿ ಅನೇಕಾನೇಕ ಸೂರ್ಯದೇವನ ಮಂದಿರಗಳಿದ್ದವು. ಅವುಗಳಲ್ಲಿ ಪೂರ್ಣ ಪುರುಷಾಕೃತಿಯ ಚೊಕ್ಕ ಚಿನ್ನದ ಸೂರ್ಯಪ್ರತಿಮೆಗಳಿರುತ್ತಿದ್ದವು. ದೇವಸ್ಥಾನಗಳಲ್ಲಿರುತ್ತಿದ್ದ ಪೂಜಾಪಾತ್ರೆಗಳೆಲ್ಲ ಚಿನ್ನದವೇ. ಇಂಕಾ ರಾಜ್ಯದ ದಕ್ಷಿಣ ರಾಜಧಾನಿ ಕುಜೊದಲ್ಲಿ ಗೋಡೆಗಳಿಗೆ ಚಿನ್ನದ ಮಲಾಮು ಮಾಡಿರುತ್ತಿದ್ದರು. ಅಲ್ಲಿಯ ರಾಜರ ಮಹಲುಗಳಲ್ಲಂತೂ ವಿಚಿತ್ರ ದೃಶ್ಯ ಕಾಣಿಸುತ್ತಿತ್ತು. ಆ ಮಹಲುಗಳ ಬಳಿ ಒಂದು ಚಿನ್ನದ ತೋಟವನ್ನು ರಚಿಸಿದ್ದರು. ಅವುಗಳಲ್ಲಿರುವ ಗಿಡಗಳು ಚಿನ್ನದವು, ಹೂಗಳೂ ಚಿನ್ನದವು. ಆ ಗಿಡಗಳ ಮೇಲೆ ಬಗೆಬಗೆಯ ಚಿನ್ನದ ಪಕ್ಷಿಗಳನ್ನಿಟ್ಟಿರುತ್ತಿದ್ದರು. ಕೆಳಗೆ ಗಿಡದಡಿಯಲ್ಲಿ ಚಿನ್ನದ ಪ್ರಾಣಿಗಳು ಬೇರೆ ನಿಂತಿರುತ್ತಿದ್ದವು.

ಇಂಕಾ ಜನರಿಗೆ ಚಿನ್ನದ ಬೆಲೆ ಹಣದ ರೂಪದಲ್ಲಿರದೆ ಧಾರ್ಮಿಕ ರೂಪದ್ದಾಗಿತ್ತು. ಇವರು ತಾವು ಸೂರ್ಯನ ವಂಶಜರೆಂದು ಹೇಳಿಕೊಳ್ಳುತ್ತಿದ್ದರು. ಸೂರ್ಯನ ಬಣ್ಣದ್ದೇ ಆದ ಬಂಗಾರವು ಅವರಿಗೆ ಒಂದು ಪವಿತ್ರ ಧಾರ್ಮಿಕ ಬೆಲೆಯ ವಸ್ತುವಾಗಿತ್ತು.

ಇಂಕಾ ಸಾಮ್ರಾಜ್ಯದ ಕೊನೆಯ ಅರಸು ಅತಾಹು ಆಲ್ಪಾ. ೧೫೩೮ ರ ವಸಂತ ಮಾಸದಲ್ಲಿ ಒಂದು ದಿನ ಅವನಿಂದ ಒಂದು ಪ್ರಮಾದ ಘಟಿಸಿತು. ಅದರಿಂದ ಇಂಕಾ ಸಾಮ್ರಾಜ್ಯದ ಸುಖಶಾಂತಿಗಳು ನಾಮಶೇಷವಾಗಿ ಹೋದವು.

ಜನರಲ್ ಫ್ರಾನ್ಸಿಸ್ ಪಿಜಾರೊ ಇಕ್ವಾಡೋರಿನ ಉತ್ತರ ಗಡಿಪ್ರದೇಶದಲ್ಲಿ ಠಾಣ್ಯವೂರಿದ್ದ. ಸಾಮ್ರಾಟ್ ಅತಾಹು ಆಲ್ಪಾ ಅವನಲ್ಲಿಗೆ ಕೆಲ ರಾಜಕುಮಾರರು, ರಾಜಪುರೋಹಿತರು ಮತ್ತು ಅಧಿಕಾರಿಗಳ ಒಂದು ಶಿಷ್ಟಮಂಡಳವನ್ನು ಕಳುಹಿಸಿದ. ಈ ಜನರಲ್ ಮೊದಲು ಕುರಿ ಕಾಯುವವನಾಗಿದ್ದು ಆ ಮೇಲೆ ಜನರಲ್ ಪದವಿಗೇರಿದವ. ಬಹು ಧೂರ್ತನೂ ನೃಶಂಸನೂ ಆಗಿದ್ದ. ಇಂಕಾ ಜನರ ಬಳಿ ಅಪರಿಮಿತ ಚಿನ್ನ, ಬೆಳ್ಳಿ, ರತ್ನಾದಿಗಳಿವೆಯೆಂದು ತನ್ನ ಗುಪ್ತಚಾರರ ಮೂಲಕ ಈತ ತಿಳಿದುಕೊಂಡಿದ್ದ. ಅಲ್ಲದೆ ಇಂಕಾ ರಾಜರಲ್ಲಿ ಯುದ್ಧ ಕುಶಲರಾದ

ದಕ್ಷಿಣ ಅಮೇರಿಕದಲ್ಲಿ ರೆಡ್ ಇಂಡಿಯನ್ನರ ಸಮೃದ್ಧ ರಾಜ್ಯಗಳು ಇದ್ದಾಗ ೧೬ ನೇ ಶತಮಾನದಲ್ಲಿ ಸ್ಪೇನಿನ ಸಾಮ್ರಾಜ್ಯಶಾಹಿಗಳು ಅಲ್ಲಿ ಹೋಗಿ ಮೋಸದಿಂದಲೂ ಕ್ರೌರ್ಯ ದಿಂದಲೂ ಅವನ್ನು ನಾಶಮಾಡಿ ತಮ್ಮ ಸತ್ತೆಯನ್ನು ಸ್ಥಾಪಿಸಿದರು. ರೆಡ್ ಇಂಡಿಯನ್ನರು ಅರಣ್ಯಗಳಿಗೆ ತಳ್ಳಲ್ಪಟ್ಟು ಬರಬರುತ್ತ ನಾಶಹೊಂದಿ ಜನಾಂಗವೇ ಮೃತಪ್ರಾಯವಾಯಿತು.

ಆದರೆ ಬಿಳಿಯರೆಣಿಸಿದಷ್ಟು ಅಲ್ಲ. ಈ ಜನ ಈಗ ಮತ್ತೆ ಜಾಗ್ರತರಾಗಿ ತಮ್ಮನ್ನು ಗೌಪ್ಯವಾಗಿ ಸಂಘಟಿಸಿಕೊಳ್ಳುತ್ತಿದ್ದಾರೆ. ತಮ್ಮ ಲುಪ್ತ ಸಾಮ್ರಾಜ್ಯವನ್ನು ಪುನಃ ಅಸ್ತಿತ್ವಕ್ಕೆ ತರುವ ಹಂಬಲ ಅವರಿಗಾಗಿದೆ. ಸೂರ್ಯವಂಶೀಯರಾದ ತಮ್ಮ ಹಳೇ ಚಕ್ರವರ್ತಿಗಳ ಪೀಳಿಗೆಯನ್ನು ಅವರು ಕಾಪಾಡಿಕೊಂಡು ಬಂದಿದ್ದು ಈಗ ಅವರ ಹೆಸರಲ್ಲಿ ಸಂಘಟನೆ ಪ್ರಾರಂಭಿಸಿದ್ದಾರೆ. ಈ ಸೂರ್ಯವಂಶ ಭಾರತದಿಂದಲೇ ಅಮೇರಿಕಕ್ಕೆ ಪುರಾತನದಲ್ಲಿ ವಲಸೆ ಹೋಗಿರುವ ಸಂಭವವಿದೆ. ದಕ್ಷಿಣ ಅಮೇರಿಕದ ಸಂಸ್ಕೃತಿಯಲ್ಲಿ ಭಾರತೀಯ ಪ್ರಭಾವವಿದೆ ಯೆಂದು ಎದ್ದು ಕಾಣುವಷ್ಟು ಮಟ್ಟಿಗೆ ಅಲ್ಲಿ ದೊರೆತಿರುವ ದೇವಾಲಯಗಳು, ಮೂರ್ತಿ ಗಳು ತತ್ಸಮಾನ ಭಾರತೀಯ ವಸ್ತುಗಳನ್ನು ಹೋಲುತ್ತವೆ. ಪ್ರಸಿದ್ಧ ಪತ್ರಿಕೋದ್ಯೋಗಿ ಕೇನ್ ಕ್ರಿಪೆನ್ ಅವರು ಪ್ರತ್ಯಕ್ಷವಾಗಿ ಕಂಡುಂಡ ಸಂಗತಿಗಳನ್ನು ಇಲ್ಲಿ ಮುಕ್ತಾ ರಾಜೇ ಯವರು ಪ್ರಸ್ತುತಗೊಳಿಸಿದ್ದಾರೆ.

೫೦,೦೦೦ ಸೈನಿಕರ ಸೈನ್ಯವಿದೆ ಎಂದೂ ಅವನಿಗೆ ತಿಳಿದಿತ್ತು. ತಾಮ್ರದ ತುದಿಯ ಭರ್ಚಿಗಳೂ ವಿಷಯುಕ್ತವಾದ ಹಿತ್ತಾಳಿ ತುದಿಯಿರುವ ಬಾಣ ಗಳೂ ಇಂಕಾ ಸೈನಿಕರ ಆಯುಧಗಳು. ಜನ ರಲ್ ಫ್ರಾನ್ಸಿಸ್ ಪಿಜಾರೊನ ಬಳಿಯಾದರೊ ಅದೃಷ್ಟಶೋಧಕ್ಕಾಗಿ ಅತ್ತಿತ್ತ ಅಲೆದಾಡುವ ಕೇವಲ ೨೦೦ ಜನ ಸ್ಪೇನಿಶ್ ಶಿಪಾಯಿಗಳಿದ್ದರು. ಇಂಕಾ ಸೈನ್ಯದೊಡನೆ ಮುಖಾ-ಮುಖಿ ಯುದ್ಧ ಸಂಭವಿಸಿದಲ್ಲಿ ಪಿಜಾರೊ ಮತ್ತು ಅವನ ಈ ಹಿಡಿ ಸೈನ್ಯ ನುಚ್ಚುನೂರಾಗಿ ಹೋಗುತ್ತಿತ್ತು. ಬೇರೆಯವರಾಗಿದ್ದರೆ ಇಂಥ ಸಮಯದಲ್ಲಿ ಬಂದ ಹಾದಿಗೆ ಸುಂಕವಿಲ್ಲೆಂದು ತಿರುಗಿ ಹೋಗುತ್ತಿ ದ್ದರು. ಆದರೆ ಇಂಕಾ ರಾಜ್ಯದಲ್ಲೆಲ್ಲ ತನ್ನ ಗುಪ್ತ ಚಾರರ ಜಾಲವನ್ನು ಹರಡಿದ್ದ ಪಿಜಾರೊ ಅನು ಕೂಲ ಸಮಯವನ್ನು ಕಾಯುತ್ತಿದ್ದಾಗಲೇ ಅತಾಹು ಆಲ್ಪಾನ ಶಿಷ್ಟಮಂಡಳ ಬಂತು. ಈ ಶಿಷ್ಟಮಂಡಳ ಬಂಗಾರ ಮತ್ತು ಅಮೂಲ್ಯ ಮುತ್ತುರತ್ನಾದಿಗಳ ಕಾಣಿಕೆಯೊಂದಿಗೆ ಸಂಧಿ ಪ್ರಸ್ತಾಪವನ್ನು ತಂದಿತ್ತು.

ಧೂರ್ತ ಪಿಜಾರೊ ಈ ಸಲ ಸಂಧಿಮಾಡಿ ಕೊಂಡ. ಅವನೂ ಅವನ ಜನರೂ ಅಲ್ಲಿಯೆ ಬಿಡಾರ ಹೂಡಿಕೊಂಡು ನಾನಾ ಬಗೆಯ ತಂತ್ರ ಕುತಂತ್ರಗಳಿಂದ ಇಂಕಾ ಜನರನ್ನು ಸುಲಿಯ ತೊಡಗಿದರು. ಐದೇ ಐದು ವರ್ಷಗಳಲ್ಲಿ ಸ್ಪೇನಿಶ್ ಜನರು ಇಡೀ ಇಂಕಾ ಸಾಮ್ರಾಜ್ಯ ವನ್ನು ದುರ್ದಶೆಗೀಡುಮಾಡಿಬಿಟ್ಟರು. ಇಂಕಾ ಸೈನಿಕರನ್ನೆಲ್ಲ ವಿಶ್ವಾಸಘಾತದಿಂದ ಕೊಲೆಗೈದು ಅವರ ಸ್ತ್ರೀಯರನ್ನು ಕೆಡಿಸಿ ಬಳಿಕ ಅವರನ್ನು ಗುಲಾಮರೆಂದು ಮಾರಿದರು. ೧೫೩೩ ಅಗಸ್ಟ್ ೩ ರಂದು ಪಿಜಾರೊನ ಅಪ್ಪಣೆಯಂತೆ ಸಮ್ರಾಟ್ ಅತಾಹು ಆಲ್ಪಾನನ್ನು ಅವನ ಕುತ್ತಿಗೆಗೆ ಕಬ್ಬಿಣದ ಹಗ್ಗ ಬಿಗಿದು ಕೆಮ್ಸ್‌ಯಾರ್ಕಾದಲ್ಲಿ ಕೊಂದು ಹಾಕಿದಾಗ ಈ ಸ್ಪೇನಿಶ್ ಜನರ ಅತ್ಯಾಚಾರ ಚರಮ ಸೀಮೆಯನ್ನು ಮುಟ್ಟಿತು. ಆ ದಿನಕ್ಕೆ ಇಂಕಾ ಜನರ ಭವ್ಯ ಸಾಮ್ರಾಜ್ಯ ಧೂಳಿಪಟ ವಾಗಿ ಹೋಯಿತು.

ಆದರೆ ಇಂಕಾ ಸಾಮ್ರಾಜ್ಯ ಮಣ್ಣುಗೂಡಿ ಹೋಯಿತು ಎನ್ನುವುದು ಸರಿಯಾಗದು. ಏಕೆಂ

ದರೆ ಇಂಕಾ ಜನರ ಸಾಮ್ರಾಜ್ಯ ಮತ್ತೆ ತಲೆಯೆತ್ತುವ ಲಕ್ಷಣಗಳು ಈಗೆರಡು ಮೂರು ವರ್ಷಗಳಿಂದ ಕಾಣಿಸತೊಡಗಿವೆ. ಕೊಲಂಬಿಯಾ, ಇಕ್ವಾಡೋರ್ ಮತ್ತು ಪೇರುಗಳಲ್ಲಿ ಇಂಕಾ ಮೂಲದ ಜನರು ತಮ್ಮ ಹಕ್ಕುಬಾಧ್ಯತೆಗಳ ಅರಿವನ್ನು ಹೊಂದಿದ್ದಾರೆ. ಅವರಿಗೊಬ್ಬ ಧುರೀಣ—ಸಾಮ್ರಾಟ್ ಅತಾಹು ಆಲ್ಪಾನ ವಂಶಜ ದೊರಕಿದ್ದಾನೆ. ಪತನ ಹೊಂದಿದ ಇಂಕಾ ಸಾಮ್ರಾಜ್ಯದ ಪ್ರದೇಶವನ್ನು ಒಂದೇ ಒಂದು ಅಂಗುಲ ಕೂಡ ಬಿಡದೆ ಇಂಕಾ ಜನರಿಗೆ ದೊರಕಿಸಿ ಕೊಡುವುದಾಗಿ ಈತ ಒಂದು ಊರಿನ ಸೂರ್ಯ ಮಂದಿರವೊಂದರಲ್ಲಿ ಸೂರ್ಯಪ್ರತಿಮೆಯ ಮುಂದೆ ನಿಂತು ಪ್ರತಿಜ್ಞೆ ಮಾಡಿದ್ದಾನೆ.

ಇಡೀ ಪೇರು ದೇಶದಲ್ಲಿ ಇಕ್ವಾಡೋರಿನ ಗುಡ್ಡಗಳಲ್ಲಿ, ಕೋಲಂಬಿಯದ ಮೂಲನಿವಾಸಿಗಳಲ್ಲಿ, ನಾನು ಈ ಸ್ವಾತಂತ್ರ್ಯಯೋಧನಾರು ಎಂಬ ಬಗ್ಗೆ ತುಂಬ ಶೋಧ ಮಾಡಿದೆ. ಆದರೆ ಎಲ್ಲಿಯೂ ನನಗೆ ಅವನ ಹೆಸರು ತಿಳಿಯಲಿಲ್ಲ. ಇದು ಜನರು ಹುಟ್ಟಿಸಿಕೊಂಡಿರುವ ಕಥೆ, ಇದರಲ್ಲೇನೂ ಸತ್ಯವಿಲ್ಲ ಎಂದೇ ನಿರ್ಧಾರಕ್ಕೆ ಬಂದ ನಾನು ಈ ಮಾತನ್ನು ಮರೆತೇಬಿಟ್ಟೆ. ಆದರೆ ಈಗ ಮೂರು ತಿಂಗಳ ಹಿಂದೆ ನಾನು ಲಿಮಾದಲ್ಲಿದ್ದಾಗ ಒಂದು ದಿನ ಒಬ್ಬ ಸಿಪಾಯಿ ನನ್ನನ್ನೊಂದು ಓಣಿಯಲ್ಲಿ ತಡೆದು ನಿಲ್ಲಿಸಿ "ನಿಮ್ಮ ಹತ್ತರ ಕಡ್ಡಿಪೆಟ್ಟಿಗೆ ಇದೆಯೆ ?" ಎಂದು ಕೇಳಿದ. ನಾನು ಕೊಟ್ಟೆ. ಆಗ ಆತ ಸ್ಪೇನಿಶ್ ಭಾಷೆಯಲ್ಲಿ "ತಾವೇ ಲೇಖಕ ಕ್ರಿಪೆನ್‌ರೇನು ?" ಎಂದು ಕೇಳಿದ.

ಎಲಾ, ನನ್ನನ್ನೂ ನನ್ನ ವೃತ್ತಿಯನ್ನೂ ಈತ ಸರಿಯಾಗಿ ಬಲ್ಲನಲ್ಲ ಎಂದು ನನಗೆ ಆಶ್ಚರ್ಯವಾಯಿತು. ನಾನು ಅವನಿಗೇನೂ ಉತ್ತರ ಹೇಳದೆ ಬರೇ ಮುಗುಳ್ನಕ್ಕು ಸಮ್ಮತಿ ಸೂಚಕವಾಗಿ ತಲೆಯಲ್ಲಾಡಿಸಿದೆ.

ಆತನೋ ಸಾಧಾರಣ ೧೮ ವರ್ಷದವನಿರಬೇಕು. ಉಡುಪು, ಮುಖಗಳನ್ನು ನೋಡಿದರೆ ಶುದ್ಧ ರೆಡ್ ಇಂಡಿಯನ್ನನಂತೆ ಕಾಣಿಸುತ್ತಿದ್ದ. ತಂತಿಗಳಂತೆ ಸೆಟೆದು ನಿಂತ ಒರಟು ಕಪ್ಪು ಕೂದಲು, ಮೈಬಣ್ಣವನ್ನೇ ಹೋಲುವ ಬಣ್ಣದ ಕಣ್ಣುಗಳು ! "ನೀವು ರೆಡ್ ಇಂಡಿಯನ್ನರ ಮಿತ್ರರೆಂದು ಬಲ್ಲೆ. ಪತ್ರಿಕೆಗಳಲ್ಲಿ ನಿಮ್ಮ ಅನೇಕ ಲೇಖಗಳನ್ನೋದಿದ್ದೇನೆ. ಅವುಗಳಲ್ಲಿ ನಮಗೆ ನ್ಯಾಯ ದೊರಕಬೇಕೆಂದು ನೀವು ಪ್ರತಿಪಾದಿಸಿದ್ದೀರಿ" ಎಂದನಾತ.

ಈ ಮಾತು ನಿಜ. ಕಳೆದ ಕೆಲ ತಿಂಗಳಲ್ಲಿ ನಾನು ಬರೆದ ಅನೇಕ ಲೇಖಗಳನ್ನು ದಕ್ಷಿಣ ಅಮೇರಿಕದ ಜನವೆಲ್ಲ ಓದಿತ್ತು. ರೆಡ್ ಇಂಡಿಯನ್ನರು ಅಧೋಗತಿಗಿಳಿದಿದ್ದಾರೆಂದು ನಾನು ಅವುಗಳಲ್ಲಿ ಹೇಳಿದ್ದೆ. ಅವರದೇ ಆದ ನಾಡಿನಲ್ಲಿ ನಾವು ಅವರನ್ನು ಇಂಥ ದುರ್ಗತಿಗೀಡು ಮಾಡಿರುವುದು ತುಂಬ ನಾಚಿಗೆಗೇಡು ಎಂದು ಬರೆದಿದ್ದೆ. ನಾನು ಆಧಾರಕ್ಕಾಗಿ ಕೆಲ ಉದಾಹರಣೆಗಳನ್ನು ಕೊಟ್ಟಿದ್ದೆ. "ಬಿಳಿ ಅಧಿಕಾರಿಗಳ ಮುಖಾಂತರ ಪೇರುವಿನಿಂದ ಕಾಡು ನಿವಾಸಿಗಳಾದ ಇಂಡಿಯನ್ ಜನರನ್ನು ಹಿಡಿದು ತಂದು ಗುಲಾಮರೆಂದು ಮಾರಲಾಗುತ್ತದೆ. ಒಬ್ಬಾತನ ಬೆಲೆ ಕೇವಲ ಹತ್ತು ರೂಪಾಯಿ. ಪಶುಗಳಿಗೂ ಇದಕ್ಕಿಂತ ಹೆಚ್ಚು ಬೆಲೆಯಿದೆ" ಎಂದು ಉಲ್ಲೇಖಿಸಿದ್ದೆ.

ಆ ತರುಣ ನಮ್ರ ಸ್ವರದಲ್ಲಿ "ಸ್ವಾಮೀ, ಒಂದರ್ಧ ತಾಸಿನ ಮಟ್ಟಿಗೆ ನನ್ನ ಜೊತೆ ಬರುವಿರಾ? ಬಹುದಿನಗಳಿಂದಲೂ ನಿಮ್ಮನ್ನು ಬೆಟ್ಟಿಯಾಗಬೇಕೆಂಬ ಬಯಕೆ ನಮ್ಮ ಜನರಲ್ಲಿದೆ. ನಿಮ್ಮೊಂದಿಗೆ ನಮ್ಮ ಅನೇಕ ಸಮಸ್ಯೆಗಳನ್ನು ಕುರಿತು ಚರ್ಚಿಸಬೇಕೆಂದಿದ್ದೇವೆ" ಎಂದ.

ಈ ಹುಡುಗನ ವಿಚಾರವಾದರೂ ಏನಿದೆ ಎಂದು ನನಗೆ ತಿಳಿಯಲಿಲ್ಲ. ಆದರೆ ಆಗ ತುರ್ತ ನನಗೇನೂ ಕೆಲಸವಿರಲಿಲ್ಲ. ನಾನು ಅವನೊಂದಿಗೆ ಹೊರಟೆ. ಆತ ನನ್ನನ್ನು ಚಿಕ್ಕ ಚಿಕ್ಕ ಓಣಿಗಳಿರುವ ರೆಡ್ ಇಂಡಿಯನ್ ವಸತಿಗೆ ಕರೆದೊಯ್ದ. ಬಹು ದೂರ ನಡೆದ ಮೇಲೆ ಈ ನನ್ನ

# ಕೆಮ್ಮು ಮತ್ತು ನೆಗಡಿಯನ್ನು ನಿಶ್ಚಿತವಾಗಿ ಉಪಶಮನಗೊಳಿಸಲು





# ಸಿರೋಲಿನ್ 'ರೋಶ್'

## ತೆಗೆದುಕೊಳ್ಳಿರಿ

ನೆಗಡಿ ಮತ್ತು ಕೆಮ್ಮನ್ನು ಎಂದಿಗೂ ಅಲಕ್ಷಿಸಬೇಡಿರಿ — ಅವನ್ನು ನಿಶ್ಚಿತವಾಗಿ, ನಿರಪಾಯಕರವಾಗಿ ಮತ್ತು ಶೀಘ್ರವಾಗಿ ಉಪಶಮನಗೊಳಿಸಲು ಸಿರೋಲಿನ್ ತೆಗೆದುಕೊಳ್ಳಿರಿ. ಅದು ಕೆಮ್ಮನ್ನು ಕೇವಲ ತಾತ್ಕಾಲಿಕವಾಗಿ ನಿಲ್ಲಿಸುವುದಿಲ್ಲ — ಕೆಮ್ಮಿಗೆ ಮೂಲವಾದ ಹಾನಿಕಾರಕ ರೋಗಾಣುಗಳನ್ನೆ ಅದು ಪ್ರತಿಭಟಿಸುತ್ತದೆ. ಸಿರೋಲಿನ್ ಗಂಟಲು ನೋವಿಗೆ ಉಪಶಮನವನ್ನೀಯುತ್ತದೆ, ಕಫನಿವಾರಣೆಗೆ ನೆರವಾಗುತ್ತದೆ ಮತ್ತು ಅತ್ಯಂತ ದುರ್ದಮ ಕೆಮ್ಮನ್ನೂ ಶೀಘ್ರವಾಗಿ, ಸೌಮ್ಯವಾಗಿ ಪರಿಹರಿಸುತ್ತದೆ. ಅದು ನಿರಪಾಯಕರವಾಗಿಯೂ, ಪರಿಣಾಮಕಾರಿಯಾಗಿಯೂ ಇದ್ದು, ಸೇವಿಸಲು ಚೆನ್ನಾಗಿರುವುದರಿಂದ ಮನೆಯವರೆಲ್ಲರ ಮೆಚ್ಚುಗೆಗೆ ಪಾತ್ರವಾಗುತ್ತದೆ. ಮಕ್ಕಳಿಗಂತೂ ಸಿರೋಲಿನ್ ಸೇವಿಸುವುದೆಂದರೆ ಬಹಳ ಆನಂದ!




**ಮನೆಯಲ್ಲಿ ಸಿರೋಲಿನನ್ನು ತಪ್ಪದೆ ಇಟ್ಟುಕೊಳ್ಳಿರಿ**

'ರೋಶ್' ಉತ್ಪಾದನ ಸೋಲ್ ಡಿಸ್ಟ್ರಿಬ್ಯೂಟರ್ಸ್ : ವೋಲ್ಟಾಸ್ ಲಿಮಿಟೆಡ

JWT-VT-2409

ಜೊತೆಗಾರ ಕಾರ್ಲೋ ಆಂದ್ರೆ ಒಂದು ಮಣ್ಣಿನ ಮನೆಯೆದುರು ನಿಂತ. ಓಣಿಯಲ್ಲಿ ನಾಲ್ಕೂ ಕಡೆ ನೋಡಿ ಆತ ಜಾಗರೂಕತೆಯಿಂದ ನನ್ನನ್ನು ಆ ಮನೆಯೊಳಗೆ ಕರೆದೊಯ್ದ.

ಮನೆಯ ಕೋಣೆ ಪೂರ್ಣ ಕತ್ತಲಾಗಿತ್ತು. ಕಿಟಕಿಯಿರಲಿಲ್ಲ. ದೀಪವಿರಲಿಲ್ಲ. ಮೂಲೆಯಲ್ಲಿ ಒಬ್ಬ ಮುದುಕ ಬೆಂಕಿ ಕಾಯಿಸುತ್ತ ಕುಳಿತಿದ್ದ. ಬಡಕಲು ಶರೀರದ ಆತ ಒಂದು ಹೊಲಸು ಪೈಜಾಮಾ ತೊಟ್ಟಿದ್ದ. ಹೆಗಲ ಮೇಲೆ ಕೆಂಪು ಶಾಲು ಹೊದೆದಿದ್ದ. ಕಾರ್ಲೋ ನಮ್ಮಿಬ್ಬರ ಪರಿಚಯ ಮಾಡಿಕೊಟ್ಟ. ಆ ಮುದುಕನ ಹೆಸರು ಜಾರ್ಜ್ ನೇಶನ್. ಆತ ಉತ್ತರ ಪೇರು ವಿನ ಇಕ್ವಾಡೋರ್ ಗಡಿ ಬಳಿ ಇರುವ ತರಾ ಲಾದ ರೆಡ್ ಇಂಡಿಯನ್‌ರ ಸರದಾರ.

ಕಾರ್ಲೋ ನಮ್ಮಿಬ್ಬರ ನಡುವೆ ದುಭಾಷಿ ಯಾದ. ತಮ್ಮ ಉದ್ದೇಶ ಪೂರ್ತಿಗಾಗಿ ತಮಗೆ ನಾನು ಸಹಾಯ ಮಾಡಬೇಕು ಎಂದು ಜಾರ್ಜ್ ಹೇಳಿದ. ಸೂರ್ಯ ದೇವನ ಹೊಸ ಅವತಾರನಾದ ಯು ಏಜಾನ ದರ್ಶನವನ್ನು ನನಗೆ ಮಾಡಿಸು ವುದಾಗಿ ತಿಳಿಸಿದ. ಯು ಏಜಾ ಸಾಮ್ರಾಟ್ ಅತಾಹು ಆಲ್ಪಾನ ವಂಶಜ.

ಯಾವ ಮಾತನ್ನು ನಾನು ಜನರ ಕಪೋಲ ಕಲ್ಪಿತ ಎಂದು ಮರೆತಿದ್ದೆನೊ ಅದಿಂದು ಹಠಾ ತ್ತಾಗಿ ನೆನಪಿಗೆ ಬಂತು. ಆ ಮಾತು ಇಂದು ಸತ್ಯವಾಗಿತ್ತು ಮಾತ್ರವಲ್ಲ, ರೆಡ್ ಇಂಡಿಯನ್ನರ ಮನದಲ್ಲಿ ವಿದ್ರೋಹದ ಕಿಡಿಯನ್ನು ಉರಿಸು ತ್ತಿದ್ದ ಅದ್ಭುತ ವ್ಯಕ್ತಿಯ ಭೆಟ್ಟಿ ನನಗಾಗಲಿತ್ತು.

ಮಧ್ಯ ರಾತ್ರಿಯ ಹೊತ್ತಿಗೆ ಇದೇ ಮನೆಗೆ ಬರಲು ಅವರು ನನಗೆ ಹೇಳಿದರು. ಈ ರಹಸ್ಯ ವನ್ನೇನಾದರೂ ಬಯಲಿಗೆಳೆದದ್ದೇ ಆದರೆ, ಒಂದ ಕ್ಷರವನ್ನಾದರೂ ಒಡೆ ನುಡಿದದ್ದೇ ಆದರೆ ನಿಮ್ಮ ತಲೆ ಉಳಿಯುವುದಿಲ್ಲ ಎಂಬ ಎಚ್ಚರಿಕೆಯನ್ನೂ ಅವರು ಇತ್ತರು.

ಹೊಟೆಲ್ಲಿಗೆ ಮರಳಿ ಬಂದು ನಾನು ನನ್ನ ಎಲ್ಲ ಕಾರ್ಯಕ್ರಮಗಳನ್ನು ರದ್ದು ಮಾಡಿ ಕ್ಯಾಮೆರಾ ಮುಂತಾದವುಗಳನ್ನು ಸಿದ್ಧ ಮಾಡಿಕೊಂಡು ಮಧ್ಯರಾತ್ರಿಯಾಗುವುದನ್ನೇ ಕಾಯುತ್ತ ಕುಳಿತೆ. ಮಧ್ಯರಾತ್ರಿಯಾದೊಡನೆಯೆ ಆ ಮನೆಗೆ ಹೋದೆ. ಆ ಕೋಣೆಯಲ್ಲಿ ಬೆಂಕಿ ಕಾಯಿಸುತ್ತ ಕುಳಿತ ಮೂರು ಜನರನ್ನು ಕಂಡೆ. ಕಾರ್ಲೋ ಆಂದ್ರೆ, ಮತ್ತು ಜಾರ್ಜ್ ನೇಶನ್, ಫೆಲ್ಟ್ ಹ್ಯಾಟ್ ಧರಿ ಸಿದ ಮೂರನೆಯವನು ಹೊಸಬನಾಗಿದ್ದ. ನಾನು ಹೋದೊಡನೆ ಈ ಹೊಸಬ ಮುಂದೆ ಬಂದು ಇಂಗ್ಲೀಷಿನಲ್ಲಿ ತನ್ನ ಪರಿಚಯ ಹೇಳಿದ. ಅವನ ಹೆಸರು ಹ್ಯೂಗೊ ಲ್ಯಾರೆಲ್ ಎಂದು. ಇಕ್ವಾ ಡೋರಿನ ಗುವಾಯಾಕ್ವಿಲ್‌ನಲ್ಲಿ ವಕೀಲನಾಗಿದ್ದ. ಇಂದಾತ ನಮಗಾಗಿ ದುಭಾಷಿಯ ಕೆಲಸ ಮಾಡಲಿದ್ದ. ಬೆಂಕಿಯ ಆ ಮಂದ ಪ್ರಕಾಶದಲ್ಲಿ ಆತನೂ ಶುದ್ಧ ರೆಡ್ ಇಂಡಿಯನ್ನನೇ ಎಂದು ನನಗೆ ಕಂಡುಬಂದಿತು.

ಹೊರಟೆವು. ಹಾದಿ ನನಗೆ ತೀರ ಅಪರಿಚಿತ ವಾಗಿತ್ತು. ಹಾದಿಯಲ್ಲಿ ಮಾತಾಡುತ್ತ ಹ್ಯೂ ಗೋ ಲಾರೆಲ್ ಹೇಳಿದ "ಸ್ಪೇನಿಶ್ ಸೈತಾನರು ವಿಶ್ವಾಸಘಾತದಿಂದ ಅತಾಹು ಆಲ್ಪಾನ ಕೊಲೆ ಮಾಡಿ ನಮ್ಮ ಸರ್ವಸ್ವವನ್ನೂ ದೋಚಿಕೊಂಡ ಆ ದಿನವು ನಮ್ಮ ಇತಿಹಾಸದಲ್ಲೆ ಅತ್ಯಂತ ದುರ್ದಿನ. ಈ ದರೋಡೆಗಾರರಿಂದ ನಮ್ಮದೆಲ್ಲ ವನ್ನೂ ತಿರುಗಿ ಪಡೆಯುವ ದಿನವನ್ನೀಗ ನಾವು ಅತ್ಯಾತುರದಿಂದ ಎದುರು ನೋಡುತ್ತಿದ್ದೇವೆ ಸಮ್ರಾಟ ಆತಾಹು ಆಲ್ಪಾನ ವಂಶಜರನ್ನೆಲ್ಲ ಈ ಸೈತಾನರು ಕೊಂದು ಹಾಕಿದರೂ ಕೆಲವರು ತಪ್ಪಿಸಿಕೊಂಡುಳಿದರು. ಆ ರಾಜರಕ್ತವನ್ನು ಶತಮಾನಗಳಿಂದಲೂ ಪವಿತ್ರವನ್ನಾಗಿಡುವುದ ರಲ್ಲಿ ಸಫಲರಾಗಿದ್ದೇವೆ." ಈ ಶುದ್ಧ ರಾಜರಕ್ತದ ವ್ಯಕ್ತಿಯೆ ತಮಗೆ ತಮ್ಮ ಸ್ವಾತಂತ್ರ್ಯವನ್ನು ದೊರಕಿಸಿಕೊಡುವನೆಂದು ಆತ ನಂಬಿಗೆಯಿಂದ ಹೇಳುತ್ತಿದ್ದಾಗ ಅವನ ಕಣ್ಣುಗಳು ಮಿನುಗು ತ್ತಿದ್ದವು.

ನಾನು ಕೇಳಿದೆ, "ಆದರೆ ಇಷ್ಟು ಕಾಲ ನೀವು ಹೇಗೆ ಅವನನ್ನು ಜನರಿಂದ ಗುಪ್ತವಾಗಿಟ್ಟಿರಿ?

ಆತ ನಿಮಗೆ ಸ್ವಾತಂತ್ರ್ಯವನ್ನು ಕೊಡಿಸಿಯೆ ತೀರುತ್ತಾನೆಂಬುದಕ್ಕೆ ಆಧಾರವೇನು ?"

ಹ್ಯೂಗೋ ಸಹಜವಾಗಿ ಮುಗುಳ್ನಕ್ಕು ಹೇಳಿದ, "ಯು ಏಜಾ ಅವನ ವಂಶದವರೆಲ್ಲ ಎಲ್ಲಿ ಹುಟ್ಟಿದರೊ ಅಲ್ಲಿಯೇ ಹುಟ್ಟಿದ್ದಾನೆ. ಆತ ಅಲ್ಲಿಯೇ ಒಂದು ಸೂರ್ಯ ಮಂದಿರದಲ್ಲಿ ಮೂರ್ತಿಯ ಎದುರು ನಮಗೆ ಸ್ವಾತಂತ್ರ್ಯ ದೊರಕಿಸಿ ಕೊಡುವುದಾಗಿ ಪ್ರತಿಜ್ಞೆ ಮಾಡಿದ್ದಾನೆ. ಆತನ ಧಮನಿಗಳಲ್ಲಿ ಶುದ್ಧ ರಾಜರಕ್ತ ಹರಿಯುತ್ತಿದೆ ಸ್ವಾಮಿ. ನಮ್ಮ ವರ್ಷ ವರ್ಷಗಳ ತಪಸ್ಸು ಈಗ ಫಲ ಕೊಟ್ಟೇ ತೀರುವುದು."

"ಆದರೆ ಇಷ್ಟು ಸ್ವಲ್ಪ ಜನರೊಂದಿಗೆ ನೀವು ಸ್ಪೇನಿಶ್ ಮೂಲದ ಜನರ ಅಪಾರ ಶಕ್ತಿಯನ್ನು ಹೇಗೆ ಎದುರಿಸುವಿರಿ? ಸೂರ್ಯನ ಅವತಾರ ಎಂಬ ಒಂದೇ ನಂಬಿಕೆಯಿಂದ ನೀವು ಒಂದು ರಾಜ್ಯವನ್ನು ಹೇಗೆ ಕಟ್ಟಬಲ್ಲಿರಿ ?"

ಆತ ನಕ್ಕು ಉತ್ತರವಿತ್ತ: "ಒಳ್ಳೆಯ ಪ್ರಶ್ನೆ ಕೇಳಿದಿರಿ. ತುಸು ವಿಚಾರ ಮಾಡಿ ನೋಡಿ. ಕೋಲಂಬಿಯಾ, ಇಕ್ವಾಡೋರ್ ಮತ್ತು ಪೇರುಗಳಲ್ಲಿ ನೂರಕ್ಕೆ ೩೦ ರಷ್ಟು ಶುದ್ಧ ರೆಡ್ ಇಂಡಿಯನ್ನರಿದ್ದಾರೆ. ನೂರಕ್ಕೆ ೬೦ ಜನ ರೆಡ್ ಇಂಡಿಯನ್ ಮತ್ತು ಸ್ಪೇನಿಶ್ ರಕ್ತದ ಮಿಶ್ರಕುಲದವರಿದ್ದಾರೆ. ಉಳಿದ ಶೇಕಡ ೧೦ ಜನ ಮಾತ್ರ ಶುದ್ಧ ಸ್ಪೇನಿಶ್ ಮೂಲದವರು. ಅವರನ್ನು ಜಯಿಸುವುದೇನು ಮಹಾ ಕೆಲಸ?"

"ಆದರೆ ಈ ಮೂರೂ ದೇಶಗಳ ಸೈನ್ಯ ಸುಮ್ಮನಿರುವುದೇ? ಅದು ನಿಮ್ಮನ್ನು ಧ್ವಂಸ ಮಾಡಲಿಕ್ಕಿಲ್ಲವೆ?"

"ಅಲ್ಲಾ, ಇಷ್ಟೂ ತಿಳಿಯದೇ? ಈ ಸೈನ್ಯದಲ್ಲಿ ನೂರಕ್ಕೆ ೯೦ ಕ್ಕಿಂತಲೂ ಹೆಚ್ಚು ಜನ ರೆಡ್ ಇಂಡಿಯನ್ನರೂ ಮಿಶ್ರ ಕುಲದವರೂ ಇದ್ದಾರೆ. ಅವರು ನಮ್ಮ ಪಕ್ಷಕ್ಕೆ ಬರುವುದಿಲ್ಲವೆ? ಅವರ ರಕ್ತದಲ್ಲಿ ಇಂಕಾ ಜಾತಿಯ ಬಗ್ಗೆ ನಿಷ್ಠೆ ಇರುವುದಿಲ್ಲವೆ?"

ಇಷ್ಟರಲ್ಲಿ ನಾವು ಉತ್ತರ ಪೇರುವಿನ ಗುಡ್ಡಗಾಡು ಪ್ರದೇಶಕ್ಕೆ ಬಂದಿದ್ದೆವು. ನೂರಾರು ವರ್ಷಗಳಿಂದ ಸ್ಪೇನಿಶ್ ಜನಾಂಗದ ಆಳಿಕೆ ಇವರನ್ನು ತುಳಿಯುತ್ತಲಿದೆ. ಇವರೆಲ್ಲ ಒಟ್ಟಾಗಿ ಮೃತ್ಯುಭಯವನ್ನು ತ್ಯಜಿಸಿ ತಿರುಗಿ ನಿಂತರೆ ಸ್ಪೇನಿಶ್ ಜನ ಖಂಡಿತವಾಗಿಯೂ ಇವರನ್ನೆದುರಿಸಲಾರರು ಎಂದು ಯೋಚಿಸಿದೆ.

ಅನೇಕ ಜನರು ಕೆಂಪು ಶಾಲು ಹೊತ್ತುಕೊಂಡು ಎತ್ತಲೊ ಹೋಗುತ್ತಿರುವುದನ್ನು ಕಂಡೆ. ಇಂದು ಆದಿತ್ಯವಾರವೆಂದು ನನಗೆ ಸಹಸಾ ನೆನಪಿಗೆ ಬಂತು. ಬಹುಶಃ ಈ ಜನ ತಮ್ಮ ಹೊಸ ದೇವತೆ ಯು ಏಜಾನ ಪೂಜೆಗಾಗಿ ಹೋಗುತ್ತಿರಬಹುದು. ನಾವು ನಿಂತ ಸ್ಥಳದಲ್ಲಿ ಜನರೆಲ್ಲ ಶ್ರದ್ಧೆಯಿಂದ ನಿಂತಿದ್ದರು. ಎಲ್ಲಿಂದಲೊ ಬಲು ಮಧುರವಾದ, ಬಲು ಉದಾಸವಾದ ಕೊಳಲಿನ ಧ್ವನಿ ಬರುತ್ತಿತ್ತು.

ಹ್ಯೂಗೊ ಕೈಮಾಡಿ ತೋರಿಸಿದ. ಮೇಣಬತ್ತಿಯನ್ನು ಹಿಡಿದುಕೊಂಡಿದ್ದ ಇಬ್ಬರು ಹೆಂಗಸರ ನಡುವೆ ಬರುತ್ತಿದ್ದ ಹುಡುಗನೇ ಯು ಏಜಾ ಎಂದಾತ ಹೇಳಿದ. ಈ ಮೂವರ ಹಿಂದೆ ಒಬ್ಬಾತ ಕೊಳಲು ಬಾರಿಸುತ್ತ ಬರುತ್ತಲಿದ್ದ. ಸೂರ್ಯನ ಅವತಾರದ ಈ ಹುಡುಗ ಸುಮಾರು ೧೧ ವರ್ಷದವನಿರಬೇಕು. ಆದರೆ ಅವನ ಗಾಂಭೀರ್ಯ, ಅವನ ತೇಜಸ್ಸನ್ನು ಕಂಡು ಅವಾಕ್ಕಾದೆ. ಆತ ಕೈಯಲ್ಲೊಂದು ಮೂರ್ತಿಯನ್ನು ಹಿಡಿದಿದ್ದ. ಆತ ಸಮೀಪಕ್ಕೆ ಬಂದಾಗ ಅದು ಸುಮಾರು ೧೨ ಅಂಗುಲ ಎತ್ತರದ ಕೆಂಪು ಕೋಡಿನ ಒಂದು ದೈತ್ಯನ ಮೂರ್ತಿಯೆಂದು ತಿಳಿಯಿತು. ಆ ದೈತ್ಯ ಹೆಗಲ ಮೇಲೆ ಪುಟ್ಟ ಬಿಳಿಯನೊಬ್ಬನನ್ನು ಎತ್ತಿಕೊಂಡಿದ್ದ.

ಅಲ್ಲಿರುವ ಪ್ರತಿಯೊಬ್ಬನಿಗೆ ಈ ಕೆಂಪು ದೈತ್ಯ ಮತ್ತು ಬಿಳಿ ವ್ಯಕ್ತಿಗಳ ಮೂರ್ತಿಗಳ ಅರ್ಥ ಗೊತ್ತಿತ್ತು. ಯು ಏಜಾ ಒಂದೇ ಒಂದು ಬಟ್ಟೆಯನ್ನುಟ್ಟಿದ್ದ. ಕುತ್ತಿಗೆಯಲ್ಲಿ ಚಿನ್ನದಲ್ಲಿ ಪೋಣಿಸಿದ ಮುತ್ತಿನ ಹಾರಗಳಿದ್ದವು. ಆತನ ತಲೆಯ ಮೇಲಿದ್ದ ಕಿರೀಟದ ಮಧ್ಯದಲ್ಲಿ ಸೂರ್ಯನ

ಪ್ರತಿಮೆಯಿತ್ತು.

"ಕಿರೀಟದಲ್ಲಿರುವ ಸೂರ್ಯ ಮೂರ್ತಿಯನ್ನು ನೋಡಿದಿರಾ ? ಅತಾಹು ಅಲ್ಯಾನನ್ನು ಸ್ಪೇನಿಶ್ ಜನ ಕೊಂದಾಗಲೂ ಅವನು ಧರಿಸಿದ್ದ ಕಿರೀಟ ದಲ್ಲಿ ಇದೇ ಪ್ರತಿಮೆಯಿತ್ತು" ಎಂದ ಹ್ಯೂಗೋ.

ಜಯಧ್ವನಿ ಮತ್ತು ಪುಷ್ಪವೃಷ್ಟಿಗಳ ನಡುವೆ ಯು ಐಜಾ ಇನ್ನೊಂದು ಕಡೆ ತೆರಳಿದ. ನಾನು ಹ್ಯೂಗೋಗೆ ಹೇಳಿದೆ "ನಿಮ್ಮ ಮಾತಿನಲ್ಲೀಗ ನನಗೆ ನಂಬಿಗೆಯಾಗತೊಡಗಿದೆ. ಆದರೆ ಒಂದು ಮಾತನ್ನು ದಯವಿಟ್ಟು ತಿಳಿಸಿ. ಬಂಡಾಯವೇಳುವ ದಿನ ಬಂದಿದೆ ಎಂದು ಯು ಐಜಾ ನಿಮಗೆ ಯಾವಾಗ ಹೇಗೆ ತಿಳಿಸುತ್ತಾನೆ ?"

"ಅದನ್ನು ಯಾರೂ ಹೇಳಲಾರರು. ಯು ಐಜಾ ಒಬ್ಬನಿಗೇ ಆ ಮಾತು ಗೊತ್ತಿರಬೇಕು. ಅವನಿಗೆ ಇಂಕಾ ಜನರ ಸೃಜನ ದೇವಿ ಇಲಾಟಿಕಾಳಿಂದ ಎಂದು ದೈವೀ ಸಂಕೇತ ಪ್ರಾಪ್ತವಾಗುವುದೋ ಆಗ ಆತ ನಮಗೆ ಆಜ್ಞೆ ಮಾಡುವನು. ನಾವೆಲ್ಲ ಆ ಕ್ಷಣದ ನಿರೀಕ್ಷಣೆಯಲ್ಲಿ ಇದ್ದೇವೆ."

"ಹುಂ. ಆದರೆ ಯು ಐಜಾನಲ್ಲಿ ನೀವು ಇಷ್ಟು ಅಗಾಧ ವಿಶ್ವಾಸವಿಟ್ಟಿರುವುದಕ್ಕೆ ಕಾರಣವಾದರೂ ಏನು ?"

ಹ್ಯೂಗೋ ಗಂಭೀರವದನನಾಗಿ ಹೇಳಿದ: "ಅನೇಕ ಕಾರಣಗಳಿವೆ. ಎಲ್ಲಕ್ಕೂ ಹಿರಿದಾದ ಕಾರಣವೆಂದರೆ ೧೧ ವರ್ಷಗಳ ಹಿಂದೆ ಜೂನ್ ೨೪ ರಂದು ಸರಿಯಾಗಿ ಹನ್ನೆರಡು ಗಂಟೆಗೆ ಯು ಐಜಾ ಹುಟ್ಟಿದ. ಇಂಕಾ ಜನರ ಧರ್ಮದಂತೆ ಇದೊಂದು ಮಹಾ ಪವಿತ್ರ ಮುಹೂರ್ತ. ಅಂದು ಸೂರ್ಯನ ತೇಜ ಮತ್ತು ಉಷ್ಣತೆ ತನ್ನ ಚರಮ ಸೀಮೆಯನ್ನು ಮುಟ್ಟುತ್ತದೆ."

ಹ್ಯೂಗೋನಂತೆ ಅಚಲ ವಿಶ್ವಾಸವಿರುವ ಜನ ಅಲ್ಲಿ ನೂರಕ್ಕೆ ೯೦ ರಷ್ಟು ಇದ್ದದ್ದೇ ನಿಜವಾದರೆ ४೦೦ ವರ್ಷಗಳಿಂದಲೂ ಅಲ್ಲಿ ಕಾಲು ಚಾಚಿಕೊಂಡಿರುವ ಕ್ರೈಸ್ತ ಧರ್ಮಕ್ಕೆ ಉಳಿಗಾಲವಿರದು. ಇಂಕಾ ಜನರು ತಮ್ಮ ಗತವೈಭವ ಅಧಿಕಾರಗಳನ್ನು ಪಡೆಯುವರು. ಅಲ್ಲಿ ಮನೆ ಮನೆಯಲ್ಲಿ ದೇವಾಲಯ ದೇವಾಲಯದಲ್ಲಿ ಸೂರ್ಯನ ಪೂಜೆ ಪ್ರಾರಂಭವಾಗುವುದು ಎಂದು ನನಗನಿಸುತ್ತದೆ. *

"ಧರ್ಮಯುಗ" ದಿಂದ

## ಸುಖ

ನಮಗಿಲ್ಲಿ ನಾರು ಬಟ್ಟೆಯಿಂದ ಸುಖವಾಗುತ್ತದೆ, ನಿನಗೆ ರೇಶ್ಮೆಯ ಬಟ್ಟೆಯಿಂದ. ಸುಖ ಎರಡೂ ಒಂದೇ. ಯಾರ ಆಶೆ ದೊಡ್ಡದೋ ಅವನೇ ದರಿದ್ರ. ಮನಸು ಸಂತುಷ್ಟವಾಗಿದ್ದರೆ ಬಡವನಾರು ಶ್ರೀಮಂತನಾರು ? — ಭರ್ತೃಹರಿ

* *

ಆಜೀವನ ಸುಖವೇ? ಯಾವ ಜೀವಿಯೂ ಅದನ್ನು ತಡೆದುಕೊಳ್ಳಲಾರ: ಅದು ಭೂತಲ ನರಕವಾದೀತು. — ಬರ್ನಾರ್ಡ್ ಶಾ

* *

ಕೆಲವರು ಬಂದಾಗೆಲ್ಲ ಸುಖವನ್ನು ಹಬ್ಬಿಸುತ್ತಾರೆ; ಕೆಲವರು ಹೋದಾಗೆಲ್ಲ ಸುಖವನ್ನು ಹಬ್ಬಿಸುತ್ತಾರೆ. — ಆಸ್ಕರ್ ವೈಲ್ಡ್

* *

ನಿಜವಾದ ಸುಖ ಬಲು ಅಗ್ಗವಾಗಿದೆ; ಆದರೆ ಅವರ ಖೊಟ್ಟಿ ಪ್ರತಿಗಾಗಿ ನಾವು ಬಹಳ ಬೆಲೆ ತೆರುತ್ತೇವೆ. — ಜೋನ್ ಬಿಲಿಂಗ್ಸ್

# ಯಾತ್ರಿಕ





ಮೂಲ ಬಂಗಾಲಿ :

ಪ್ರಬೋಧಕುಮಾರ ಸನ್ಯಾಲ

ಸುಲಭ ಸಾಹಿತ್ಯ ಪ್ರಕಾಶನ, ಕುಮಟಾ ಇವರು ಪ್ರಕಟಿಸಿದ ಶ್ರೀ ಜಿ. ಆರ್. ಹೆಗಡೆ ಕೃತ ಕನ್ನಡ ಅನುವಾದವನ್ನನುಸರಿಸಿ ಸಂಗ್ರಹಿಸಿದವರು: ಶ್ರೀನಿವಾಸ ಹಾವನೂರ

# ಯಾತ್ರಿಕ

[ಇದು ಬಂಗಾಲಿ ಸಾಹಿತ್ಯದ ಅತ್ಯಂತ ಖ್ಯಾತ ಪುಸ್ತಕಗಳಲ್ಲೊಂದಾಗಿದ್ದು ಯಾತ್ರೆಯಲ್ಲಿ ಕೂಡ ಎಂಥ ಮಾನವೀ ದೃಷ್ಟಿ ಸಾಧ್ಯವಿದೆಯೆಂದು ಅತ್ಯಂತ ಹೃದಯಸ್ಪರ್ಶಿ ರೀತಿಯಲ್ಲಿ ತೋರಿಸುತ್ತದೆ.]

ಅದಿನ ನಾನು ಒಮ್ಮೆಲೆ ಹಿಮಾಲಯ ಯಾತ್ರೆಯ ನಿಶ್ಚಯ ಮಾಡಿದೆ. ನಿಶ್ಚಿತ ಕಾರ್ಯಕ್ರಮ ವೇನೂ ಇರಲಿಲ್ಲ. ಯಾರೂ ಸಂಗಡಿಗರಿಲ್ಲ. ಯಾರ ಮೇಲೂ ಮೋಹವಿಟ್ಟುಕೊಳ್ಳಲಿಲ್ಲ ನಿರಾಸಕ್ತನಾಗಿ, ನಿರುದ್ದೇಶದಿಂದ ಹೊರಟುಬಿಟ್ಟೆ.

ಕಾಶಿಯಿಂದ ಹೊರಟ ಗಾಡಿ ಫೈಜಾಬಾದ್ ದಾಟಿತು. ಲಖನೌ ಹಿಂದೆ ಉಳಿಯಿತು. ಬರೇಲಿಯೂ ದಾಟಿತು. ಗಾಡಿ ಓಡುತ್ತಲೇ ಇತ್ತು. ಲಕ್ಸರ ದಾಟಿ ಹರಿದ್ವಾರಕ್ಕೆ ಬಂದ ಮೇಲೆಯೇ ನನಗೆ ನಾನು ಹೊಸ ರಾಜ್ಯದಲ್ಲಿದ್ದೇನೆ ಎಂಬ ಅರಿವಾಯಿತು.

ಹಿಮಾಲಯವನ್ನು ಪ್ರವೇಶಿಸುವ ದ್ವಾರಗಳಲ್ಲಿ ಹರಿದ್ವಾರವು ಸರ್ವಶ್ರೇಷ್ಠ. ಹತ್ತಿರದಲ್ಲಿಯೇ ಗಂಗಾನದಿಯ ನೀಲ ಪ್ರವಾಹ ಹರಿಯುತ್ತಿದೆ. ನದಿಯ ದಂಡೆಗುಂಟ ಸಂನ್ಯಾಸಿಗಳ ಗುಡಿಸಲುಗಳಿವೆ. ಅಲ್ಲಿ ಬೆಂಕಿ ಉರಿಯುತ್ತದೆ. ವೇದ, ಗೀತಾ, ತುಲಸೀದಾಸ ರಾಮಾಯಣಗಳ ಚರ್ಚೆ ನಡೆಯುತ್ತದೆ. ಜೊತೆಗೆ ಗಾಂಜಾ ಸೇದುವುದೂ ಸಾಗಿರುತ್ತದೆ. ಈ ಕಾಲದಲ್ಲಿ ಹರಿದ್ವಾರದೊಳಗೆ ಯಾತ್ರಿಕರ ಗದ್ದಲವೋ ಗದ್ದಲ. ಸಂಗಡ ಪಂಡಾ ಜನಗಳೂ ಕೂಲಿಗಳೂ ಆಡುವ ಮಾತುಗಳ ಗಜಬಿಜಿಯೂ ಕೇಳಬರುತ್ತದೆ.

ಸಮುದ್ರದಂಡೆಯಲ್ಲಿ ದಾರಿ ಕಳಕೊಂಡವನು ನಿರುಪಾಯನಾಗಿ ಸಮುದ್ರದ ಕಡೆಗೆ ನೋಡುತ್ತ ನಿಲ್ಲುತ್ತಾನೆ. ಅದರಂತೆಯೇ ಹಿಮಾಲಯದ ಅಂಚಿನಲ್ಲಿ ನಿಂತು ದೂರದ ದಿಕ್ಕಿನಲ್ಲಿ ಒಂದು ಸಲ ನೋಡಿದೆ. ಘೋರ ಗಾಂಭೀರ್ಯವನ್ನು ತಳೆದಿರುವ ಪರ್ವತ ಶ್ರೇಣಿಗಳು. ಇವುಗಳ ಆರಂಭವೆಲ್ಲಿ ಆಗುತ್ತದೆ, ಅಂತ್ಯವೆಲ್ಲಿದೆ ಎಂಬುದನ್ನು ತಿಳಿಯುವಂತಿಲ್ಲ. ನಾನು ಹೋಗಬೇಕೆಂದಿರುವ ಬದರೀನಾಥವೂ ಯಾವ ದಿಕ್ಕಿಗಿದೆ ಎಂದು ತಿಳಿಯದು. ಆ ಪರ್ವತ ಶಿಖರಗಳನ್ನು ಮುಟ್ಟಲು ಸೆಣಸಾಡುವಂತೆ ಇರುವ ಮೇಘಗಳ ಮಾಲೆಗಳನ್ನು ಕಂಡು ನಾನು ಭಯಚಕಿತನಾದೆ. ಹೇಗೂ ಯಾರಿಗೂ ಹೇಳಿಲ್ಲ. ತಿರುಗಿ ಹೋಗಿಬಿಡಲೇ ಎಂಬ ವಿಚಾರ ಒಂದು ಕ್ಷಣ ಸುಳಿಯದಿರಲಿಲ್ಲ. ಆದರೆ ಅದು ಒಂದೇ ಕ್ಷಣ.

ನಾನು ಹರಿದ್ವಾರದಿಂದ ಹೊರಟಾಗ, ಸಮೀಪದಲ್ಲಿ ಬಂಗಾಲೀ ಯಾತ್ರಿಕರ ಗುಂಪೊಂದು ಹೊರಟಿದ್ದುದು ಕಂಡಿತು. ಅವರಲ್ಲಿ ಎಲ್ಲರೂ ವೃದ್ಧರೂ ಪ್ರೌಢರೂ ಆದ ಸ್ತ್ರೀಯರು. ಸಂಖ್ಯೆಯಲ್ಲಿ ಇಪ್ಪತ್ತು ಜನ. ಸ್ತ್ರೀಯರಲ್ಲಿ ಪುಣ್ಯಕಾಮನೆ, ತೀರ್ಥಯಾತ್ರೆಯ ಅಭಿಲಾಷೆ ಪುರುಷರಿಗಿಂತ ಹೆಚ್ಚು. ಆ ಗುಂಪಿನೊಡನೆ ಒಬ್ಬನೇ ಒಬ್ಬ ಪುರುಷನಿದ್ದ. ಅವನ ತಲೆಯ ಮೇಲೆ ಕಾವಿ ಬಣ್ಣದ ರೇಶಿಮೆಯ ಪಗಡಿ. ಬಟ್ಟೆಗಳೂ ಕಾವಿ ಬಣ್ಣದಿಂದ ಎದ್ದು ಕಾಣಿಸುತ್ತಿದ್ದವು.

ನಾನೂ ಕಾವಿ ಬಟ್ಟೆಯನ್ನು ತೊಟ್ಟಿದ್ದೆ. ಹೆಲಿಗೆ ಒಂದು ಕಡೆ ಕಂಬಳಿಯನ್ನು ಹಗ್ಗದಿಂದ ಬಿಗಿದುಕೊಂಡಿದ್ದೆ. ಇನ್ನೊಂದು ಕಡೆ ಜೋಳಿಗೆ. ಒಂದು ಕೈಯಲ್ಲಿ ಬಡಿಗೆ, ಇನ್ನೊಂದರಲ್ಲಿ ಹಗ್ಗ ಕಟ್ಟಿದ ತಂಬಿಗೆ, ಕಾಲಿನಲ್ಲಿ ಕ್ಯಾನ್‌ವಾಸಿನ ಹೊಸ ಬೂಟುಗಳು.

ಹರಿದ್ವಾರದಿಂದ ಹೃಷಿಕೇಶದ ತನಕ ಮೋಟಾರು ಇದೆ. ರಸ್ತೆ ೧೫ ಮೈಲು. ನಾನು ಮೋಟಾರು ಹತ್ತಿದೆ. ಆದರೆ ಅದೆಷ್ಟು ನೂಕು ನುಗ್ಗಲು, ಎಷ್ಟು ಗದ್ದಲ! ಆ ಗದ್ದಲದಲ್ಲಿ ಒಬ್ಬ ಸಾಧು

ನನ್ನ ಬಳಿಗೆ ಬಂದು ಕುಳಿತ. ಓಡುತ್ತಿರುವ ಬಸ್ಸಿನಲ್ಲಿ ಮಾತುಕತೆ ಆರಂಭವಾಯಿತು. ಅವನ ಹೆಸರು ಬಗಲಬೋಲಾ ಬ್ರಹ್ಮಚಾರಿ. ವಯಸ್ಸಿನಲ್ಲಿ ಚಿಕ್ಕವನಾಗಿದ್ದರೂ ಸಂನ್ಯಾಸ ತೆಗೆದುಕೊಂಡು ಬಹಳ ದಿನಗಳಾಗಿದ್ದವು. ಅನೇಕ ದೇಶಗಳನ್ನು ಸುತ್ತಿದ್ದ. ಭಗವದ್ಗೀತೆಯೆಲ್ಲ ಅವನಿಗೆ ಮುಖಗತವಾಗಿತ್ತು. ಸಂಸಾರವು ಮಾಯೆ. ಕರ್ಮತ್ಯಾಗವೇ ಮುಕ್ತಿ. ಬದುಕು ತುಚ್ಛ, ಮೋಕ್ಷ ಲಾಭವೇ ಪರಮ ಲಕ್ಷ್ಯಣವಾಗಿರಬೇಕು.... ಬೀಡಿ ಸೇದುತ್ತ ಸೇದುತ್ತ ಅವನು ಮಾತನಾಡುತ್ತಿದ್ದ. ವಿಶ್ವಾಸದಿಂದ ಅವನ ವಾಣಿಯನ್ನು ಕೇಳಿದೆ. ದಾರಿಯಲ್ಲಿ ಸತ್ಸಂಗವನ್ನು ಪಡೆದೆನೆಂಬ ಭಾವನೆಯುಂಟಾಯಿತು. ಆದರೆ ಅವನ ಪಾರಮಾರ್ಥಿಕ ವೃತಿಯು, ಪುಸ್ತಕದಿಂದ ಬಂದುದಲ್ಲದೇ ಜೀವನದಿಂದ ಅಲ್ಲ ಎಂಬ ವಿಚಾರ ನನ್ನಲ್ಲಿ ಮೂಡಿತು.

ಹೃಷಿಕೇಶದಿಂದ ನಮ್ಮ ಪಾದಯಾತ್ರೆ ಆರಂಭವಾಯಿತು. ಕಲ್ಲು ಮುಳ್ಳುಗಳಿಂದ ಕೂಡಿದ ದಾರಿಯದು. ಬಲಗಡೆಗೆ ದೂರದಲ್ಲಿ ಪರ್ವತ ಶಿಖರದ ಮೇಲೆ ಹಿಮದ ಮಹಲು ಶೋಭಿಸುತ್ತದೆ. ಅದರ ಅಡಿಯಲ್ಲಿಯೇ ಡೆಹರಾಡೂನಿನ ಅಡವಿ.

ತುಸು ದೂರ ಹೋದ ಮೇಲೆ ಲಕ್ಷ್ಮಣ ಝೂಲಾ ಬಂದಿತು. ಗಂಗಾನದಿಯ ನೀಲ ಪ್ರವಾಹದ ಮೇಲಿನ ಪೂಲು ಇದು. ಬದರೀ ನಾರಾಯಣಕ್ಕೆ ಹೋಗುವ ಮಾರ್ಗದಲ್ಲಿರುವ ಬಹುಶಃ ಎಲ್ಲ ಪೂಲುಗಳು ಇದರಂತೆಯೇ ಇವೆ. ದಾಟುವಾಗ ಇಡಿಯ ಪೂಲು ಅಲ್ಲಾಡಲು ತೊಡಗುತ್ತದೆ. ಭಯವನ್ನುಂಟುಮಾಡುತ್ತದೆ.

ಅದರ ಮುಂದಿನ ದಾರಿ ಇದಕ್ಕೂ ಕಷ್ಟದಾಯಕವಾಗಿದೆ. ಕಲ್ಲುಬಂಡೆಗಳಿಂದ ತುಂಬಿಹೋಗಿದೆ. ವಸಂತ ಮಾಸದ ಉದುರಿದ ಎಲೆಗಳಿಂದ ದಾರಿಯೆಲ್ಲ ಮುಚ್ಚಿಹೋಗಿದೆ. ಹೊಸ ಪಾದರಕ್ಷೆಗಳು ಕಾಲುಗಳನ್ನು ಕೊರೆಯತೊಡಗಿದವು. ಶರೀರವು ದಣಿದುಹೋಗಿದ್ದಿತು.

"ನೋಡಿರಿ, ದಾದಾ. ಅಕೋ ಅಲ್ಲಿ 'ಗರುಡ' ಆಶ್ರಮ ಕಾಣಿಸುತ್ತಿದೆ. ಅಲ್ಲಿಗೆ ಹೋಗೋಣ" ಎಂದು ಬ್ರಹ್ಮಚಾರಿ ನುಡಿದನು.

ನಾನು "ಎಷ್ಟು ಮೈಲು ಬಂದಂತಾಯಿತು ?" ಎಂದು ಕೇಳಿದೆ.

"ಸುಮಾರು ಐದು ಮೈಲು."

ಅಷ್ಟೇನೆ ಎಂದುಕೊಂಡು ಹೊರಟೆ. ದಾರಿಯುದ್ದಕ್ಕೂ ಅಲ್ಲಲ್ಲಿ ಧರ್ಮಶಾಲೆಗಳು ಹತ್ತುತ್ತವೆ. ಅವೆಲ್ಲ ಒಂದೇ ತರಹ. ದಿನವಿಡೀ ನಡೆಯುವುದು, ಸಂಜೆಗೆ ಒಂದು ಧರ್ಮಶಾಲೆಯನ್ನು ಸೇರುವುದು. ಧರ್ಮಶಾಲೆಯಲ್ಲಿ ಅಡಿಗೆಮಾಡಿಕೊಳ್ಳುವರಿಗೆ ಪಾತ್ರೆಗಳು ದೊರೆಯುತ್ತವೆ. ಆದರೆ ಒಂದು ಕರಾರು. ಆ ಧರ್ಮಶಾಲೆಯ ಕಾವಲಿನವನ ಅಂಗಡಿಯಲ್ಲಿಯೇ ಅಕ್ಕಿ ಬೇಳೆಗಳನ್ನು ಕೊಳ್ಳಬೇಕು. ಹಾಗೆ ಬೇಡವೆಂದವರಿಗೆ ಧರ್ಮಶಾಲೆಯಲ್ಲಿ ಇಳಿದುಕೊಳ್ಳುವುದಕ್ಕೆ ಸ್ಥಳ ದೊರೆಯುವುದು ಕಠಿಣವೇ. ಸರಿ, ಊಟವಾದ ಮೇಲೆ ಕಂಬಳಿ ಮುಸುಕನ್ನು ಹಾಕಿಕೊಂಡು ಮಲಗಿತೆಂದರೆ, ದೇಹವು ಮರುದಿನದ ಯಾತ್ರೆಗೆ ಅಣಿಗೊಳ್ಳುವುದು.

ಯಾತ್ರಿಕರು ಎಲ್ಲ ಪ್ರಾಂತಗಳಿಂದಲೂ ಬರುತ್ತಾರೆ. ಇಲ್ಲಿ ಸಾಮಾನ್ಯವಾಗಿ ಮಾತಾಡುವುದು ಉರ್ದೂ ಮಿಶ್ರಿತ ಹಿಂದೀ ಭಾಷೆ. ಒಬ್ಬಿಬ್ಬರನ್ನು ಬಿಟ್ಟರೆ ಎಲ್ಲರೂ ಕಾಲಿಗೆ ಪಾದರಕ್ಷೆಗಳನ್ನು ಮೆಟ್ಟುವವರೇ. ಪ್ರತಿಯೊಬ್ಬರ ಕೈಯಲ್ಲಿ ಬಡಿಗೆ ಅನಿವಾರ್ಯ ಅದೇದಾರಿಯ ಏಕಮಾತ್ರ ನಿಃಸ್ವಾರ್ಥ ಬಂಧು. ಅನೇಕ ಯಾತ್ರಿಕರು ಅಲ್ಲಿಯಗಢವಾಲೀ ಕೂಲಿಗಳ ಬೆನ್ನಮೇಲೆ ಕುಳಿತು ಪ್ರವಾಸ ಮಾಡುತ್ತಾರೆ. ಈ ಕೂಲಿಗಳು ಬಳ್ಳೇ ಶಕ್ತಿವಂತರು. ಅವರನ್ನು ಕಾಂಡೀವಾಲಾ ಎಂದು ಕರೆಯುತ್ತಾರೆ. ಕಾಂಡೀ ಎಂದರೆ ಒಂದು ಬಗೆಯ ಬುಟ್ಟಿ. ಅದನ್ನು ಅವರು ಬೆನ್ನಿಗೆ ಕಟ್ಟಿಕೊಂಡಿರುತ್ತಾರೆ. ಅದರಲ್ಲಿ ಜನರನ್ನೊ, ಸಾಮಾನನ್ನೋ ಕೂಡ್ರಿಸಿಕೊಂಡಿರುತ್ತಾರೆ. ಇನ್ನು ಆರಾಮ ಕುರ್ಚಿಗಳಂತಹ "ದಾಂಡಿ"ಗಳು ಇರುತ್ತವೆ. ಇದನ್ನು ನಾಲ್ಕು ಕೂಲಿಗಳು ಹೆಗಲಮೇಲೆ ಹೊತ್ತು ಒಯ್ಯುತ್ತಾರೆ. ಇದು ಹೆಚ್ಚು ಸುಖಕರ.

ಮೊದಮೊದಲು ಯಾತ್ರಿಗಳ ಗುಂಪಿನಲ್ಲಿ ಉತ್ಸಾಹವಿರುತ್ತದೆ. ನಡೆಯುತ್ತ ಹೋಗುವುದೆಂದರೆ ಹುರುಪು ಬಹಳ. ನಾಲ್ಕಾರು ದಿನಗಳಾದ ಮೇಲೆ ಅವರ ಗತಿ ಮಂದವಾಗುತ್ತದೆ. ಕೆಲವರು ಕುಂಟುತ್ತಾರೆ ಕೆಲವರು ಹಿಂದೆ ಬೀಳುತ್ತಾರೆ. ಕೆಲವರಿಗೆ ಅನಾರೋಗ್ಯ. ಅವರಲ್ಲಿ ಅನೇಕರು ತಿರುಗಿ ಹೋಗಿಬಿಡುತ್ತಾರೆ. ಆರಂಭದಲ್ಲಿ ಬಲಶಾಲಿಯೂ ಪ್ರಸನ್ನ ಚಿತ್ತನೂ ಮೃದುಭಾಷಿಯೂ ಆದವನು ಬಲಹೀನನಾಗುತ್ತಾನೆ. ಧೂಳಿಯಿಂದಲೂ ಮಂಜಿನಿಂದಲೂ ಅವನ ಶರೀರವು ಮಲಿನವಾಗುತ್ತದೆ. ಕಣ್ಣುಗಳಲ್ಲಿ ಕರುಣೆಯನ್ನು ಹುಟ್ಟಿಸುವ ಕಾತರತೆ ಮೂಡಿರುತ್ತದೆ. ಅಸ್ವಾಭಾವಿಕವಾದ ತೃಷ್ಣೆ ಕಾಣಿಸಿಕೊಳ್ಳುತ್ತದೆ. ಅವನ ಸ್ವಭಾವ ಸಿಡುಕಿನದಾಗುತ್ತದೆ. ಯಾತ್ರಿಕರ ಈ ಅವಸ್ಥೆ ಕೂಲಿಗಳಿಗಲ್ಲ ಚೆನ್ನಾಗಿಗೊತ್ತು. ಆದ್ದರಿಂದ ಕೂಲಿ ಸಿಕ್ಕದ ಕೂಲಿಗಳೂ ಬೆನ್ನಿಗೆ ಖಾಲಿ ದಾಂಡಿಗಳನ್ನು ಕಟ್ಟಿಕೊಂಡು ಯಾತ್ರಿಕರ ಗುಂಪಿನ ಹಿಂದಿಯೆ ಹೊರಡುತ್ತಾರೆ. ನಡುದಾರಿಯಲ್ಲಾದರೂ ಕೂಲಿ ದೊರೆಯುವುದೆಂಬ ಭರವಸೆಯಿಂದ!

ಈ ದಾರಿಯಲ್ಲಿ ಸಭ್ಯ ಸಮಾಜದಲ್ಲಿ ನಡೆವ ಹಾಗೆ ಕಳುವು ಮುಂತಾದವುಗಳು ನಡೆಯುವುದಿಲ್ಲ. ಈ ದೃಷ್ಟಿಯಿಂದ ಯಾತ್ರಿಗಳಿಗೆ ಆಪತ್ತಿಲ್ಲವೆನ್ನಬಹುದು. ಕೂಲಿಗಳು ವಿಶ್ವಾಸಿಕರು, ಸರಳ ಸ್ವಭಾವದವರು. ಹಣಕ್ಕಾಗಿ ಅವರಿಗೆ ಮೋಹವಿದೆ. ಆದರೆ ಅದನ್ನು ಪಡೆಯುವುದಕ್ಕೆ ದುಷ್ಟ ಮಾರ್ಗವನ್ನು ಅನುಸರಿಸುವವರಲ್ಲ. ಅವರು ಚರ್ಚೆ ಮಾಡಬಹುದು. ಆದರೆ ಧೂರ್ತರಲ್ಲ.

ಉತ್ತರಾಖಂಡದ ಗಂಗಾನದಿಯ ದಂಡೆಯಗುಂಟ ನಮ್ಮ ಯಾತ್ರೆ ಸಾಗಬೇಕು. ಅದು ಗಢವಾಲಿಗಳ ಪ್ರದೇಶ. ಗಂಗಾ, ಅಲಕನಂದಾ, ಮಂದಾಕಿನಿ ನದಿಗಳು ಇದರ ಸೀಮೆಗಳು. ಗಢವಾಲೀ ಕೂಲಿಗಳು ಬೇಸಾಯಗಾರರೂ ಹೌದು, ಚೈತ್ರದ ಒಳಗಾಗಿ ತಮ್ಮ ಹೊಲಗೆಲಸಗಳನ್ನು ಮುಗಿಸಿ, ಈ ಕೂಲಿ ಕೆಲಸಕ್ಕೆ ಬರುವರು. ಹರಿದ್ವಾರದಿಂದ ಮೆಹಲಚೋರಿಯ ತನಕ ತಿರುಗಾಡುವುದಕ್ಕೆ ಅವರಿಗೆ ಅನುಮತಿ ಇದೆ. ಮೆಹಲಚೋರಿ ನಗರವೇ ಇವರ ನಾಡಿನ ಅಂತಿಮ ಗಡಿ. ಈ ಕೂಲಿ ಜನರು ಹೆಚ್ಚಾಗಿ ಬ್ರಾಹ್ಮಣರು, ಕ್ಷತ್ರಿಯರು. ಯಾತ್ರಿಕರ ಜೊತೆಗೆ ಮಲಗಿಕೊಳ್ಳುವರು. ಮಾತನಾಡುವರು, ತಂಬಾಕು ಸೇದುವರು. ಆದರೆ ಇತರರು ಮುಟ್ಟಿದ್ದನ್ನು ತಿನ್ನುವುದಿಲ್ಲ. ಇವರ ಹೆಂಗಸರು ಗದ್ದೆ ಅಡವಿಗಳಲ್ಲಿ ಕೆಲಸ ಮಾಡುತ್ತಿರುತ್ತಾರೆ. ಬಾಲಕ, ಬಾಲಿಕೆಯರು ಯಾತ್ರಿಕರ ಹತ್ತಿರ ಬಂದು ಕೈಯೊಡ್ಡಿ ನಿಂತು " ಏ ಸೇಠಜಿ, ಏ ರಾಣಾ, ಸೂಜೀ ದಾರಾ ಕೊಡಿರಿ. ಬಿಲ್ಲೆ, ದುಡ್ಡು ಕೊಡಿರಿ " ಎಂದು ಕೇಳುತ್ತಾರೆ. ಇವುಗಳ ಹೊರತಾಗಿ ಬೇರೆ ಏನನ್ನೂ ಬೇಡುವುದಿಲ್ಲ. ಒಂದು ಬಿಲ್ಲೆ ಸಿಕ್ಕರೆ ಅವರಿಗೆ ಒಂದು ದೊಡ್ಡ ನಿಧಿ ಸಿಕ್ಕಂತೆ. ಸೂಜಿಯ ಮೇಲೆ ಅವರಿಗೆ ಬಲು ಆಸೆ. ಅವು ಗಢವಾಲದಲ್ಲಿ ಸಿಗುವುದಿಲ್ಲವೇನೊ.

*

ನಾಲ್ಕನೆಯ ದಿನ ಬೆಳಗಿನಲ್ಲಿ ನಾವು ವ್ಯಾಸ ಘಾಟಿನ ಹತ್ತಿರ ತಲುಪಿದೆವು. ನಮ್ಮ ದಾರಿ ಈಗ ಇಳಿಮುಖವಾಯಿತು. ನದಿಯನ್ನು ದಾಟಿ ಆಚೆಗೆ ಹೋಗಬೇಕಾದಾಗ, ಅಥವಾ ಒಂದು ಗುಡ್ಡದಿಂದ ಇನ್ನೊಂದಕ್ಕೆ ತಲುಪಬೇಕಾದಾಗ, ಒಮ್ಮೆ ಇಳುಕಲನ್ನು ದಾಟಬೇಕಾಗುತ್ತದೆ. ಇದು ಬಹು ಗಂಡಾಂತರದ, ಬಹು ಕಷ್ಟದ ಕೆಲಸ. ಅತಿಯಾದ ಜಾಗರೂಕತೆಯಿಂದ ಒಳ್ಳೆಯ ಯೋಚನೆ ಮಾಡಿ, ಘಂಟೆಗಟ್ಟಲೆ ಇಳಿಯುತ್ತ, ಇಳಿಯುತ್ತ ದೇಹ ದಣಿಯುತ್ತದೆ. ಇಳಿಯುವಾಗ ಕಾಲ ಗಂಟಿಗೆ ಜೋರು ಬಿದ್ದು, ನೋಯುವುದಕ್ಕೆ ಆರಂಭವಾಗುತ್ತದೆ. ಎದೆಯಲ್ಲಿ ಸಂಕಟವಾಗುವುದು. ಇದು ಮುಗಿದ ನಂತರ ಏರು ಹತ್ತುವುದಿದೆಯೆಂಬುದನ್ನು ಕೇಳಿದಾಗ ಯಾತ್ರಿಕರು ಸುಸ್ತು ಹೊಡೆಯುತ್ತಾರೆ. ವ್ಯಾಸ ಘಾಟಿನಲ್ಲಿ ಪ್ರಕೃತಿ ಅಪೂರ್ವ ಶೋಭೆಯಿಂದ ಬೆಳಗುತ್ತಿದ್ದಾಳೆ. ಉದಾರವಾದ ಪರ್ವತ ಶ್ರೇಣಿ ಮೇಘಗಳ ಛಾಯೆ ನದಿಯ ಮೇಲೆ ಬಿದ್ದಿರುತ್ತದೆ. ದೂರದ ತನಕ ಮಳಲು ಹಬ್ಬಿ

ಕೊಂಡಿದೆ. ಪ್ರವಾಹದ ಕಲಕಲ ನಾದವು ಅಷ್ಟೇ ರಮ್ಯ. ಒಂದು ಕಡೆಯಿಂದ ಈ ಸ್ವಪ್ನ ರಾಜ್ಯದ ಶೋಭೆ ಕಾಣುತ್ತಿದ್ದರೆ, ಇನ್ನೊಂದು ಕಡೆ ದಾರಿಯ ಕಷ್ಟ ಅಸಹನೀಯವಾಗಿತ್ತು. ಈಗಾದರೂ ತಿರುಗಿ ಹೋಗಲೆ ? ಮೂರೇ ದಿನ ಗಳಲ್ಲಿ ಊರು ಮುಟ್ಟಬಹುದು. ಹಲವಾರು ಜನ ಕಣ್ಣೆದುರೇ ಮರಳಿ ಹೋಗಿದ್ದರು. ನಾನು ಮರಳಿ ಹೋದರೆ ಊರ ಜನ ಆಡಿಕೊಳ್ಳ ಬಹುದು. ಆದರೆ ಅದಕ್ಕಾಗಿ ನಾನು ನನ್ನ ಜೀವ ನವನ್ನೇ ಬಲಿಕೊಡಲೇ ? . . . . ಆದರೆ ಇಂಥ ವಿಚಾರ ಬಹಳ ಹೊತ್ತು ಉಳಿಯುವಂತಿರಲಿಲ್ಲ.

ಇದು ವರೆಗೆ ನಾವು ೩೨ ಮೈಲು ನಡೆದು ಬಂದಂತಾಗಿತ್ತು. ನಯಾರ ನದಿಯ ಪೂಲನ್ನು ದಾಟಿದ ನಂತರ ವ್ಯಾಸ ಗಂಗೆಯ ದಂಡೆಯ ಮೇಲಿರುವ ಒಂದು ಧರ್ಮಶಾಲೆಗೆ ಬಂದು ತಲು ಪಿದೆವು.

ನಮ್ಮ ಗುಂಪಿನಲ್ಲಿ, ಆಗ ಕಾಲೀಘಾಟಿನಿಂದ ಬಂದ ಕೆಲವು ಜನ ಸೇರಿಕೊಂಡರು. ಅವರೊಡನೆ ಇದ್ದ ಒಬ್ಬ ಬ್ರಾಹ್ಮಣ ಮುದುಕಿಯ ಉತ್ಸಾಹ, ಧೈರ್ಯ, ಸಹನಶೀಲತೆಗಳು ದಂಗು ಬಡಿಸು ವಂತಿದ್ದವು. ಅವಳ ಸಂಗಡ ಬಂದವಳಲ್ಲಿ "ಚಾರೂಕಿ ಮಾ" ಒಬ್ಬಳು. ಅವಳೂ ವಯ ಸ್ಸಾದವಳೇ. ಕಾಲೀಘಾಟಿನಲ್ಲಿ ಹಾಲು ಮೊಸರು ಮಾರಿ ಜೀವಿಸುತ್ತಿದ್ದಳು. ಅವಳಿಗೆ ತನ್ನ ಮಗಳು ಚಾರೂ ಎಂದರೆ ಸರ್ವಸ್ವ. ಚಾರೂ ನಂತರ ತನ್ನ ದನಕರುಗಳು.

"ಇಲ್ಲಿ ಕೇಳಮ್ಮಾ, ಬಾದೂ ಕರ ಹಾಕಿದಾಗ ಹೀಗೆಯೇ ಮಳೆ, ಗಾಳಿ ಬೀಸುತ್ತಲಿತ್ತು. ಕತ್ತ ಲಲ್ಲಿ ಕರು ಹಾಕಿದ್ದು ತಿಳಿಯಲೇ ಇಲ್ಲ. ಅದೇ ಕಾನೀ ಗೂಂಗೀ . . . . "

"ಯಾಕೆ ಬಡಬಡಿಸುತ್ತೀಯೇ ? ಮುಗಿಸ ಬಾರದೇ ನಿನ್ನ ದನಗಳ ಪುರಾಣ. ಇಷ್ಟು ದಿನ ಅವಕ್ಕೆ ತಿನಿಸುವುದು, ಉಣಿಸುವುದು ಇದರಲ್ಲಿ- ಯೇ ವೇಳೆ ಕಳೆದೆ. ಇಲ್ಲಿಯೂ ಅದೇ ವಿಚಾ ರವೇ . . . . , ಮುಟ್ಟೀಯೆ. ನಿನ್ನ ಕಂಬಳಿ ಸರಿ ಸಿಕೋ. ಇವರನ್ನು ಮುಟ್ಟಿ ಮುಟ್ಟಿ ನನ್ನ ಜಾತಿ ಧರ್ಮ ಎಲ್ಲ ಹೋಯಿತು. ಊರಿಗೆ ಹೋಗಿ ಎಷ್ಟುಸಲ ಪ್ರಾಯಶ್ಚಿತ್ತ ತೆಗೆದುಕೊಂಡರೂ ಕಡಿಮೆಯೇ."

ಕಾಲೀಘಾಟಿನ ಈ ಮಂಡಳಿಯ ಸಂಗಡ ಗೋಪಾಲದಾದಾ ಎಂಬವರು ಬಂದಿದ್ದರು. ಅವರು ತುಂಬಾ ಧಾರ್ಮಿಕರು. ಬದರೀನಾಥ ವನ್ನು ತಲುಪಿಸಿ, ಮರಳಿ ಕರತರುವುದಕ್ಕೆ ನೆರ ವಾಗಲೆಂದು ಅವರು ಅಮರಸಿಂಹನೆಂಬ ಪಂಡಾ ನನ್ನು ಸಂಗಡ ಕರತಂದಿದ್ದರು. ದೇವ ಪ್ರಯಾಗ ದಿಂದ ತುಸು ದೂರದಲ್ಲಿಯ ಒಂದು ಗುಡ್ಡಗಾಡು ಊರಿನಲ್ಲಿ ಅವನ ಮನೆಯಿದೆ. ಅಮರಸಿಂಹನು ಯಾತ್ರಿಕರ ಸುಖಗಳ ಕಡೆಗೆ ಲಕ್ಷ್ಯಕೊಡು ತ್ತಾನೆ. ಬರೀ ಇಪ್ಪತ್ತು ಮೂವತ್ತು ರೂಪಾಯಿ ಗಳಿಗಾಗಿ ಸುಮಾರು ಮುನ್ನೂರೈವತ್ತು ಮೈಲು ಅವನು ನಡೆಯಬೇಕಾಗುತ್ತದೆ.

ಒಂದು ಸಲ ದಾರಿಯಲ್ಲಿ ಮುದುಕಿ ನನ್ನನ್ನು ಕೇಳಿದಳು.

"ಬಾಬಾ, ಇಷ್ಟು ಚಿಕ್ಕ ವಯಸ್ಸಿನಲ್ಲಿ ತೀರ್ಥ ಯಾತ್ರೆ ಮಾಡಲು ಬಂದಿರಿ."

"ತೀರ್ಥ ಯಾತ್ರೆಗೆಂದು ನಾ ಬರಲಿಲ್ಲ."

"ಅಂದರೆ? ಮತ್ತೇಕೆ ಇಲ್ಲಿ ಬಂದಿರಿ."

"ಹೀಗೆಯೆ ತಿರುಗಾಡಿಕೊಂಡು ಹೋಗೋ- ಣವೆಂದು ಬಂದೆ ಅಜ್ಜಿ."

"ತಿರುಗಾಡಲು ಬಂದಿರಾ ? ಅಹಾ. ಯಾಕೆ, ಬೇರೆ ಜಾಗ ಸಿಗಲಿಲ್ಲವೆ ? ಊಂ, ಮದುವೆ ಆಗಿಲ್ಲ ಅಂತ ಕಾಣುತ್ತದೆ."

ನಾನು ನಕ್ಕು ಹೇಳಿದೆ. "ಯಾಕೆ ಅಜ್ಜೀ, ಮದುವೆ ಮಾಡಿಕೊಂಡವರು ಇಲ್ಲಿಗೆ ಬರುವುದಿ ಲ್ಲವೆ?"

ಯಾರೋ ಹೇಳಿದರು, "ಇದೆಲ್ಲಾ ಬಾಬಾ ಬದ್ರೀನಾಥನ ದಯೆ. ಎಲ್ಲರನ್ನೂ ಎಳೆಯು ತ್ತಾನೆ"

ಆದರೆ ಆ ಮುದುಕಿಗೆ ನಾನೊಬ್ಬ ಭಕ್ತಿಹೀನ ವ್ಯಕ್ತಿ ಎಂಬುದು ಖಚಿತವಾಗಿ ಬಿಟ್ಟಿತು. ಆ ಬಗ್ಗೆ ಅವರವರಲ್ಲಿ ಟೀಕೆಗಳೂ ನಡೆದುವು. ಆ ಮುದುಕಿಗೆ ನನ್ನ ಬಗೆಗೆ ಇರುವ ಆದರವೆಲ್ಲ

ಲೋಪವಾಯಿತು. ಗೋಪಾಲದಾದಾ, "ಅದನ್ನೆಲ್ಲ ನೀವು ಮನಸ್ಸಿಗೆ ಹಚ್ಚಿಕೊಳ್ಳಬೇಡಿರಿ" ಎಂದು ನನಗೆ ಸಮಾಧಾನ ಹೇಳತೊಡಗಿದರು.

ಅಂದು ಬಹು ದೂರ ನಡೆದು ದೇವಪ್ರಯಾಗವನ್ನು ತಲುಪಿದೆವು. ಅದು ಗುಡ್ಡಗಾಡಿನ ಒಂದು ಸಣ್ಣ ನಗರ. ಇಲ್ಲಿಯೇ ಅಲಕನಂದೆ ಗಂಗೆಯನ್ನು ಕೂಡಿಕೊಳ್ಳುತ್ತಾಳೆ. ನೀಲೀ ಸೀರೆಯನ್ನುಟ್ಟು ಇಬ್ಬರು ಗೆಳತಿಯರು ಬಹು ದಿನದ ಭೆಟ್ಟಿಯನಂತರ ಪರಸ್ಪರರನ್ನು ಆಲಂಗಿಸಿದಂತೆ ಭಾಸವಾಗುತ್ತದೆ. ಅದನ್ನು ನೋಡಿ ಸಂತೋಷಪಡುತ್ತ, ಅಮರಸಿಂಹನು ತೋರಿಸಿದ ಒಂದು ಧರ್ಮಶಾಲೆಯನ್ನು ಪ್ರವೇಶಿಸಿದೆವು. ದಿನದಂತೆ ಊಟ ಮುಗಿಯಿತು. ಹಾಸಿಗೆ ಹಾಸಿದೆವು, ಒಳಿಯಲ್ಲಿ ಆ ಬ್ರಹ್ಮಚಾರಿ. ತಲೆಯ ಬಳಿ ದಾದಾ. ಆಚೆ ಆ ಮುದ-ಕಿಯರ ಗುಂಪಿನಿಂದ ಬೆಕ್ಕು ಪರದಾಡಿದಂತೆ ಸಪ್ಪಳ ಕೇಳಬರುತ್ತಿತ್ತು. ಏನೇನೆಲ್ಲ ಮಾತುಗಳು. ಯಾರದೋ ಲೆಕ್ಕ ಬಾಯಿಗೊಡುತ್ತಿಲ್ಲ. ಇನ್ನೊಬ್ಬರಿಗೆ, ಪತ್ರ ಬರೆಯಬೇಕೆಂದರೆ ಸಾಕಷ್ಟು ಬೆಳಕಿಲ್ಲ. ಯಾರದೋ ಸೊಸೆ ತನಗೆ ಹೋಗಬೇಡವೆಂದು ಹೇಳಿದ್ದಳಂತೆ. ಯಾರದೋ ಕಾಲಿಗೆ ಗುಂಗಾಡು ಕಚ್ಚಿತೆಂದು ನರಳುತ್ತಿದ್ದರು.

ಇತ್ತ ಗೋಪಾಲದಾದಾ ಕೊಟ್ಟ ಹುಕ್ಕಾವನ್ನು ಬ್ರಹ್ಮಚಾರಿ ಭಕ್ತ್ಯಾದರಗಳಿಂದ ಸ್ವೀಕರಿಸಿ ಜುರಿಕೆಯೆಳೆದನು.

"ಗೋಪಾಲದಾದಾಸಂತಹ ಮನುಷ್ಯರು ಸಿಕ್ಕುವುದು ಅಪರೂಪ. ದಾರಿಯುದ್ದಕ್ಕೂ ಅದೇನು ಅವರ ವ್ಯವಸ್ಥೆ. ಊಟ....ಉಪಚಾರ. ಅವರ ಋಣವನ್ನು ಈ ಜನ್ಮದಲ್ಲಿ. . . ."

ಅಮಲಿನಲ್ಲಿದ್ದ ಬ್ರಹ್ಮಚಾರಿ ಹೇಳಿದ್ದು ನನಗೆ. ನಾನು ಉತ್ತರಿಸಿದೆ.

"ಬ್ರಹ್ಮಚಾರೀ, ಸಂನ್ಯಾಸಿಯಾದವನು ನಿರ್ವಿಕಾರನಾಗಿರಬೇಕು. ನಿಮಗೆ ನಿಂದೆ, ಪ್ರಶಂಸೆಗಳ ಗೊಡವೆ ಇರಬಾರದು."

ನಡು ರಾತ್ರಿಯ ತನಕ ಬ್ರಹ್ಮಚಾರಿಯೊಡನೆ ಮಾತು ನಡೆಯಿತು. ಆತ ಹೇಳುತ್ತಿದ್ದ.

"ನಾನಂತೂ ಒಂದು ಮಠವನ್ನು ಸ್ಥಾಪಿಸಬೇಕೆಂದಿದ್ದೇನೆ. ನೀವು ಅದರ ಪಾರುಪತ್ಯಗಾರರಾಗಿ ಬಂದು ಇರಬೇಕು. ಇನ್ನು ಕೆಲ ದಿನ ನನ್ನ ಭಿಕ್ಷಾವೃತ್ತಿ ನಡೆಯುವುದು. ಮಠದ ಸ್ಥಾಪನೆಗೆ ಹಣ ಬೇಕಲ್ಲ."

"ಭಿಕ್ಷೆಯಿಂದ ಹೊಟ್ಟೆ ತುಂಬೀತು. ಹಣ ಕೂಡುವ ಸಂಭವವಿಲ್ಲ."

"ಹಾಗಾದರೆ ಒಡೆದು ಹೇಳಿ ಬಿಡುತ್ತೇನೆ. ಎಷ್ಟೋ ದಿನಗಳಿಂದ ನಿಮ್ಮ ಸಲಹೆಯನ್ನು ಪಡೆಯಬೇಕೆಂದಿದ್ದೆ....... ಆಂ. ಗೋಪಾಲದಾದಾ, ನಿದ್ದೆ ಬಂತೆ ?"

ಗೋಪಾಲದಾದಾನಿಂದ ಉತ್ತರ ಬರಲಿಲ್ಲ. ಬ್ರಹ್ಮಚಾರಿಯ ದನಿಯಲ್ಲಿ ಇನ್ನೂ ಹುಕ್ಕಾದ ಅಮಲು ಇತ್ತು. ಗೋಪಾಲದಾದಾಗೆ ನಿದ್ದೆ ಹತ್ತಿದೆಯೆಂದು ತಿಳಿದು ನಿಶ್ಚಿಂತವಾದರೂ ಸಣ್ಣ ದನಿಯಲ್ಲಿ ಹೇಳ ತೊಡಗಿದ :

"ಸ್ವಲ್ಪ ರೂಪಾಯಿ ಕೂಡಿಸಿಟ್ಟಿದ್ದೇನೆ,ದಾದಾ. ಸಾವಿರದಷ್ಟಾಗಿರಬಹುದು. ಎರಡು ಸಾವಿರ ರೂಪಾಯಿಗಳಾದರೂ ಬೇಕಲ್ಲ. ಆ ಮೇಲೆ ಬಂಗಾಲಕ್ಕೆ ಹೋಗುವೆ. ಒಳ್ಳೆಯ ಹವೆ, ನೀರು ಇರುವ ಒಂದು ಹಳ್ಳಿಯನ್ನು ನೋಡಿ ಇಟ್ಟಿದ್ದೇನೆ. ಮೂರು ದಿನ ಮುಂಚಿತವಾಗಿ ಆ ಹಳ್ಳಿಯ ಹತ್ತಿರದಲ್ಲೇ ಅಡಗಿಕೊಂಡು, ಒಂದು ಮರದ ಕೆಳಗೆ..."

ನಾನು ತಲೆಯೆತ್ತಿ ನೋಡಿದೆ. ಬ್ರಹ್ಮಚಾರಿ ಇನ್ನಷ್ಟು ಮುಖವನ್ನು ಚಾಚಿ ಹೇಳಿದ:

"ನಿಮ್ಮ ಹತ್ತಿರ ನನಗೆ ಸಂಕೋಚವಿಲ್ಲ. . . . ಕೇಳಿ. ಆ ಮರದ ಕೆಳಗೆ ಮಣ್ಣು ಅಗೆದು ಒಂದು ಶಿವಲಿಂಗವನ್ನು ಹೂಳುತ್ತೇನೆ. ಮೂರು ದಿನಗಳ ನಂತರ ಊರೊಳಗೆ ಬೇರೊಂದು ದಿಕ್ಕಿನಿಂದ ಪ್ರವೇಶಿಸಿ, 'ಕೈಲಾಸದಿಂದ ಆದೇಶ ಬಂದಿದೆ. ವೃಕ್ಷದ ಅಡಿಯಲ್ಲಿ ಭಗವಂತನ, ಸ್ವಯಂಭೂ ಮಹಾದೇವನ ಆವಿರ್ಭಾವವಾಗುವುದು. ನಾನು ಅದರ ಮಂದಿರವನ್ನು ಕಟ್ಟಿಸಬೇಕೆಂದಿದ್ದೇನೆ' ಎಂದು ಅವರಿಗೆ ಹೇಳುವೆ."

ನಾನು ಉತ್ಸಾಹದಿಂದ ಹೇಳಿದೆ, "ನನಗೂ ಅಷ್ಟು ಚಾನ್ಸ್ ಕೊಡಿರಿ. ನಿಮ್ಮ ಸೂಚಿತ ಮಂದಿರದ ಪ್ರಚಾರ ಮಾಡುತ್ತೇನೆ. ಇದು ನೋಡಿರಿ

ಆ ವೃಕ್ಷವು ಬಹಳ ಪ್ರಾಚೀನವಾಗಿರಬೇಕು. ಅಂದರೆಯೇ ಜನ ನಂಬುತ್ತಾರೆ."

ಬ್ರಹ್ಮಚಾರಿ ಹೇಳಿದ: "ದೇವದೇವತೆಗಳ ವ್ಯಾಪಾರವು ನಮ್ಮ ದೇಶದಲ್ಲಿ ಎಲ್ಲಕ್ಕೂ ಲಾಭ ಕರವಾದ ಉದ್ಯೋಗವಾಗಿದೆ."

"ಬ್ರಹ್ಮಚಾರೀ, ಇನ್ನೂ ಒಂದನ್ನು ಮಾಡಿರಿ. ಅದರ ಜೊತೆಗೆ ಒಂದಿಷ್ಟು ಮಂತ್ರ ತಂತ್ರ, ನಾರು ಬೇರುಗಳ ಉದ್ಯೋಗವನ್ನೂ ಆರಂಭಿಸಿರಿ."

ಬ್ರಹ್ಮಚಾರಿಗೆ ನಾನು ಚೇಷ್ಟೆ ಮಾಡುತ್ತಿದ್ದೇನೆಂಬುದರ ಅರಿವು ಆಯಿತೊ ಇಲ್ಲವೊ. ಅಂತೂ ನನಗೆ ಬೆಳತನಕ ನಿದ್ದೆಯಾಗಲಿಲ್ಲ. ದೇಹವೆಲ್ಲ ದಣಿವಿನಿಂದ ನುಗ್ಗುನುಗ್ಗಾಗಿತ್ತು. ಕುತ್ತಿಗೆಯ ಹಿಂಭಾಗ ನೋಯುತ್ತಿದುದರಿಂದ, ತಲೆಯನ್ನು ಮೇಲೆತ್ತುವುದು ಕಷ್ಟಕರವಾಗಿದ್ದಿತು ಪಾದಗಳ ಸ್ಥಿತಿ ಕೇಳುವುದೇ ಬೇಡ. ಅಯ್ಯೋ, ಈ ನಿರ್ದಯ ಮನಸ್ಸು, ನಮ್ಮೀ ದೇಹಕ್ಕೆ ಎಷ್ಟೊಂದು ಕಷ್ಟ ಕೊಡುತ್ತಿದೆಯಲ್ಲ, ಎಂದೆನಿಸಿತು. ಎದ್ದು ಕುಳಿತೆ. ಬಡಿಗೆಯಿಂದ ಹೊಡೆಸಿಕೊಂಡಂತೆ ಬೆನ್ನು ಟೊಂಕಗಳ ಸ್ಥಿತಿಯಾಗಿತ್ತು.

ಗಂಗಾ, ಅಲಕನಂದಾ ಸಂಗಮದ ಬಳಿ ಜನರು ಶ್ರಾದ್ಧ ತರ್ಪಣ ಕೊಡಲು ನಿಂತರು. ಗೋಪಾಲದಾದಾ, ಬ್ರಹ್ಮಚಾರಿ, ಕ್ಷೌರಮಾಡಿಸಿಕೊಂಡರು ಪಂಡಾ ಜನರು ಮಂತ್ರ ಪಠಣ ಮಾಡುತ್ತಿದ್ದಾಗ, ತಮ್ಮ ಪಿತೃಗಣವು ತಾವು ಅರ್ಪಿಸಿದ ಪಿಂಡಗಳನ್ನು ತಿಂದು ತೃಪ್ತವಾಯಿತೆಂದು ಇವರಿಗೆಲ್ಲ ತೃಪ್ತಿಯಾಯಿತು.

ನಾನು ಅಲಕನಂದಾ ನದಿಯ ಆಚೆಗಿನ ಸೌಂದರ್ಯವನ್ನು ನೋಡಿ ನೋಡಿ ಸಂತಸಬಡುತ್ತಿದ್ದೆ. ಯಾವನೋ ಮಹಾಶಿಲ್ಪಿಯ ಸಮಸ್ತ ಜೀವನದ ಸಾಧನೆಯಿಂದ ನಿರ್ಮಿತವಾದುದೆಂಬಂತೆ ಈ ಬೆಳಗಿನ ಸೌಂದರ್ಯವು ಕಾಣುತ್ತಿತ್ತು. ಈ ಚಿತ್ರವನ್ನು ಕಂಡು ಮನಸು ಅತ್ಯಂತ ತೃಪ್ತವಾಯಿತು.

ಬಹಳ ತಡವಾಗಿ ಹೋಗಿತ್ತು. ಅಡಿಗೆಯ ಸಿದ್ಧತೆಗಾಗಿ ಸ್ನಾನಕ್ಕೆ ಬಂದೆ. ಬ್ರಹ್ಮಚಾರಿ ದೇವಾಲಯಕ್ಕೆ ಪ್ರಸಾದಕ್ಕಾಗಿ ಹೋಗಿದ್ದ. ನಾನು ಅಡಿಗೆ ಮಾಡುವ ತಯಾರಿಯಲ್ಲಿದ್ದಾಗ ಗೋಪಾಲದಾದಾ ಬಂದು "ನಾಲ್ಕಾಣೆ ಚಿಲ್ಲರೆ ಇದ್ದರೆ ಕೊಡಿರಿ. ಅಂಗಡಿಕಾರನ ಲೆಕ್ಕ ಮುಗಿಸುವೆ," ಎಂದರು.

ಕಟ್ಟಿಗೆ ಊದಿ ಊದಿ ನನ್ನ ಕಣ್ಣುಗಳು ಕೆಂಪಾಗಿದ್ದವು. "ಬಂದೆ. ಈಗ ಕೊಡುತ್ತೇನೆ" ಎಂದು ನನ್ನ ಟ್ರಂಕಿನ ಬಳಿ ಬಂದೆ. ವಸ್ತ್ರದಲ್ಲಿ ಕಟ್ಟಿ ಹಣ ಇಟ್ಟಿದ್ದ ಟ್ರಂಕನ್ನು ತೆಗೆದು ನೋಡುತ್ತೇನೆ. ವಸ್ತ್ರದ ಗಂಟೇ ಇಲ್ಲ! ಇದರರ್ಥ? ನನ್ನ ಮೋರೆ ಝುರ್ರನೆ ಇಳಿದು ಹೋಯಿತು. ಜೋಳಿಗೆಯಲ್ಲಿ ನೋಡಿದೆ, ಕಂಬಳಿ ಝಾಡಿಸಿದೆ. ಅಂಗಿಯ ಜೇಬುಗಳನ್ನು ತಿರುತಿರುವಿ ನೋಡಿದೆ. ಇದೇನು ಸರ್ವನಾಶವಾಯಿತು!

ನಾಯಿಯ ತಲೆಯ ಮೇಲೆ ಒಮ್ಮೆಲೆ ಬಡಿಗೆಯಿಂದ ಬಡಿದರೆ ಬೀಳುತ್ತೇಳುತ್ತ ಹುಚ್ಚರಂತೆ ಅಲ್ಲಿಯೇ ಸುತ್ತುತ್ತಿರುವಂತೆ ನಾನೂ ಕೆಲವು ನಿಮಿಷದ ತನಕ ಏನು ಮಾಡಬೇಕೆಂಬುದು ತಿಳಿಯದೆ ಧರ್ಮಶಾಲೆಯಲ್ಲಿ ಸುತ್ತಾಡಿದೆ. ಕಂಬಳಿ ಇದೆ. ಬಡಿಗೆಯಿದೆ, ಜೋಳಿಗೆ ಇದ್ದಹಾಗೇ ಇದೆ. ಆದರೆ ಅತ್ಯಾವಶ್ಯಕವಾದ ಸರ್ವಶ್ರೇಷ್ಠವಾದ ಧನವೇ ಇಲ್ಲ. ನನ್ನ ಜೀವರಸವೇ ಒಂದು ಕ್ಷಣದಲ್ಲಿ ಒಣಗಿ ಹೋದಂತೆ ಭಾಸವಾಯಿತು. ಮುಂದೆ ಗತಿ? ನನ್ನ ಯಾತ್ರೆ ಕೊನೆಗೊಳ್ಳುವ ಬಗೆಯೇ ಇಲ್ಲ. ಹಿಂದೆ ಹೋಗುವುದಕ್ಕೂ ಇಲ್ಲ. ಯಾರೂ ಸಕ್ರಿಯ ಸಹಾನುಭೂತಿ ತೋರಿಸುವುದಿಲ್ಲ. ಈ ಯಾತ್ರಿಕರಲ್ಲಿ ಇರುವುದೆಲ್ಲ ಬಾಯಿಯಿಂದ ಸಹಾನುಭೂತಿ ಈ ಸ್ನೇಹಹೀನರಾದ, ಪುಣ್ಯಲೋಭಿಗಳಾದ ಜನ, 'ಅಯ್ಯೋ ಪಾಪ' ಎನ್ನುವರು, ನನ್ನನ್ನು ಬಿಟ್ಟು ಮುನ್ನಡೆಯುವರು. ನಾನು ಒಬ್ಬನೇ ಇದ್ದಾಗ, ಈ ಪರ್ವತಗಳೆಲ್ಲ ರಾಕ್ಷಸ ಸ್ವರೂಪವನ್ನು ಧರಿಸಿ ನನ್ನನ್ನು ರಸಾತಲಕ್ಕೆ ಮೆಟ್ಟುವವು.

"ಏನು ದಾದಾ, ಚಿಲ್ಲರೆ ಕೊಡುತ್ತೀರಾ?"

"ಆಂ? ಹೂಂ. ಊಂಹು. ನನ್ನ ಹತ್ತಿರವೂ ಚಿಲ್ಲರೆ ಇಲ್ಲ."

ಗೋಪಾಲದಾದಾ ತಮ್ಮರೂಪಾಯಿ ಹಿಡಿದುಕೊಂಡು ಪೇಟೆಗೆ ಹೋದರು. ಆಚೆ ಕಡೆಗೆ ಮುದುಕಿಯರ ಅಡಿಗೆ ನಡೆದಿತ್ತು. ನನ್ನ ಒಲೆಯ ಬೆಂಕಿ ಆರಿಹೋಗಿತ್ತು. ಹಗಲಿನ ಬೆಳಕೂ ನನ್ನ ಕಣ್ಣಿಗೆ ಕಾಣುತ್ತಿದ್ದಿಲ್ಲ, ಆಕಾಶವು ವಿಷಪೂರಿತವಾದಂತೆ ತೋರಿತು. ಬೇಡ, ನನಗೆ ಭಗವಾನ್ ಬದ್ರಿಯ ಕೃಪೆ ಬೇಡ. ನಾನು ಸಂನ್ಯಾಸಿಯಲ್ಲ. ಲೋಭ, ಮೋಹ, ಕಲಹ ಕಲಂಕಗಳಿಂದ ಕೂಡಿದ ಜಗತ್ತಿನಲ್ಲಿಯೆ ಬದುಕಬೇಕೆನ್ನುತ್ತೇನೆ. ಆದರೆ ಅದಕ್ಕೆ ಬೇಕಾದ ಧನವೇ ಸದ್ಯಕ್ಕಿರಲಿಲ್ಲ. ಸಹಾಯಯಾಚನೆ ಮಾಡಲೇ? ಈ ಯಾತ್ರಾಲೋಭಿಗಳಲ್ಲಿ ಹುಟ್ಟಲಾರದು.

ಆದರೆ ಹಣ ಹೋಯಿತೆಲ್ಲಿ? ಬ್ರಹ್ಮಚಾರಿ ಒಯ್ದಿರಬಹುದೆ? ಹೌದು. ಅವನದೇ ಈ ಕೆಲಸ, ನೀಚ. ಈ ರೀತಿ ಮಾಡಿಯೆ ಅವನು ಸಾವಿರ ರೂಪಾಯಿ ಕೂಡಿಸಿರಬೇಕು. ವಿಶ್ವಾಸಘಾತಕ! ಕೈಗೆ ಸಿಗಲಿ-ಇವತ್ತು.

"ದಾದಾ, ಅದೇನೊ ವಟಗುಟ್ಟಲಿಕ್ಕೆ ಹತ್ತಿರುವಿರಲ್ಲ."

ಬಂದವ ಬ್ರಹ್ಮಚಾರಿಯೆ . . ಅಬ್ ಎಂದು ತೇಗಿದ. "ಇಕೊಳ್ಳಿ, ನಿಮಗಾಗಿ ಒಂದು ಪಾನಪಟ್ಟಿಯನ್ನು ತಂದಿದ್ದೇನೆ. ಇದೇನು? ಇನ್ನೂ ನಿಮ್ಮ ಸ್ನಾನ, ಊಟವಾದಂತೆ ಕಾಣುವುದಿಲ್ಲವಲ್ಲ."

ನಾನು ಸ್ನಾನಕ್ಕೆಂದು ನದಿಗೆ ಹೊರಟೆ. ಆಗ ಲಕ್ಷ್ಯಕ್ಕೆ ಬಂತು; ಒಂದು ಗುರುತಿನ ಕಲ್ಲಿನ ಬುಡದಲ್ಲಿ ನನ್ನ ವಸ್ತ್ರವನ್ನು ಹಿಂದಿನ ದಿನ ಸಂಜೆಗೆ ಅಡಗಿಸಿ ಇಟ್ಟದ್ದು! ಓಡಿ, ಹೋಗಿ ಆ ಕಲ್ಲನ್ನು ತೆಗೆದು, ಉಸುಕಿನಲ್ಲಿ ಕೈ ಹಾಕಿದೆ. ಅಲ್ಲಿಯೆ ಇತ್ತು ನನ್ನ ಯಾತ್ರಾ ಸರ್ವಸ್ವ!

ಅದನ್ನು ಕಾಯುತ್ತ ಹರಿಯುತ್ತಿದ್ದ ಅಲಕನಂದೆಗೆ ಧನ್ಯವಾದವನ್ನು ಅರ್ಪಿಸಿದೆ.

ಜಯ ಬದ್ರೀ ವಿಶಾಲಕೀ! ಜಯ ಬಾಬಾ ಕೇದಾರನಾಥ!

ಮತ್ತೆ ಅದೇ ಪರಿಚಿತವಾದ, ಏರುತಗ್ಗು ಗಳಿಂದ ಕೂಡಿದ ದಾರಿ. ಎಲ್ಲರನ್ನೂ ದೂರದಲ್ಲಿ ರುವ ದುರ್ಗಮ ಸ್ಥಳಕ್ಕೆ ನೂಕುವುದಕ್ಕೆ ಮುಂದೆ ಬಿದ್ದುಕೊಂಡಿರುವಂತೆ ಕಾಣುತ್ತಿದೆ. ಹಾವಿನ ಹಾಗೆ ಉದ್ದಕ್ಕೆ ಅಂಕುಡೊಂಕಾಗಿರುವ ಅದರ ರೂಪ. ಹಿಂದಕ್ಕೂ ಮುಂದಕ್ಕೂ ಪರ್ವತ ಮಾಲೆ ಯನ್ನು ಸುತ್ತಿಕೊಂಡ ಅಜಗರದಂತೆ ಚಿರನಿದ್ರೆ ಯಲ್ಲಿ ಮಲಗಿದೆ. ಗ್ರೀಷ್ಮ, ವರ್ಷ, ಚಳಿ ಯಾವ ಋತುವಿನಲ್ಲೂ ಅದು ಚಲಿಸುವುದಿಲ್ಲ.

ಇಷ್ಟು ದಿನ ತಪೋಲೋಕದ ಪ್ರವಾಸಮಾಡಿ ಯಾಯಿತು, ಇದೇನೋ ದೇವಲೋಕವಂತೆ. ಸ್ವರ್ಗದಲ್ಲಿರುವ ಮಹಾಯೋಗಿಯ ಜಟೆಯನ್ನು ಮುಟ್ಟಲು ನಾವು ಇರುವೆಗಳ ಸಾಲಿನಂತೆ ಹೋಗುತ್ತಿದ್ದೇವೆ.

ಆದರೆ ದುರ್ದೈವ! ಇಂದು ಬೆಳಗಿನಿಂದ ಯಾಕೊ ಏನೊ ಕಾಲಿನ ಗಂಟಿನಲ್ಲಿ ನೋವು ಕಾಣಿಸಿತ್ತು. ಈಗ ಅದು ಮತ್ತಷ್ಟು ಹೆಚ್ಚಿದೆ. ಏರು ಮಾರ್ಗದಲ್ಲಿ ಹೋಗುವಾಗ ಈ ನೋವು ಕಾಣಿಸಿಕೊಳ್ಳುವುದು. ಇಳುಕಲಿನಲ್ಲಿ ಅದರ ಪ್ರತಿಕಿಯೆ ಆರಂಭವಾಗುವುದು. ಆಗ ನನ್ನ ಮನಸ್ಸಿನಲ್ಲಿ ಹುಟ್ಟಿದ ಭಯವನ್ನು ಈಗ ಬರೆದು ವರ್ಣಿಸುವುದು ಸಾಧ್ಯವಿಲ್ಲ. ಉಳಿದವರು ಮುಂದೆ ಹೋಗಿದ್ದರು, ನಾನು ಸಾವಕಾಶವಾಗಿ ಕಾಲೆಳೆಯುತ್ತ ಸಾಗಿದ್ದೆ.

ಇತರ ಯಾತನೆಗೂ ಕೊರತೆಯಿರಲಿಲ್ಲ. ಮಣ್ಣುಗಾಳಿಯಿಂದ ಕೂದಲು ಒಣಗಿದ ಹುಲ್ಲಿ ನಂತಾಗಿದೆ. ಚರ್ಮವು ರಕ್ತಹೀನವಾಗಿ ವಿವ ರ್ಣವಾಗಿದೆ. ಕಣ್ಣುಗಳು ಒಳಸೇರಿ, ದೃಷ್ಟಿ ಮಲಿನವಾಗಿದೆ. ಮಂದವಾಗಿದೆ. ಮರಗಳು ತಾಗಿ ತಾಗಿ ಮುಂಗೈಯ ಕೂದಲು ಉದುರಿವೆ. ಉಡುವ ಬಟ್ಟೆ, ತಲೆಯ ಕೂದಲಿನಲ್ಲಿ ಸಣ್ಣ ಕೀಟಕಗಳು ವೇದನೆ ಕೊಡುತ್ತವೆ. ಅವುಗಳ ಕಾಟದಲ್ಲಿ ನಿದ್ದೆಯೇಬರುವುದಿಲ್ಲ. ಒಮ್ಮೆ ಅವನ್ನು ತೊಡೆದು ಹಾಕಿದರೂ ಮತ್ತೆಲ್ಲಿಂದ ಬರುವವೊ ಏನೊ? ಇದರ ಜೊತೆಗೆ ನೊಣಗಳ ಕಾಟ ಬೇರೆ. ಲಕ್ಷಗಟ್ಟಲೆ ನೊಣಗಳು ಕಾಣುತ್ತವೆ. ಎಲ್ಲವೂ ನೊಣಮಯ. ಈ ನೊಣಗಳಿಂದ ಸಣ್ಣಾಗಿ ಕಡಿಸಿಕೊಂಡು, ಕೈಕಾಲುಗಳಿಗೆ ಗಾಯವಾ ಗದ ಯಾತ್ರಿಕನೇ ಇಲ್ಲ. ನೀರ ಮೇಲೂ ಈ ನೊಣಗಳು ಮುತ್ತಿಕೊಂಡಿರುತ್ತವೆ.

ಹಾಗೆಯೇ ಕುಂಟುತ್ತ, ನಾನು ವಿದ್ಯಾಕುಟಿಯ ಧರ್ಮಶಾಲೆಗೆ ಬಂದಾಗ, ಕತ್ತಲಾಗ ಬಂದಿತ್ತು. ಉಳಿದವರು ತಂತಮ್ಮ ಅಡಿಗೆಯ ತಯಾರಿಯಲ್ಲಿ ದ್ದರು. ಮುದುಕಿಯರು ನಾನು ನಾಸ್ತಿಕ, ಧರ್ಮ ಲಂಡನೆಂದು ನನ್ನ ಸಂಪರ್ಕವನ್ನೇ ಬಿಟ್ಟಿದ್ದರು. ನಡುಬಗ್ಗಿದ, ಚಾರೂನ ತಾಯಿ ಹತ್ತಿರ ಬಂದು- "ಚಿಂತೆ ಮಾಡಬೇಡ. ನಾನು ನಿನಗೆ ನೆರವಾಗು ತ್ತೇನೆ. ಕಾಲೀಘಾಟಿನ ಚಕ್ರವರ್ತಿಗಳ ಮನೆಗೆ ನಾನು ಮೂರು ಪಾವು ಹಾಲು ಕೊಡುತ್ತೇನೆ. ಅದರ ಹಣವೆಲ್ಲ ಚಾರೂನ ಕೈಯಲ್ಲಿಯೇ ಇದೆ. ಅವರ ಮನೆಯಲ್ಲಿಯೂ ನಿನ್ನಂಥವನೇ ಒಬ್ಬ ಮಗನಿದ್ದಾನೆ.. ಓ, ನಾನೀಗ ಹೋಗುತ್ತೇನೆ. ಬಾಬಾ ಠಾಕೂರ, ಕಾಲು ಈಗ ಹೇಗಿದೆ?" ಅನ್ನುತ್ತ ಅವಳು ಎದ್ದು ಹೋದಳು.

ಇತ್ತ ಬ್ರಹ್ಮಚಾರಿಯು, ತನ್ನ ಅಡಿಗೆಯಲ್ಲೇ ನನಗಾಗಿ ಒಂದೆರಡು ರೊಟ್ಟಿಗಳನ್ನು ಬಡಿದ. ಒಂದಿಷ್ಟು ನೀರು ಬಿಸಿ ಮಾಡಿ, ಉಪ್ಪು ಬೆರಸಿ ನನ್ನ ಕಾಲಿಗೆ ಸೇಕ ಕೊಡತೊಡಗಿದ. "ಇದ ರಿಂದ ಗುಣವಾಗದಿದ್ದರೆ ಇನ್ನೊಂದು ಔಷಧಿ ಇದೆ" ಎಂದ ಬ್ರಹ್ಮಚಾರಿ.

ಮರುದಿನ ಕ್ರಮಿಸಬೇಕಾದ ದಾರಿ ಬಹಳ ವಿತ್ತು. ನಾನು ನಡೆದರೆ ಸಾಮಾನ್ಯವಾಗಿ ಎಲ್ಲ ರಿಗಿಂತ ಮುಂದೆ ಇರುತ್ತಿದ್ದೆ. ಈಗ ನಾನು ಎಲ್ಲರಿ ಗಿಂತ ಹಿಂದೆಯೇ ಇರಬೇಕಾಗಿ ಬಂದಿತು. ಆ ಮುದುಕಿಯರೊಂದಿಗೆ ಗೋಪಾಲದಾದಾ ಮುಂದೆ ಹೋಗಿದ್ದ. ಬ್ರಹ್ಮಚಾರಿ ತುಸು ಹೊತ್ತು ನನ್ನ ಸಂಗಡವೇ ಬಂದು, ಅವನೂ ಮುಂದಡಿ ಇಟ್ಟ; ಹೋಗಲಿ. ಅವರೇಕೆ ನನಗಾಗಿ ಕಾಯಬೇಕು? ನನ್ನ ಹಿಂದಿನಿಂದ ಬರುತ್ತಿದ್ದ ಪಂಜಾಬೀ, ಬಿಹಾರೀ ಯಾತ್ರಿಕರೂ ಸ್ನೇಹದಿಂದ ನನ್ನ ಕಾಲುಗಳ ಕಡೆಗೆ ನೋಡಿ ಮುಂದೆ ಸಾಗಿದರು. ನನ್ನ ಹಿಂದೆ ಇನ್ನೂ ಬರುವವರಿದ್ದಾರೆಂದು ಸಮಾ

ಥಾನ ತಾಳಿದೆ.

ದಾರಿಯಂತೂ ಇನ್ನಷ್ಟು ದುರ್ಗಮವಾಗಿತ್ತು. ನದಿಯ ದಂಡೆಗುಂಟ ರಸ್ತೆ ಕುಸಿದು ಹೋಗಿದೆ. ಕೆಲವು ಕಡೆ ದೊಡ್ಡ ದೊಡ್ಡ ಬಂಡೆಗಳು ಈ ಪರ್ವತ ದೇಹಕ್ಕೆ ಬಹು ಅಲ್ಪ ಆಧಾರದ ಮೇಲೆ ಅಂಟಿಕೊಂಡಿವೆ. ಅವುಗಳಲ್ಲಿ ಯಾವುದಾದರೂ ಒಂದು ಜಾರಿದರೆ ಹತ್ತಾರು ಯಾತ್ರಿಕರನ್ನು ಏಕಕಾಲಕ್ಕೆ ಬಲಿ ತೆಗೆದುಕೊಳ್ಳಬಹುದು. ಅಂಥ ದಾರಿಯಲ್ಲಿ ನಡೆಯುವಾಗ ನನ್ನ ಕಂಬಳಿ ಮೊದಲಾದ ಒಜ್ಜೆಗಳನ್ನು ಹೊತ್ತುಕೊಂಡು ಹೋಗುವುದು ಅತಿ ದುಷ್ಕರವಾಗಿತ್ತು. ಇಂಥ ಸ್ಥಿತಿಯಲ್ಲಿಯೆ ಇದು ವರೆಗೆ ೪೦ ಮೈಲು ಬಂದಿದ್ದೇನೆ ಎಂದು ಸಮಾಧಾನ ಹಚ್ಚಿಕೊಂಡು ಸಾಗಿದ್ದೆ.

ಬದಿಯಲ್ಲಿ ಅಸ್ಫುಟವಾದ ಆರ್ತನಾದ ಕೇಳಿಸಿತು. ಒಂದು ಬಂಡೆಗೆ ಆಸರ ಹಿಡಿದು ಇಬ್ಬರು ಯಾತ್ರಿಕರು ಕುಳಿತಿದ್ದರು. ಅವರಲ್ಲೊಬ್ಬನು ತನ್ನ ತಂಬಿಗೆಯನ್ನು ತೋರಿಸಿ, ನೀರು ಇದೆಯೆ ಎಂದು ಕೇಳಿದ. ಸ್ವಲ್ಪ ಇತ್ತು. ಅದನ್ನು ಇನ್ನೊಬ್ಬನಿಗೆ ಆತ ಕುಡಿಸಿದ. ನನಗಿಂತಲೂ ಎಷ್ಟೋ ಪಟ್ಟು ಸುಸ್ತಾಗಿದ್ದ ಆ ಪ್ರವಾಸಿ. ಅದೂ ಒಂದು ಸಮಾಧಾನದ ಸಂಗತಿ!

ನನ್ನ ಹಿಂದಿನಿಂದ ಒಬ್ಬ ಬಂಗಾಲೀ ಗೃಹಸ್ಥನೂ ಇಬ್ಬರು ಹೆಂಗಸರೂ ಬರುತ್ತಿದ್ದರು. ಪರಸ್ಪರ ಪರಿಚಯವಾಯಿತು.

ಎತ್ತರನಾದ, ದಪ್ಪ ದೇಹವುಳ್ಳ ಆ ಗೃಹಸ್ಥನ ಹೆಸರು ಅಘೋರಬಾಬು. ಇನ್ನೊಬ್ಬಾಕೆ ಅವನ ಅತ್ತೆ. ಆ ಹೆಣ್ಣುಮಗಳು ಅವನ ಹೆಂಡತಿ. ವಯಸ್ಸಿನಲ್ಲಿ ನನಗಿಂತ ಒಂದೆರಡು ವರ್ಷಕ್ಕೆ ಹಿರಿಯಳಿರಬಹುದು. ಯಾತ್ರೆಯಲ್ಲಿ ಕಂಡ ಸ್ತ್ರೀಯರಲ್ಲಿ ಅವಳೇ ಚಿಕ್ಕವಳೆನ್ನಬಹುದು. ಅವಳ ಮೋರೆ ಕಂದಿತ್ತು. ಆದರೂ ಬೂದಿ ಮುಚ್ಚಿದ ಕೆಂಡದಂತೆ ಅವಳ ಸೌಂದರ್ಯವು ನೋಡುವವರ ದೃಷ್ಟಿಯನ್ನು ಆಕರ್ಷಿಸುತ್ತಿತ್ತು.

ನನ್ನ ಕಾಲಿನ ನೋವಿನ ವಿಷಯವನ್ನು ಕೇಳಿ ಅಘೋರಬಾಬುವಿನ ಅತ್ತೆ "ಅಂತೂ ರಾಧಾರಾಣಿಯ ಜೊತೆಗೆ ನರಳುವವರು ಇನ್ನೊಬ್ಬರು ಸಿಕ್ಕಿದಂತಾಯಿತು" ಎಂದು ನುಡಿದಳು.

ಮಾತನಾಡುತ್ತ ರಾಯಪುರ ಧರ್ಮಶಾಲೆಗೆ ಬಂದಿದ್ದೆವು. ಎಲ್ಲರೂ ದಣಿದಿದ್ದೆವು. ಆದರೆ ಹೊಟ್ಟೆಯೊಂದು ಕೇಳಬೇಕಲ್ಲ. ನಮ್ಮ ನಮ್ಮ ಅಡಿಗೆಯ ತಯಾರಿ ನಡೆಯಿತು. ಬ್ರಹ್ಮಚಾರಿಯ ಪಾಲಿನ ಅಡಿಗೆಯೂ ನನ್ನದೇ. ಬ್ರಹ್ಮಚಾರಿ ಎಲ್ಲಿಂದಲೊ ಮಸಾಲೆಯನ್ನು ಕೂಡಿಸಿ ತಂದು ಕಲ್ಲಿನ ಮೇಲೆ ಅರೆಯುತ್ತಿದ್ದ. ತುಸು ಅಂತರದಲ್ಲಿ ಅಘೋರಬಾಬು ಚಾಕು ತೆಗೆದುಕೊಂಡು ಬಟಾಟೆಯನ್ನು ಹೆಚ್ಚುತ್ತಿದ್ದರು.

ರಾಧಾರಾಣಿ ತಾಯಿಗೆ ನೆರವಾಗುತ್ತ ದಾರಿಯ ಕಷ್ಟದ ವಿಚಾರವಾಗಿ ಮೆಲ್ಲಗೆ ಮಾತನಾಡುತ್ತಿದ್ದಳು. ಅವಳ ತಾಯಿ ಅದಕ್ಕೆ ದನಿಗೂಡಿಸುವಳು. ಅದರಿಂದ ಅಘೋರಬಾಬು ಸಿಡಿಮಿಡಿಗೊಂಡು ಹೇಳಿದರು: "ಹಾಗಾದರೆ ಯಾಕೆ ಬಂದೆ? ಮನೆಯಲ್ಲಿಯೆ ಕುಳಿತು ಪೂಜೆ ಮಾಡಿದ್ದರೆ ಪುಣ್ಯ ಬರುತ್ತಿದ್ದಿಲ್ಲವೆ?"

"ಇಲ್ಲಿ ಇಂಥ ರಸ್ತೆಯಿದೆಯೆಂದು ಯಾರಿಗೆ ಗೊತ್ತು?" ಎಂದಳಾಕೆ.

"ಬಂದ ಮೇಲೆ ಏನು ಮಾಡುವುದು? ಸುಮ್ಮನಾಗು. ಇಲ್ಲದ್ದು ಬಡಬಡಿಸಬೇಡ."

ತುಸು ಹೊತ್ತು ತಡೆದು, ಆಕೆ ತಲೆಯೆತ್ತಿ ನನ್ನನ್ನು ಕೇಳಿದಳು: "ಕಾಲಿಗೆ ಔಷಧವೇನಾದರೂ ಸಿಕ್ಕಿತೆ?"

"ಶ್ರೀನಗರದಲ್ಲಿ ಆಸ್ಪತ್ರೆಯಿದೆಯಂತೆ. ನಾಳೆ ಸಂಜೆಗೆ ನಾವು ಅಲ್ಲಿಗೆ ಹೋಗಬಹುದು."

ಅಘೋರಬಾಬುವಿನೊಡನೆ ಅನ್ಯ ಮಾತುಕತೆ ನಡೆಯಿತು. ಆತ ಕಲಕತ್ತೆಯಲ್ಲಿ ಅಂಗಡಿ ಹಾಕಿಕೊಂಡು ಇದ್ದ. ಈಚೆಗೆ ವ್ಯಾಪಾರ ಮಂದವಾಗತೊಡಗಿತ್ತು. ಮಕ್ಕಳೂ ಇರಲಿಲ್ಲ. ಹೆಂಡತಿಗೆ ಸಣ್ಣ ಪ್ರಮಾಣದ ಕಾಯಿಲೆ. ಅತ್ತೆಯ ನೆಪದಿಂದ ತಾವೂ ತೀರ್ಥಯಾತ್ರೆಗೆ ಹೊರಟಿದ್ದರು.

ಆ ಸಮಯದಲ್ಲಿ ಅವರ ಹೆಂಡತಿ ಏನನ್ನೋ ಕೇಳಿದಳು. ಅದಕ್ಕೆ ಅಘೋರಬಾಬು

"ನಾನೇನು ಹೇಳಲಿ? ನಿನಗೆ ಸಂಬಂಧಿಸಿದ್ದು, ಕೊಡಲ್ಲ" ಎಂದರು. ಆಕೆ ಎದ್ದು ನನ್ನ ಕಡೆ ಬಂದು ನಿಂತಳು. ನಾನು ಮೋರೆಯೆತ್ತುವುದಕ್ಕೆ ಮೊದಲೇ, ಆ ಸ್ನೇಹಮಯಿಯಾದ ಹೆಂಗಸು, ಸಂಭ್ರಮದಿಂದ, ತನ್ನ ಕೋಮಲ ಸ್ವರದಲ್ಲಿ ಅಂದಳು: "ದಾರಿಯಲ್ಲಿ ಒಂದು ಮಾವಿನಮರವನ್ನು ಕಂಡು ಒಂದು ಮಾವಿನಕಾಯನ್ನು ಹರಿದು ತಂದಿದ್ದೆ. ಅದರಿಂದ ಚಟ್ನಿ ಮಾಡಿದ್ದೇನೆ. ನಿಮಗೆ ಒಂದಿಷ್ಟು ಕೊಡಲೆ?"

ಈ ಭೂಮಿಯ ಮೇಲೆ ಸ್ನೇಹವಿರುವದೆಂಬುದನ್ನೇ ಮರೆತಿದ್ದೆ. ಯಾಚನೆ ಮಾಡದ ಕಡೆಯಿಂದ ಆತ್ಮೀಯ ಸಹಾಯ ಬಂದೊದಗುವುದು. ಆದರೂ ನಯವಾಗಿ, "ತೀರ್ಥಯಾತ್ರೆ ಮಾಡುವಾಗ ಮಾರ್ಗದಲ್ಲಿ ಯಾರಿಂದಲೂ ದಾನವನ್ನೂ ಬಹುಮಾನವನ್ನೂ ಸ್ವೀಕರಿಸಬಾರದೆಂದು ಶಾಸ್ತ್ರ ಹೇಳುತ್ತದಲ್ಲ" ಎಂದೆ.

"ಓಹೊ! ಹಾಗಾದರೆ ಇರಲಿ. ಇದು ನನಗೆ ಗೊತ್ತಿರಲಿಲ್ಲ" ಎನ್ನುತ್ತ ಅವಳು ತಲೆತಗ್ಗಿಸಿಕೊಂಡು ನಡೆದುಬಿಟ್ಟಳು. ಅದೇಕೆ ನಾನು ಹಾಗೆ ಹೇಳಿದೆನೊ ಎಂದು ಕೆಡುಕೆನಿಸಿತು.

ಮರುದಿನ ಸಂಜೆಯ ಹೊತ್ತಿಗೆ ನಾವು ಶ್ರೀನಗರವನ್ನು ತಲುಪಲೇಬೇಕಿತ್ತು. ಹೆಚ್ಚು ನಡೆಯಬೇಕೆಂದರೆ ನಮ್ಮ ಕಾಲೊಂದು ಕೇಳಬೇಕಲ್ಲ. ಅನಿವಾರ್ಯವಾಗಿ ನಾನು, ಅಘೋರಬಾಬುವಿನ ಪರಿವಾರದ ಜೊತೆಗೇ ಸಾಗಬೇಕಾದ ಪ್ರಮೇಯ ಬಂತು.

"ನಿಮ್ಮ ಶ್ರೀನಗರ ಇನ್ನೂ ಎಷ್ಟು ದೂರ, ಬಾಬಾ. ಈ ಹುಡುಗಿ ಇನ್ನು ನಡೆಯಲಾರಳು."

ಕಾಲಿನ ನೋವಿನಿಂದ ಆಕೆ ನಿಜವಾಗಿಯೂ ಪ್ರಜ್ಞೆ ಮರೆತಿದ್ದಳು. ನನ್ನ ತಂಬಿಗೆಯಲ್ಲಿನ ನೀರನ್ನು ಕುಡಿಯಲು ಕೊಟ್ಟೆ. ಕೆಲ ಗಳಿಗೆಯ ವಿಶ್ರಾಂತಿಯ ನಂತರ ಸುಧಾರಿಸಿಕೊಂಡು ಆಕೆ ಕಣ್ಣು ತೆರೆದು ನೋಡಿದಳು. ಕೃತಜ್ಞತೆಯನ್ನು ಪ್ರಕಟಿಸುವ ಅಗತ್ಯವಿರಲಿಲ್ಲ.

"ನೀವು ಗಂಡಸರು. ನೋವನ್ನು ಸಹಿಸಿಕೊಂಡು ಕಾಲನ್ನೆಳೆಯುತ್ತ ನಡೆಯಬಲ್ಲಿರಿ."

ಸುಖ, ಐಶ್ವರ್ಯಗಳಿಂದ ಬೆಳೆದ ದೇಹ. ಇವಳಿಗೆ ತೀರ್ಥಯಾತ್ರೆಯ ಹುಚ್ಚು ಏಕೆ ಬಂದಿತೋ. ವಯಸ್ಸಾದರೂ ಎಷ್ಟು, ಮೂವತ್ತರ ಒಳಹೊರ ಗಿರಬೇಕು. ಅವಳ ತಾಯಿ ಅದನ್ನೇ ಹೇಳುತ್ತಿದ್ದಳು.

ಕೊನೆಗೆ ಶ್ರೀನಗರ ಕಾಣಹತ್ತಿತು. ಊರ ಬಳಿಯ ಕೂಡುದಾರಿಯಲ್ಲಿ ಅಘೋರಬಾಬು, ಬ್ರಹ್ಮಚಾರಿ ನಮ್ಮ ಪ್ರತೀಕ್ಷೆಮಾಡುತ್ತನಿಂತಿದ್ದರು. ಊರೊಳಗೆ ಬಂದಕೂಡಲೇ ಅಲ್ಲಿಯ ಆಸ್ಪತ್ರೆಯನ್ನು ಹುಡುಕಿಕೊಂಡು ಹೋದೆವು. ಅಲ್ಲಿದ್ದ ರೋಗಿಗಳೆಲ್ಲರೂ ಯಾತ್ರಿಕರೇ. ಕಾಲುನೋವಿಗೆ ಒಂದು ಲೇಪ, ಮೂಗಿನ ತೊಂದರೆಗೆ ಸ್ವಲ್ಪ ವೆಸಲೀನ್, ಬ್ರಹ್ಮಚಾರಿಯ ಹಲ್ಲುನೋವಿಗೆಂದು ಸ್ವಲ್ಪ ಆಯಡಿನ್ ಸಂಪಾದಿಸಿದೆವು.

ಶ್ರೀನಗರ ಒಂದು ಸಣ್ಣ ಸುಸಜ್ಜಿತ ನಗರ. ಪೇಟೆಯಲ್ಲಿ ತಿರುಗಾಡಿದಾಗ ಮಿಠಾಯಿ, ಆಹಾರದ ಜೀನಸುಗಳ ಎರಡು ದೊಡ್ಡ ಅಂಗಡಿಗಳಿದ್ದವು. ನಮ್ಮ ನಿಸ್ಸತ್ವದ, ನೀರಸ ಅಡಿಗೆಗಿಂತ ಇವನ್ನೆ ಕೊಂಡು ತಂದು ತಿಂದರಾಯಿತು ಎಂದು ಯೋಚಿಸಿದೆವು. ಒಂದು ಅಂಗಡಿಯಲ್ಲಿ ಚಹಾ ಸಿಕ್ಕುವುದೆಂದು ತಿಳಿದಾಗ, ಒಂದು ಕೋಟಿಯನ್ನೇ ಗೆದ್ದಷ್ಟು ಸಂತೋಷವಾಯಿತು. ಕಾಲಿನ ನೋವು ಎತ್ತೋ ಹೋಯಿತು.

ಎಂಥ ಸುಖಕರವಾದ ರಾತ್ರಿಯದು! ಒಳ್ಳೆಯ ತಿನಿಸನ್ನು ಸಮೀಪದಲ್ಲಿ ಕಂಡಿರದೇ ಇದ್ದ ನಾಲಿಗೆ ಹಾಲು, ಮೊಸರು, ಜಿಲೇಬಿ, ತುಪ್ಪದಲ್ಲಿ ಕರಿದ ಪೂರಿಗಳು, ಆಲೂಗಡ್ಡೆಯ ಪಲ್ಯೆ ಇವುಗಳ ರುಚಿಯನ್ನು ಹೊಟ್ಟೆತುಂಬ ಸವಿಯಿತು.

ಬ್ರಹ್ಮಚಾರಿಯು ತಿನ್ನುವುದರಲ್ಲಿ ಮೈಮರೆಯುತ್ತಿದ್ದ. "ದಾದಾ, ಬಾಯಿ ತೆರೆದೇ ಇದ್ದೇನೆ. ನಿಮಗೆ ಎಷ್ಟು ಬೇಕೊ, ಅಷ್ಟು ಲಗೇಜನ್ನು ಒಳಗೆ ತುರುಕಿಬಿಡಿರಿ."

"ಬ್ರಹ್ಮಚಾರೀ, ಕಾಲರಾ ಬಂದರೆ?"

ಆ ತಿನ್ನಾಸನು ಕಣ್ಣು ಮುಚ್ಚಿಕೊಂಡು ತಿನ್ನುತ್ತ, ಆದರೂ ಉಚ್ಚ ಕಂಠದಲ್ಲಿ ಹೇಳಿದ: "ಏನು ದಾದಾ, ವಿಷ್ಣುರಥದಲ್ಲಿ ಕುಳಿತುಕೊಳ್ಳುವುದಕ್ಕೆ ನಾನು ಹೆದರುವೆನೆಂದು ತಿಳಿದಿರಾ? ಓಂ ನಮೋ ನಾರಾಯಣಾಯ!"

ಆದರೆ ನಮ್ಮ ಕಾಲು ನೋವೇನು ಕಡಿಮೆಯಾಗಲಿಲ್ಲ. ನಮ್ಮ ಯಾತ್ರೆಯು ಯಥಾಪ್ರಕಾರ ಮುಂದರಿಯಿತು. ದೇಹದ ನೋವನ್ನು ಸಹಿಸಿಕೊಂಡು ನಡೆಯುವುದು ರೂಢಿಯಾಗಿತ್ತು. ನೆಟ್ಟಗೆನಿಂತು ಸುಖವಾಗಿ ನಡೆಯುವುದೆನ್ನುವುದು ಮರೆತೇ ಹೋದಂತಾಗಿತ್ತು. ಎಲ್ಲ ದುಃಖಗಳೂ ಮನುಷ್ಯನಿಗೆ ಈ ಬಗೆಯಾಗಿ ಸಹನ-ಶೀಲತೆಯನ್ನು ಕಲಿಸುತ್ತವೆ. ದುರ್ಗಮವಾದುದನ್ನು ಸರಲವಾಗಿರಿಸಲು ತಕ್ಕುದಾದ ಕಾಠಿಣ್ಯವನ್ನು ತಂದುಕೊಡುತ್ತವೆ.

ನಾವು ತೇಕುತ್ತ, ನಡೆದು ರುದ್ರಪ್ರಯಾಗಕ್ಕೆ ಬಂದಾಗ ಮಧ್ಯಾಹ್ನವಾಗಿತ್ತು. ವಿಶ್ರಾಂತಿಗಾಗಿ ಒಂದೇಸಮನೆ ಪರಿತಪಿಸುತ್ತಿದ್ದೆವು. ಒಂದು ಧರ್ಮಶಾಲೆಯ ಮೇಲುಕಟ್ಟೆಯ ಮೇಲೆ ಒರಗಿಕೊಂಡೆವು. ನಾನು ಕಣ್ಣುಗಳನ್ನು ಮುಚ್ಚಿ ಮಲಗಿದೆ.

ಎಂಥ ನಿರ್ಲಜ್ಜ ಶರೀರವಿದು! ಸ್ನಿಗ್ಧ ಮಧುರ ಗಾಳಿಯ ಸ್ಪರ್ಶದಿಂದ ನಾನು ಸಾವಕಾಶವಾಗಿ ತಿರುಗಿ ಸಜೀವ ಪ್ರಾಣಿಯಾದೆ. ಧರ್ಮಶಾಲೆಯ ಕೆಳಗಡೆಗೇ ಅಲಕನಂದೆಯು ಕಲ್ಲೋಲಗೊಂಡು ಹರಿಯುತ್ತಿರುವ ಸಪ್ಪಳವನ್ನು ಕಿವಿಗಳು ಕೇಳಿದಾಗ, ನನ್ನ ಮಾನಸಿಕ ಚೇತನವು ಎದ್ದು ಕುಳಿತಿತು. ಕಣ್ಣನ್ನು ತೆರೆಯಬೇಕಾಯಿತು. ಸೂರ್ಯಪ್ರಕಾಶದಲ್ಲಿ ಪ್ರಕೃತಿದೇವಿ ಅದೆಷ್ಟು ಶೋಭಾಯಮಾನವಾಗಿ ಕಾಣುತ್ತಿದ್ದಳು! ಇಂಥ ದೃಶ್ಯ ಇನ್ನೆಲ್ಲಾದರೂ ಸಿಕ್ಕೀತೆ? ಇದು ರೂಪವಲ್ಲ, ರೂಪಾತೀತ. ಬರಿಯ ಸೌಂದರ್ಯವಲ್ಲ, ಲೋಕೋತ್ತರ ಸೌಂದರ್ಯ. ಇದು ನಿಜವಾದ ದೇವಲೋಕ ಸ್ವರ್ಗದ ಸೀಮೆಯಿದು!

ಧರ್ಮಶಾಲೆಯ ಒಳಗೆ ಹೋದಾಗ ಮೃತ್ಯುಲೋಕದ ಕಲ್ಪನೆ ಮತ್ತೆ ಬಂದಿತು. ಒಬ್ಬರಿಗೆ ಜ್ವರ, ಇನ್ನೊಬ್ಬರಿಗೆ ಹೊಟ್ಟೆನೋವು; ಒಬ್ಬಿಬ್ಬರು ನಿರ್ಜೀವರಂತೆ ನೆಲದ ಮೇಲೆ ಬಿದ್ದುಕೊಂಡಿದ್ದಾರೆ. ಮೂಗಿನ ಮೇಲೆ ನೊಣಗಳು ಮುತ್ತಿ

ದ್ದರೂ ಅವನ್ನು ಹೊಡೆದೋಡಿಸಲಾಗದಂತೆ ಇನ್ನೊಬ್ಬ ಸುಸ್ತಾಗಿ ಒರಗಿದ್ದಾನೆ!

*

ಇದುವರೆಗೆ ನಾವು ಸುಮಾರು ಒಂದು ನೂರು ಮೈಲು ನಡೆದು ಬಂದಂತಾಗಿತ್ತು. ರುದ್ರಪ್ರಯಾಗದಿಂದ ಮುಂದೆ ದಾರಿ ಕವಲೊಡೆಯುತ್ತದೆ. ಒಂದು ಅಲಕನಂದೆಯ ದಂಡೆಗುಂಟ ಕರ್ಣಪ್ರಯಾಗದ ಮಾರ್ಗವಾಗಿ ಬದರಿಕಾಶ್ರಮಕ್ಕೆ ಹೋಗುತ್ತದೆ. ಇನ್ನೊಂದು ಮಂದಾಕಿನಿಯ ದಂಡೆಗುಂಟ ಕೇದಾರನಾಥದ ಕಡೆಗೆ ಹೋಗಿದೆ. ಇನ್ನೂ ೮೦ ಮೈಲು ಇರುವ ಕೇದಾರನಾಥದ ದಾರಿ ಹೆಚ್ಚು ಭಯಾನಕವಾದುದು. ಧೈರ್ಯಸಾಲದವರು ಇಲ್ಲಿಂದಲೇ ಬದರೀನಾಥಕ್ಕೆ ಹೋಗುವರು. ರುದ್ರಪ್ರಯಾಗದಲ್ಲಿಯೆ ಯಾತ್ರಿಕರ ಪುಣ್ಯಕಾಮನೆಯ ಅಗ್ನಿಪರೀಕ್ಷೆಯಾಗುವದು. ನಾನೂ ಕೇದಾರನಾಥದ ವಿಚಾರವನ್ನು ಬಿಟ್ಟುಬಿಟ್ಟಿದ್ದೆ. ಆದರೆ ಒಂದು ಘಟನೆಯು ನನ್ನನ್ನು ಹಾಗೆ ಮಾಡಗೊಡಲಿಲ್ಲ. ಮೂರನೇ ಯಾಮದ ಹೊತ್ತಿಗೆ ಒಬ್ಬ ಕೆಳಜಾತಿಯ ಬಂಗಾಲೀ ಹೆಂಗಸು ನನ್ನನ್ನು ಹುಡುಕುತ್ತ, ಅಳುತ್ತ ಬಂದಳು.

"ಬಾಬಾ! ರಕ್ಷಿಸಿರಿ! ನನ್ನ ಗುರುಮಾತೆಯ ಗತಿ ನೋಡಲಾಸಲ್ಲ! ನಿಮ್ಮ ವಿಷಯವಾಗಿ ದಾರಿಯಲ್ಲಿ ಬಹಳ ಕೇಳಿದ್ದೇನೆ" ಎಂದಳು.

ಕಲಕತ್ತೆಯ ಒಂದು ಆಶ್ರಮದ ಗುರುಮಾತೆ ಕೆಲ ಶಿಷ್ಯೆಯರೊಡನೆ ಯಾತ್ರೆಗೆಂದು ಹೊರಟಿದ್ದಳು. ದಾರಿಯಲ್ಲಿ ಹೋಗುವಾಗ ಒಮ್ಮೆಲೆ ಕಾಲು ಜಾರಿದ್ದರಿಂದ, ಪರ್ವತದ ಕೆಳಗೆ ಬಿದ್ದಳು. ಉರುಳುತ್ತ ಉರುಳುತ್ತ ಒಂದು ಮರದ ಹಿಂಡಿಗೆ ಸಿಕ್ಕು ತೂಗಾಡತೊಡಗಿದ್ದಳು. ಉಳಿದವರು ಇಳಿದು ಅಲ್ಲಿಗೆ ಹೋಗಬೇಕೆಂದರೆ ದುಸ್ಸಾಧ್ಯವೇ ಇತ್ತು. ಗುರುಮಾತೆಯ ಶರೀರವೆಲ್ಲ ರಕ್ತಮಯ. ಆ ದೃಶ್ಯವನ್ನು ನೋಡಲಾಸಲ್ಲ! ಇಡಿಯ ಜೀವನವನ್ನು ಧರ್ಮಮಾರ್ಗದಲ್ಲಿ ಕಳೆದು ಶಿಷ್ಯೆಯರಿಗೆ ಉಪದೇಶ ನೀಡುತ್ತಿದ್ದು ಸರ್ವಶ್ರೇಷ್ಠವಾದ ಈ ಸಾಧನೆಯಲ್ಲಿ

ತೊಡಗಿದ್ದಾಗ ಆ ತಾಯಿಗೆ ಎಂಥ ಕಠಿಣ ಶಿಕ್ಷೆ!

ಜನರನ್ನು ಕೂಡ್ರಿಸಿ, ಒಂದು ಕಾಂಡಿಯ ಸಹಾಯದಿಂದ ಅವಳನ್ನು ಮೇಲಕ್ಕೆ ತರಲಾಯತು. ಔಷಧೋಪಚಾರಗಳಿಗೆ ಹಣವಿರಲಿಲ್ಲ. ಆ ಕಾರಣ ಪಟ್ಟಿಯನ್ನೆತ್ತಲು ಓಡಾಡಿದಾಗ ನಮಗೆ ಕೂಡಿದುದು ಕೇವಲ ೧೨ ರೂಪಾಯಿಗಳಷ್ಟು. ಅಘೋರಬಾಬುವಿನ ಹೆಂಡತಿ ನನ್ನ ಓಡಾಟದ ಶ್ರಮವನ್ನು ಕಂಡು, "ಇಂದು ನಿಮ್ಮ ಊಟದ ವ್ಯವಸ್ಥೆಯನ್ನು ಇಲ್ಲಿಯೇ ಮಾಡಿದ್ದೇನೆ. ಪ್ರತಿಸಲದಂತೆ ನೀವು ಒಲ್ಲೆನೆಂದರೆ ಕೇಳುವವಳಲ್ಲ" ಎಂದಳು.

ಊಟದ ಹೊತ್ತಿಗೆ ಬ್ರಹ್ಮಚಾರಿ ಕಾಣಿಸಲಿಲ್ಲ. ಊಟ ಮುಗಿದು ತುಸು ಹೊತ್ತಿನ ಮೇಲೆ ಬ್ರಹ್ಮಚಾರಿ ಪ್ರತ್ಯಕ್ಷನಾದ. ನನಗೆ ಮಾತನಾಡಲು ಬಿಡದೆ "ಬಾಬಾ, ಗಾಯನ ಕೇಳುತ್ತೀರಾ ?" ಎಂದ.

ಗಾಯನ! ಮೃತ್ಯುವಿನ ಬಾಯಿಯಲ್ಲಿ ಕುಳಿತು ಗಾನವನ್ನು ಹೇಳುವವರು ಯಾರು? ಬ್ರಹ್ಮಚಾರಿಯು ನನ್ನನ್ನು ಕರೆದುಕೊಂಡು ಹೊರಟನು. ರಾತ್ರಿ ಹತ್ತು ಗಂಟೆಯ ಸಮಯ. ನದಿಯ ದಂಡೆಯ ಮೇಲಿನ ಒಂದು ಆಶ್ರಮದ ಒಳಕ್ಕೆ ಹೋದೆವು. ಮಿಣಿ ಮಿಣಿ ದೀಪದ ಬೆಳಕಿನಲ್ಲಿ ಓರ್ವ ಪುಷ್ಟ ದೇಹದ, ವಯಸ್ಸಾದ ಸಂನ್ಯಾಸಿನಿಯನ್ನು ನೋಡಿದೆವು. ಹತ್ತಿರದಲ್ಲಿ ಒರ್ವ ಮುದುಕನು ಏಕತಾರಿಯನ್ನು ಹಿಡಿದುಕೊಂಡು ಕುಳಿತಿದ್ದನು. ನನ್ನನ್ನು ಕಂಡು ನಕ್ಕು ಸ್ನೇಹದಿಂದ ಅವಳು, "ಬಾ ಮಗು" ಎಂದಳು. ಮಾಯಿಯು, ಆ ಮಾತು ಈ ಮಾತು ಆಡುತ್ತ ಕೈಲಾಸ ಪರ್ವತಕ್ಕೆ ಹೋಗುವ ವಿಚಾರ ವಿವರಿಸಿದಳು. ಅವಳ ದನಿಯನ್ನು ಭಕ್ತಿಯಿಂದ ಆಲಿಸಿದೆವು. ಅವಳ ವಿವರಣೆಯು ಚಮತ್ಕಾರಯುಕ್ತವಾಗಿದ್ದಿತು. ಮಾತನಾಡುತ್ತ ಮಾಯಿಯು "ಏ ರಗ್ಗೀ, ಸೋನೀ, ಚಿಲುಮೆಯನ್ನು ತಯಾರಿಸಿದೆಯಾ ?" ಎಂದು ಕೂಗಿದಳು

ಆಗ ಇಬ್ಬರು ಯುವತಿ ಸಂನ್ಯಾಸಿನಿಯರು ಬಂದರು. ಒಬ್ಬಳು ಮಾಯಿಯ ಹತ್ತಿರ ಕುಳಿತಳು. ಇನ್ನೊಬ್ಬಳು ಹಿತ್ತಾಳೆಯ ಚಿಲುಮೆಯನ್ನು ಹಿಡಿದುಕೊಂಡು ಬಂದು ಮಾಯಿಗೆ ಕೊಟ್ಟಳು. ಒಂದೇ ತೊಟ್ಟಿಗೆ ಅರಳಿದ ಎರಡು ಪುಷ್ಪಗಳಂತಿದ್ದರು ಆ ಇಬ್ಬರು ತರುಣಿಯರು. ಜವ್ವನದ ಭಾರದಿಂದ ಬಳುಕುತ್ತಿದ್ದ ಅಂಗ ಸೌಷ್ಠವ. ಆದರೆ ಕಾವಿ ಬಣ್ಣದ ಬಟ್ಟೆಗಳನು ಧರಿಸಿದ್ದರು. ಮುಖದ ಮೇಲೆ ಶಾಂತಿ, ಕಾರುಣ್ಯಗಳ ಕಳೆ. ಕಣ್ಣುಗಳಲ್ಲಿ ನಿಸ್ಪೃಹ ದೃಷ್ಟಿ. ಚಿಲುಮೆಯನ್ನು ನಮ್ಮ ಬ್ರಹ್ಮಚಾರಿಯೂ ಎಳೆದ. ಅಲ್ಲಿಂದ ಸೋನಿ ರಗ್ಗಿಯರ ಕೈಗೂ ಬಂತು.

ವೃದ್ಧನು ಏಕತಾರಿಯ ಸ್ವರದೊಂದಿಗೆ ಹಾಡಲು ತೊಡಗಿದನು. ಭಕ್ತಿಭಾವದಿಂದ ಹಾಡಿದ ರೀತಿ ಗಮನೀಯವಾಗಿತ್ತು. ನಾನು ಮುಗ್ಧನಾಗಿ ಹೋಗಿದ್ದೆ. ತಲ್ಲೀನನಾಗಿ ಎಲ್ಲವನ್ನೂ ಮರೆತಿದ್ದೆ. ಹಾಡು ಮುಗಿದ ಮೇಲೆ ಮಾಯಿಯ ಪಾದಮುಟ್ಟಿ ನಮಸ್ಕರಿಸಿ ಹೊರ ಬಂದೆವು.

ಆ ಆಶ್ರಮ ಅಲ್ಲಿಯ ಜನ ಇಂದಿಗೂ ನನಗೆ ಒಂದು ಸಮಸ್ಯೆಯಾಗಿದ್ದಾರೆ. ಇವರು ಯಾರು, ಎಲ್ಲಿಂದ ಬಂದವರು, ಮಾಯಿಗೂ ಆ ಯುವತಿಯರಿಗೂ ಏನು ಸಂಬಂಧ, ಈ ಗುಡಿಸಲಿನಲ್ಲಿಯೆ ಅವರ ಜೀವನ, ಚರಿತಾರ್ಥ ಸಾಗಬೇಕೆ ? ಈ ಏಕಾಂತ ಜೀವನವೇ ಅವರ ಅಂತಿಮ ಗುರಿಯೆ? ನನಗೆ ಆ ಮೂವರೂ ಮಹಿಳೆಯರ ಮೇಲೆ ಕೋಪ ಬಂತು. ಬದುಕಿನಲ್ಲಿ ಪ್ರಲೋಭನದ ಪ್ರತಿಮೂರ್ತಿಯಾಗಿರುವ ಸ್ತ್ರೀ ಜೀವನದುದ್ದಕ್ಕೂ ಕಠಿನವಾದ ವೈರಾಗ್ಯವನ್ನು ತಾಳಿ ಬದುಕಬೇಕೆ ? ಇದು ಪ್ರಕೃತಿ ದೇವಿಯ ಅವಮಾನ ! ರೂಪ ಸೌಂದರ್ಯಗಳ ಕಗ್ಗೊಲೆ !

ಮರುದಿನ ತಿರುಗಿ ಪಾದಯಾತ್ರೆ. ಅಘೋರಬಾಬುವಿನ ಪರಿವಾರದೊಂದಿಗೆ ನಮ್ಮ ಬಂಧುತ್ವ ಹೆಚ್ಚಿದಾಗ ಒಂದು ವಿಪತ್ತು ಸಂಭವಿಸಿತು. ಬ್ರಹ್ಮಚಾರಿಗೂ ಅಘೋರಬಾಬುವಿಗೂ ಅದೇಕೊ ಜಗಳ ಹತ್ತಿತು ಆ ಭರದಲ್ಲಿ ಅಘೋರಬಾಬು "ಊಟದ ಸಮಯಕ್ಕೆ ಮಾತ್ರ ಕಾಣಿಸಿಕೊಳ್ಳುವಿರಿ. ಉಳಿದದ್ದಕ್ಕೆ ಉಪ-

ಯೋಗವಿಲ್ಲ" ಎಂದುಬಿಟ್ಟಿದ್ದರು. ಆತ್ಮಾಭಿಮಾನದಿಂದ ಸಿಡಿದೆದ್ದ ಬ್ರಹ್ಮಚಾರಿ, "ನಿಮ್ಮ ಸಂಗಡ ನಾನು ಇರುವುದಿಲ್ಲ. ಹೋಗಿಬಿಡುತ್ತೇನೆ. ದಾದಾ, ನೀವು ಬೇಕಾದರೆ ಬನ್ನಿರಿ" ಎಂದವನೇ ಹೊರಟುನಿಂತನು. ನಾನು ಸಮಾಧಾನ ಹೇಳಿದ್ದು ಏನೂ ಪ್ರಯೋಜವಾಗಲಿಲ್ಲ. ನಾನು ಬ್ರಹ್ಮಚಾರಿಯ ಜೊತೆಯನ್ನು ಬಿಡಲಾಗದೆ, ಅನಿವಾರ್ಯವಾಗಿ ಅವನ ಸಂಗಡ ಹೊರಡಬೇಕಾಗಿ ಬಂತು. ತಾಯಿ ಮಗಳನ್ನು ಬೀಳ್ಕೊಡಲು ಅವರ ಹತ್ತಿರ ಬಂದೆ. ಅವರು ಎಲೆ ಬಡಿಸಿಕೊಂಡು ಸ್ವಸ್ಥ ಕುಳಿತಿದ್ದರು.

"ನೀವು ಹೋಗುವುದನ್ನು ಕಂಡು ಅಮ್ಮ ಕಣ್ಣೀರು ಹಾಕುತ್ತಿದ್ದಾಳೆ" ಎಂದು ನುಡಿಯುತ್ತ ರಾಧಾ ಮುಖವೆತ್ತಿದಳು. ನನಗೆ ಅವಳ ದೀನ ಮೊಗವನ್ನು ನೋಡುವ ಧೈರ್ಯ ಸಾಲಲಿಲ್ಲ.

ಅವಳಿಗೂ ಕಣ್ಣೀರು ತಡೆಯಲಾಗಲಿಲ್ಲ. ಕಂಠವು ರುದ್ಧವಾಗಿತ್ತು. "ನನಗೆ ಒಬ್ಬ ಕಿರಿಯ ತಮ್ಮನಿದ್ದ.... ಥೇಟ್ ನಿಮ್ಮ ಹಾಗೇ...ಅಮ್ಮಾ, ನಿನ್ನ ಮಗನ ಹತ್ತರ ಮಾತಾಡಮ್ಮಾ."

ತಾಯಿ ಅಸ್ಪಷ್ಟವಾಗಿ ಏನೇನೊ ಹೇಳಿದಳು. "ನಿಮ್ಮ ವಿಳಾಸವನ್ನು ಕೊಟ್ಟಿರಿ. ನಾನು ಊರಲ್ಲಿ ನಿಮಗೆ ಭೆಟ್ಟಿಯಾಗುವೆ" ಎಂದು ಹೇಳಿದೆ.

"ಬೇಡಪ್ಪ, ಬೇಡ. ನಾವು ಅಯೋಗ್ಯರು."

ನನಗೆ ಅರ್ಥವಾಗಲಿಲ್ಲ. ವಿಶೇಷ ಮಾತನಾಡಲು ನನಗೆ ಸಮಯವೂ ಇರಲಿಲ್ಲ. "ಒಳ್ಳೇದು, ವಿಳಾಸ ಕೊಡದಿದ್ದರೆ ಉಪಾಯವಿಲ್ಲ" ಎಂದು ನಮಸ್ಕರಿಸಲು ಬಾಗಿದೆ.

"ನಾನು ಹೇಳಲಾರೆ ಅಣ್ಣ. ನಿನ್ನೆದುರು ಸುಳ್ಳು ಹೇಳಲಾರೆ. ನಾನು ನಿನ್ನ ಅಕ್ಕನಾಗಿರಲು ಯೋಗ್ಯಳಲ್ಲ. ನಾನು ನರಕದ ಕೀಟ. ನಾನು... ವೇಶ್ಯೆ !"

"ಆಂ ! ಏನೆಂದಿರಿ ?" ಎಂದೆ. ನನ್ನ ಎರಡೂ ಕಿವಿಗಳಲ್ಲಿ ನಗಾರಿ ಬಾರಿಸಿದಂತಾಯಿತು. ಕೂಡಲೇ ಆ ಸ್ಥಳದಿಂದ ಕಾಲ್ತೆಗೆದೆ. ವೇಶ್ಯೆಯನ್ನು ಕಂಡರೆ ನಾನೇನು ಅಸಹ್ಯಪಟ್ಟುಕೊಂಡು ಬೆಚ್ಚಿ ಬೀಳುವವನಲ್ಲ. ಆದರೆ ಅಂಥ ಹೆಣ್ಣು ಮಗಳು ನರಕದಲ್ಲಿದ್ದಾಳೆ ಎಂಬ ಮಾತನ್ನು ನನ್ನ ದುರ್ಬಲ ಚಿತ್ತವು ಒಪ್ಪುತ್ತಿರಲಿಲ್ಲ. ಸೇವೆ, ಶುಶ್ರೂಷೆ, ಸ್ನೇಹ, ದಾಕ್ಷಿಣ್ಯಗಳಲ್ಲಿ ಆಕೆ ಯಾವ ಸ್ತ್ರೀಗೂ ಕಡಿಮೆಯಲ್ಲ. ಹೀಗಿದ್ದರೂ ಆಕೆ ಪತಿತೆಯಾದುದು ಹೇಗೆ ? ಅವಳಲ್ಲಿ ಛಲಸೆಯಿಲ್ಲ, ಮೋಹಜಾಲವಿಲ್ಲ, ವಿಷಯವಾಸನೆಯ ಅಂಶವು ಒಂದಿಷ್ಟಾದರೂ ಕಾಣಲಿಲ್ಲ. ಇದು ಹೇಗಾಯಿತು ? ಈ ಒಗಟಿನ ಅರ್ಥವೇನು ಎಂಬುದನ್ನು ತಿಳಿಯದೇ, ಬಿಸಿಲಿನ ಪರವೆಯಿಲ್ಲದೆ ಹೆಜ್ಜೆ ಹಾಕಿದೆ.

*

ಮೂರನೆಯ ಪ್ರಹರದ ಹೊತ್ತಿಗೆ ಸೆಕೆ ಕಡಿಮೆಯಾಯಿತು. ಇಳಿದುಕೊಳ್ಳಬೇಕೆಂದರೆ ಯಾವ ಧರ್ಮಶಾಲೆಯೂ ಕಾಣಲಿಲ್ಲ. ಸಂಗಡಿಗರಾರೂ ಸಿಗಲಿಲ್ಲ. ಧೂಳು, ಉಸುಕಿನ ಮಾರ್ಗದಲ್ಲಿಯೆ ಒಂದಿಷ್ಟು ಕುಳಿತುಕೊಂಡು ಮತ್ತೆ

ಮುಂದೆ ಹೊರಟೆ.

ಬ್ರಹ್ಮಚಾರಿ ಎಲ್ಲಿ ಹೋದನೊ ಪತ್ತೆ ಇಲ್ಲ. ಆಕಾಶದಲ್ಲಿಯ ಚಂದ್ರನನ್ನು ಮೇಘಗಳು ನುಂಗಿ ಹಾಕಿವೆ. ಇಷ್ಟು ಕತ್ತಲಿನಲ್ಲಿ ನಾನು ಯಾವ ದಿನವೂ ನಡೆದಿರಲಿಲ್ಲ. ದೆವ್ವನಂತಹ ಪರ್ವತಗಳು ಕೂಡಾ ಆ ಕತ್ತಲೆಯಲ್ಲಿ ಕಾಣಿಸುತ್ತಿರಲಿಲ್ಲ. ನನ್ನ ಹೆಜ್ಜೆಯ ಸಪ್ಪಳವೇ ನನಗೆ ಭಯವನ್ನುಂಟು ಮಾಡುತ್ತಿದ್ದಿತು. ಮುಂದೆ ಮಂದಾಕಿನಿ ಹಾಗು ಚಂದ್ರಾ ನದಿಗಳ ಸಂಗಮ. ಆ ಅಬ್ಬರ ! ಬದಿಯಲ್ಲಿ ಅಡವಿಯ ನಿಶ್ಶೂನ್ಯ ಮೌನ. ನನ್ನ ಗಂಟಲು ಒಣಗಿತು. ಕಣ್ಣುಗಳಲ್ಲಿ ಅಸಹಾಯತೆಯಿಂದಾಗಿ ನೀರು ಬಂದವು. ಹಿಂಸ್ರಜಂತುಗಳಿಂದ ತುಂಬಿದ ಅರಣ್ಯ, ಕೊರಕಲಿನಿಂದ ಅಬ್ಬರಿಸುವ ಆ ನದಿಗಳ ಮಧ್ಯದಲ್ಲಿ ಈ ರೀತಿ ಸಾವನ್ನೆದುರಿಸುವ ಬಯಕೆ ನನಗಿರಲಿಲ್ಲ. ಆ ವಿಪತ್ತಿನಲ್ಲಿ ಭಗವಂತನನ್ನು ಸ್ಮರಿಸಬೇಕೆನ್ನುವ ಕಲ್ಪನೆಯೂ ಬರಲಿಲ್ಲ. ನಾನು ಸಾವಿಗೆ ಇಷ್ಟು ಸಮೀಪವಾಗಿರುವೆನೆನ್ನುವ ಭಾವನೆ ಇದು ವರೆಗೆ ಬಂದಿರಲಿಲ್ಲ. ಮರಣ ಬಂದಾಗಲೆ ಜೀವನದ ಬಗ್ಗೆ ಆಸ್ಥೆ ಹೆಚ್ಚಾಗುತ್ತದೆ.

" ಯಾರದು ? "

ಒಮ್ಮೆಲೆ ಭಯಬಂದ ಬೆಚ್ಚಿಬಿದ್ದು ಥರಥರನೆ ಕಂಪಿಸತೊಡಗಿದೆ. ಹೃದಯವು ಧಕ್ ಧಕ್ ಎಂದು ಹಾರತೊಡಗಿತು.

" ನೀವು ಯಾರು ? " ಎಂದು ಅಂಜುತ್ತಲೆ, ತೊದಲುತ್ತ ದನಿಗೊಟ್ಟೆ.

" ನಾನು ಒಬ್ಬ ಜನಾನಾ."

ಹೆಂಗಸು! ಈ ಕತ್ತಲಲ್ಲಿ! ಅದೂ ನಿರ್ಭಯವಾಗಿ ಓಡಾಡುವಾಕೆ ! ದೆವ್ವ, ಭೂತವಾಗಿರಲಿಕ್ಕಿಲ್ಲವೆ ?

ಆಕೆ ಹತ್ತಿರ ಬಂದಾಗ ನೋಡಿದೆ. ವಯಸ್ಸು ಚಿಕ್ಕದು. ಗುಡ್ಡಗಾಡಿನವಳು. ಕುತ್ತಿಗೆಯಲ್ಲಿ ದೊಡ್ಡ ರುದ್ರಾಕ್ಷೆಗಳ ಮಾಲೆ. ಹರಡಿದ ಕೇಶರಾಶಿ. ಕಾವಿ ಬಟ್ಟೆಯನ್ನು ಧರಿಸಿದ್ದಳು. ಒಂದು ಕೈಯಲ್ಲಿ ಕಮಂಡಲು, ಎಡಗೈಯಲ್ಲಿ ಒಂದು ಕೊಂಬು. ಬರಿಗಾಲಿನಲ್ಲಿ ನಡೆದಾಡುತ್ತಿದ್ದಳು.

ಚಕಿತಳಾದ ಆ ಚಂಚಲೆ ಕೇಳಿದಳು.

" ಇಲ್ಲೇಕೆ ನಿಂತಿದ್ದೀರಿ? ಎಲ್ಲಿಗೆ ಹೋಗಬೇಕು ? "

" ಚಂದ್ರಪುರಿಗೆ ಹೋಗಬೇಕಾಗಿದೆ. ದಾರಿ ತಪ್ಪಿ ಹೋಯಿತು."

" ಒಳ್ಳೇದು ನನ್ನ ಸಂಗಡ ಬನ್ನಿ " ಎಂದು ಕರೆದುಕೊಂಡು ಹೋದಳು. ಯಾವುದೊ ಅಡ್ಡ ದಾರಿಯನ್ನು ಹಿಡಿದು ಹೊರಟಳು. ತನ್ನ ಮನೆಯ ಅಂಗಳದಷ್ಟು ಆ ದಾರಿಯು ಪರಿಚಿತವಿದ್ದಂತೆ, ಬಾಗುತ್ತ, ಬಳಕುತ್ತ, ಆಕೆ ಸರಸರನೆ ಸಾಗುತ್ತಿದ್ದಳು. ನಡುನಡುವೆ ನನಗಾಗಿ ತಡೆದು ನಿಲ್ಲುತ್ತಿದ್ದಳು. ಹತ್ತಿರವೇ ಒಂದು ಪ್ರವಾಹ ಹರಿಯುತ್ತಿತ್ತು. ನೀರಿನ ರಭಸಕ್ಕೆ ನಾನು ಅಳುಕಿದಾಗ ಆಕೆಯೇ ಕೈಹಿಡಿದು ನಡೆಸಿದಳು. ಅಲ್ಲಿಂದ ಚಂದ್ರಪುರಿಯ ಹಾದಿಯನ್ನು ತೋರಿಸಿ "ನಾನಿನ್ನು ಹೋಗಲೆ ?" ಎಂದು ಕೇಳಿಕೊಂಡಳು.

ಅವಳ ಉಪಕಾರವನ್ನು ಯಾವ ರೀತಿ ಸ್ಮರಿಸಬೇಕೆಂದು ತಿಳಿಯದೇ, ಹಠಾತ್ತಾಗಿ ಆವಿರ್ಭವಿಸಿದ ಕಪಾಲಕುಂಡಲೆಯನ್ನು ಕೇಳಿದೆ—

" ನಿಮ್ಮ ಮನೆಯಲ್ಲಿ ? "

" ಇಲ್ಲಿಂದ ಬಹಳ ದೂರ. ನೀವು ಇನ್ನು ಹೋಗಿರಿ," ಎಂದವಳೇ ನುಂಗುತ್ತಿರುವಂತೆ ಏರಿ ಬರುತ್ತಿರುವ ಚಂದ್ರಾ ನದಿಯ ಗುಂಟ ಭರಭರನೆ ಸಾಗಿದಳು. ನಾನು ನಿರ್ವಾಕ್ ಸ್ತಂಭಿತ ದೃಷ್ಟಿಯಿಂದ ಅವಳು ಕತ್ತಲೆಯನ್ನು ಭೇದಿಸುತ್ತ ಹೋದೆಡೆಗೇ ನೋಡುತ್ತ ನಿಂತೆ.

ಚಂದ್ರಪುರಿಯಲ್ಲಿ ಗೋಪಾಲದಾಸಾ ಮತ್ತು ಬ್ರಹ್ಮಚಾರಿ ಭೆಟ್ಟಿಯಾದರು. ಹಲವು ದಿನಗಳ ನಂತರ ಈ ಸಮಾಗಮ. ಊಟ ಮಾಡಿ ಕುಳಿತಿದ್ದು ಅವರಿಗೆ ದಾರಿಯಲ್ಲಿಯ ಘಟನೆಯನ್ನು ವಿವರಿಸಿದೆ. ಅದರಿಂದ ಒಂದು ಪ್ರಯೋಜನವೇ ಆಯಿತು. ನನ್ನ ಕತೆಯನ್ನು ಲಕ್ಷ್ಯಪೂರ್ವಕವಾಗಿ ಕೇಳುತ್ತಿದ್ದ ಮುದುಕಿಯರಲ್ಲಿ ಒಬ್ಬಳು, "ನೀವು ಯಾರು ? ಮನುಷ್ಯನ ಛದ್ಮ ವೇಷದಲ್ಲಿರುವ ನೀವು ಯಾರು ? ನಾವು ಪಾಪಿಗಳು ನೀವು

ಭಗವತೀ ತಾಯಿಯ ದರ್ಶನವನ್ನು ಮಾಡಿ ಬಂದಿದ್ದೀರಿ. ಆ ತಾಯಿ ಯಾವ ದಿಕ್ಕಿನಲ್ಲಿ ಹೋದಳು ?" ಎನ್ನುತ್ತ ಕೈಮುಗಿದಳು.

ಇನ್ನೊಬ್ಬ ಮುದುಕಿ, "ನಿಮ್ಮ ಯೋಗ್ಯತೆಯನ್ನು ತಿಳಿಯದೇ ಹೋದೆವು. ಕ್ಷಮಿಸಿರಿ. ನಿಮ್ಮಂಥ ಮಹಾಪುರುಷರು ನಮ್ಮ ತಪ್ಪುಗಳನ್ನು ಹೊಟ್ಟೆಯಲ್ಲಿ ಹಾಕಿಕೊಳ್ಳಬೇಕು. ನೀವು ಯಾರು ಎಂದು ಈಗೂ ತಿಳಿಯದು" ಎಂದಳು.

ನಗುವನ್ನು ತಡೆದುಕೊಳ್ಳುವುದು ನನಗೆ ದುಷ್ಕರವಾಗಿತ್ತು. ಕಣ್ಣು ಮುಚ್ಚಿಕೊಂಡು, ಕೈಗಳಿಂದ ಅಭಯ ಮುದ್ರೆಯನ್ನು ತೋರಿಸಿ, ಗಂಭೀರ ಕಂಠದಿಂದ "ಸಂಭವಾಮಿ ಯುಗೇ ಯುಗೇ !" ಎಂದು ಹೇಳಿದೆ.

*

ಕೇದಾರನಾಥವನ್ನು ತಲುಪಲು ನಾವೆಲ್ಲ ವ್ಯಗ್ರರಾಗಿದ್ದೇವೆ. ಯಾತ್ರಿಕರೆಲ್ಲ ತಮ್ಮ ಧೈರ್ಯ ಶಕ್ತಿಗಳ ಅಗ್ನಿ ಪರೀಕ್ಷೆ ಬಂದಿತೆಂದು ಹೆದರಿದ್ದಾರೆ. ಇದುವರೆಗ ನಾವು ನೂರಿಪ್ಪತ್ತು ಮೈಲು ನಡೆದಿದ್ದೇವೆ. ಉತ್ತರಕಾಶಿಯಿಂದ ಕೇದಾರನಾಥವನ್ನು ತಲುಪಲು ಇನ್ನೂ ಮೂವತ್ತೇಳು ಮೈಲು ನಡೆಯಬೇಕು. ದುರ್ದೈವಕ್ಕೆ ವಸಂತ ಮಾಸ ಮುಗಿದಿತ್ತು. ಮುಂದಿನ ಪ್ರದೇಶವೆಲ್ಲ ಶೀತವಲಯವಾಗಿತ್ತು. ಸಮೀಪದಲ್ಲಿಯೆ ಹಿಮದ ದರ್ಶನವಾಗತೊಡಗಿತ್ತು.

ಇಂಥ ವೇಳೆಗೇ ಬ್ರಹ್ಮಚಾರಿ ನನಗೆ ಕೈ ಕೊಟ್ಟನು. ನನ್ನ ಮೇಲೆ ಅದೇನು ಬೇಸರವೋ. ಮುಂದೆ ಒಬ್ಬನೇ ನಡೆದು ಬಿಟ್ಟ. ಅವನ ಗೆಳೆತನವಾಗಿ ಹದಿನೈದು ದಿನಗಳಾಗಿರಲಿಲ್ಲ. ಆದರೆ ದಾರಿಯ ಸುಖದುಃಖಗಳಲ್ಲಿ, ವಿಪತ್ತಿನ ಸಮಯದಲ್ಲಿ ನಮ್ಮ ಪರಿಚಯವು ದೃಢವಾಗಿ, ಬಂಧುತ್ವದ ಪ್ರಥಮ ಬಂಧನಕ್ಕೆ ಅನೇಕ ಗಂಟುಗಳು ಸೇರಿಕೊಂಡಿದ್ದುವು. ಆದರೆ ಉಪಾಯವಿರಲಿಲ್ಲ.

ನಾವು ಹೊರಟಾಗ ಆಕಾಶದಲ್ಲಿ ದಟ್ಟವಾದ ಮೋಡಗಳಿಂದ ಕತ್ತಲು ತುಂಬಿಕೊಂಡಿತ್ತು. ಈ ರಾಜ್ಯದಲ್ಲಿ ಸೂರ್ಯನ ದರ್ಶನವಾಗುವುದೇ ಅಪರೂಪವಂತೆ. ಪರ್ವತದ ವಕ್ಷಸ್ಥಳದ ಮೇಲೆ ಮೇಘಗಳ ತಂಡಗಳು ಒಂದೇ ಸವನೆ ಚಲಿಸುತ್ತಿದ್ದವು. ಇತ್ತ ಚಳಿಯಿಂದ ಕಾಲುಗಳು ಸರಿಯಾಗಿ ನಡೆಯದಾಗಿದ್ದವು. ಹಲ್ಲುಗಳನ್ನು ಔಡುಗಚ್ಚಿ ಹಿಡಿದುಕೊಂಡರೂ ಕಟಗರಿಸಿ ಉಚ್ಚಿಬೀಳುವಂತೆ ನಡುಗುತ್ತಿದ್ದವು. ಮೋರೆಯ ಮೇಲೆ ಸೊಂಯ್ ಎಂದು ಸೂಸುವ ತಂಪು ಗಾಳಿ ಸೂಜಿ ಚುಚ್ಚಿದಂತೆ ಬಾಧಿಸುತ್ತಿತ್ತು. ಕೈಗಳು ಥರಥರನೆ ಒಂದೇ ಸವನೆ ನಡುಗುತ್ತಿದ್ದುದರಿಂದ, ಬಡಿಗೆಯನ್ನು ಹಿಡಿದುಕೊಳ್ಳಲಾಗುತ್ತಿರಲಿಲ್ಲ. ಸಾಲದ್ದಕ್ಕೆ ಸುತ್ತು ರಸ್ತೆ. ಒಮ್ಮೆಲೆ ಏರಿಕೆಯಿಲ್ಲ. ಸ್ಕ್ರ್ಯೂ ಮೊಳೆಯಂತೆ ಸುತ್ತಿಕೊಂಡು ಹೋಗುತ್ತದೆ. ದಾರಿಯಲ್ಲಿ ಎಲ್ಲಿಯೂ ವೃಕ್ಷ ಲತೆಗಳಿಲ್ಲ. ವನ ಅರಣ್ಯಗಳಿಲ್ಲ. ಜೀವಜಂತುಗಳ ಕುರುಹೂ ಇಲ್ಲ. ಹಿಮಾಚ್ಛಾದಿತವಾದ ಪರ್ವತಗಳೇ ಪರ್ವತಗಳು. ಅವುಗಳಿಂದ ಗರ್ಜಿಸುತ್ತ ಕೆಳಗಿಳಿದು ಬರುತ್ತಿದ್ದ ಅಸಂಖ್ಯ ಪ್ರವಾಹಗಳು. ಹಿಮದ ಬಿಳಿವರ್ಣದಿಂದ ಒಂದು ತೆರನಾದ ಪ್ರಕಾಶವು ಎಲ್ಲೆಡೆಗೆ ಹರಡಿತ್ತು. ಅದರಲ್ಲಿರುವ ಉಗ್ರತೆ ಭಯಾವಹವಾಗಿತ್ತು. ನೋಡ ನೋಡುತ್ತಿದ್ದಂತೆ ಬಿರುಗಾಳಿ ಎದ್ದಿತು. ಜೊತೆಗೇ ಬೆಳ್ಳಗಿನ ಪುಷ್ಪಗಳ ಹಾಗೆ ಹಿಮ ಇಳಿಸುತೊಡಗಿತು. ಹಿಮದ ಮಳೆಯೇ ಅದು. ಆಹಾ! ಅದೆಂಥ ಥಂಡಿ! ಇನ್ನು ಪ್ರಾಣವುಳಿಯುವಂತೆ ತೋರುವುದಿಲ್ಲ. ಮೈಮೇಲೆಲ್ಲ ಹಿಮ ಸುರಿದಿದೆ! ಎವೆಗಳನ್ನು ಬೆರಳುಗಳಿಂದ ಎತ್ತಿದರೂ ಕಣ್ಣು ತೆರೆಯುವುದಿಲ್ಲ. ಹುಚ್ಚರಂತೆ— ಓಡುವುದಕ್ಕೆ ಯತ್ನಿಸಿದಾಗ ಕಾಲು ಜಾರಿ ಬಿದ್ದುಬಿಟ್ಟೆ. ಕೈಗಳನ್ನು ಆಡಿಸಿ ಕಂಬಳಿಯನ್ನು ಹುಡುಕಿಕೊಂಡೆ. ಆಹಾ, ಒಡವಸ್ತುವು ನನಗಾಗಿ ಎಷ್ಟೆಲ್ಲ ಕಷ್ಟಗಳನ್ನು ಸಹಿಸಬೇಕಾಯಿತು! ಎಲ್ಲಿ ಬಿದ್ದಿರುವೆನೊ ತಿಳಿಯದು. ಅಷ್ಟರಲ್ಲಿ ಶಂಖಧ್ವನಿ ಕೇಳಿಸಿತು! ಕಂಚಿನ ಗಂಟೆಯ ಸಪ್ಪಳವೂ ಅದರಲ್ಲಿ ಕೂಡಿದೆ. ಆದರೆ ಎದ್ದೇಳುವುದಕ್ಕೂ ತ್ರಾಣವಿರಲಿಲ್ಲ. ಅರ್ಧನಿಶ್ಚೇಷ್ಟಿತನಂತೆ ಬಿದ್ದಾಗ, ಎಷ್ಟು ವೇಳೆ ಸಂದಿತು ತಿಳಿಯದು. ಅಷ್ಟರಲ್ಲಿ ಯಾರೋ ಬಂದು ನನ್ನನ್ನು ಎಬ್ಬಿಸಿದರು.

"ನಾನು ಅಮರಸಿಂಹ."

ಶರೀರದಲ್ಲಿಯ ಶಕ್ತಿಯನ್ನೆಲ್ಲ ಶೇಖರಿಸಿ ಎದ್ದು ನಿಂತೆ. ಅಮರಸಿಂಹನ ಸಹಾಯದಿಂದ ಮೆಲ್ಲಗೆ ಸಾಗಿದೆ. ರಸ್ತೆಯಲ್ಲಿ ತಿರುಗಿದ ಕೂಡಲೇ ಹಿಮಾಚ್ಛಾದಿತ ಹಿಮಾಲಯದ ಪಟಭೂಮಿಕೆಯ ಮೇಲೆ ಚಿತ್ರಿತವಾದಂತೆ ಕೇದಾರನಾಥ ಮಂದಿರವು ಕಾಣಿಸಿತು.

ಕೈಬೆರಳ ತುದಿಗಳು ಚಳಿಯಿಂದ ಒಡೆದು ರಕ್ತವನ್ನು ಸುರಿಸುತ್ತಿದ್ದವು. ಕಾಲಿನ ಚರ್ಮವೂ ಕಿತ್ತುಹೋಗಿತ್ತು. ಏನಾದರಾಗಲಿ ಎಂದುಕೊಂಡು ಪಾದರಕ್ಷೆಗಳನ್ನು ಕಳಚಿ ಆ ಪವಿತ್ರ ಮಂದಿರದಲ್ಲಿ ಪ್ರವೇಶಮಾಡಿದೆ. ಒಳಗೆ ಮಹಾ ಕಗ್ಗತ್ತಲು.

ಅಲ್ಲಿ ನಾನು ಕಂಡುದೇನು? ಕೆಲವು ಊರ್ಧ್ವ ಉನ್ಮತ್ತ ಸ್ತ್ರೀ-ಪುರುಷ ಯಾತ್ರಿಕರು ಕೇದಾರನಾಥನ ದೊಡ್ಡ ದೇಹವನ್ನು ಅಪ್ಪಿ ಮುದ್ದಿಡುತ್ತಿದ್ದರು. ಕೇದಾರನಾಥ ಎಂದರೆ ಒಂದು ದೊಡ್ಡ ಕಲ್ಲಿನ ತುಂಡು. ಅದನ್ನೇ ಆಲಂಗಿಸಿಕೊಂಡು ಕೆಲವರು ಚೀತ್ಕಾರಮಾಡುತ್ತಿದ್ದರು. ಕೆಲವರು ಹಾಡುತ್ತ ಕುಣಿಯುತ್ತಿದ್ದರು. ಕೆಲವರು ಹುಚ್ಚರ ಹಾಗೆ ನಗುತ್ತಿದ್ದರು. ಆವೇಗ, ಉಲ್ಲಾಸ, ಆರ್ತಸ್ವರ, ಮಂತ್ರಪಠನ, ಪ್ರೇಮ, ಭಕ್ತಿ ಇವೆಲ್ಲ ಭಾವನೆಗಳು ಜನಸ್ತೋಮದಿಂದ ಉಕ್ಕಿ ಹರಿಯುತ್ತಿದ್ದರೂ, ಆ ಬಧಿರ ಶಿಲಾಖಂಡವು ಒಂದೇ ರೀತಿಯಾಗಿ ಸ್ಥಿರ ನೀರವತೆಯಿಂದ ನಿಂತಿದ್ದಿತು. ಆ ಪಥಭ್ರಾಂತರ ಗುಂಪನ್ನು ನೋಡುತ್ತ ಬಲು ಹೊತ್ತು ನಿಲ್ಲುವುದಕ್ಕೆ ನನ್ನಿಂದಾಗಲಿಲ್ಲ. ಅವರ ದೈಹಿಕ ಸ್ಥಿತಿಯು ನನಗಿಂತ ಶೋಚನೀಯವಾಗಿದ್ದಿತು. ಒಬ್ಬನ ತುಟಿಯಿಂದ ರಕ್ತ ಇಳಿಯುತ್ತಿದೆ. ಒಬ್ಬನ ಬಾಯಿಂದ ಬುರುಗು ಬರುತ್ತಿದೆ. ಕೈಕಾಲುಗಳಲ್ಲಿ ಹಿಮಕ್ಷತದ ಗಾಯಗಳು ಕಾಣಿಸಿಕೊಂಡಿವೆ. ಇದೆಲ್ಲ ಏಕೆ? ಈ ದುರ್ಗಮ ರಸ್ತೆಯನ್ನು ದಾಟಿ ಈ ಭೀಕರ ನೋವನ್ನು ಸಹಿಸಿಕೊಂಡು ಯಾವ ದುರ್ಲಭ ವಸ್ತುವನ್ನು ಪಡೆಯಲೆಂದು ಬಂದಿದ್ದಾರೆ?








ಪ್ರಕಾಶ ಪ್ರವೇಶಕ್ಕೆ ರವಷ್ಟಾದರೂ ಇಂಬುಗೊಡದೇ ಇರುವ ಆ ಮಂದಿರವು ರಹಸ್ಯದ ಪರಮಾವಧಿಯಾಗಿ ಕಂಡಿತು. ಅಂದ ಹಾಗೆ ನಾನೂ ದೇವರಿಗೆ ಬೇಡಿಕೊಳ್ಳಬೇಕಲ್ಲವೆ? ಈ ಪ್ರಸ್ತರ ಸ್ತೂಪದ ಮುಂದುಗಡೆ ನಿಂತು ಏನೆಂದು ಪ್ರಾರ್ಥನೆ ಮಾಡಲಿ ಎಂದು ತಿಳಿಯಲಿಲ್ಲ. ಹೊರಬಂದೆ.

ಧರ್ಮಶಾಲೆಗೆ ನಾನು ಮರಳಿಬಂದಾಗ, ಅಲ್ಲಿ ಗೋಪಾಲದಾದಾ ಮತ್ತು ಅವನ ಸಂಗಡಿಗರು ಕಂಬಳಿ ಹೊದೆದುಕೊಂಡು ಮುದುಡಿ ಕುಳಿತಿದ್ದರು. ಯಾರ ಬಾಯಲ್ಲಿಯೂ ಮಾತಿಲ್ಲ. ಕೇದಾರನಾಥನನ್ನು ದರ್ಶನಮಾಡಿದ್ದರ ಆನಂದದ ಚಿನ್ಹೆಯನ್ನು ಗುಡಿಯಲ್ಲಿಯೆ ಬಿಟ್ಟು ಬಂದಂತಿದ್ದರು. ಅವರು ಹೊದ್ದುಕೊಂಡ ಕಂಬಳಿಯೂ ತಣ್ಣಗಾಗಿ ಹೋಗಿದ್ದಿತು. ಅಷ್ಟರಲ್ಲಿ ಅಮರಸಿಂಹ ಕಟ್ಟಿಗೆಯನ್ನು ಉರಿಸಿಕೊಟ್ಟನು. ಬೆಂಕಿಯನ್ನು ಕಂಡು ನಮಗೆ ಅತ್ಯಾನಂದವಾಯಿತು. ಮೃತ್ಯುಸಂಜೀವಿನಿಯನ್ನು, ನಮ್ಮಲ್ಲಿ ಲೋಪವಾಗಿ ಹೋದ ಆಯುಸ್ಸನ್ನು ತಿರುಗಿ ಕಂಡಂತಾಯಿತು. ತಂಪಿನಿಂದ ಕಟ್ಟಿಗೆಯ ಉರಿಯು ಅಲ್ಪ ಹಾಗೂ

ಮಂದವಾಗಿದ್ದರೂ, ಯಾತ್ರಿಕರೆಲ್ಲ ಧಾವಿಸಿದರು. ಒಬ್ಬನು ತನ್ನ ಕೈಕಾಲುಗಳನ್ನು ಅದರಲ್ಲಿಯೆ ಅದ್ದುತಲಿದ್ದ. ಸುಡುವ ಭಯವೇ ಇಲ್ಲ. ಬೆಂಕಿಗಾಗಿ ಜಗಳ, ದೊಂಬಿ, ನೂಕ್ಕನುಗ್ಗಾಟ. ಆ ಬ್ರಾಹ್ಮಣ ಮುದುಕಿಯಂತೂ ಆ ಬೆಂಕಿಯನ್ನೆಲ್ಲ ನಮ್ಮೆಲ್ಲರ ಬಳಿಯಿಂದ ಕಸಿದು, ತನ್ನ ದೇಹಕ್ಕೆ ಲೇಪಿಸಿಕೊಳ್ಳುವವರಂತೆ ವರ್ತಿಸಿದಳು.

ಕಲ್ಲಿನಿಂದ ಕಟ್ಟಿದ ಆ ಧರ್ಮಶಾಲೆಯ ಕಟ್ಟಡದಲ್ಲಿ ಎಲ್ಲಿಯೂ ರಂಧ್ರಗಳಿಲ್ಲ. ಹೊಗೆ, ಬೆಂಕಿ ಇದರಿಂದಾಗಿ ಒಳಗಿನ ಹವೆ ತುಸು ಬೆಚ್ಚಗಾಯಿತು. ಆಮೇಲೆ ಒಬ್ಬೊಬ್ಬರಾಗಿ ಬಾಯಿಬಿಟ್ಟರು. ಅಮರಸಿಂಹನ ಸಹಾಯದಿಂದ ಒಂದಿಷ್ಟು ಊಟ ಮಾಡಿದೆವು- ಕೇದಾರನಾಥದಲ್ಲಿ ಒಂದು ರಾತ್ರಿ ಕಳೆಯಬೇಕಂತೆ. ಇಡೀ ದಿನ ಬೆಂಕಿಯುರಿಸಿಕೊಂಡು ಕಂಬಳಿ ಹೊದೆದುಕೊಂಡು ಕುಳಿತಾಗ, ಹಗಲು ಸಂಜೆಯಾದುದು ಸಂಜೆ ರಾತ್ರಿಯಾದುದು ನಮಗೆ ತಿಳಿಯಲೇ ಇಲ್ಲ.

ಮರುದಿನ ಹೊರಗೆ ಹಣಿಕಿದಾಗಲೂ ಸೂರ್ಯ ಹಾಗೂ ಅವನ ಬೆಳಕುಗಳ ದರ್ಶನವಾಗಲೇ ಇಲ್ಲ. ಒಂದು ಸಲ ಹಿಮದ ಮಳೆ, ಇನ್ನೊಂದು ಸಲ ಮಳೆಯ ಬದಲು ಹಿಮವೇ ಸುರಿಯುತ್ತಿತ್ತು. ಈ ಮಳೆ, ಹಿಮ ಗಟ್ಟಿಯಾಗಿ ಬರ್ಫವಾಗುತ್ತಿತ್ತು. ಮಳೆಗಾಲದ ಕೊನೆಯ ತನಕ ಇಲ್ಲಿ ಮನುಷ್ಯವಾಸ. ಶೀತಕಾಲದಲ್ಲಿ, ಪಶುಪಕ್ಷಿ, ಮನುಷ್ಯರ ಗುರುತು ಕೂಡಾ ಉಳಿಯುವುದಿಲ್ಲ. ಈ ಮನೆ ರಸ್ತೆಗಳು ಅನೇಕ ಶತಮಾನಗಳ ಹಿಂದೆ ಮಾಡಿದವುಗಳಾದರೂ ಹೊಸದಾಗಿಯೆ ಇದ್ದಂತೆ ಕಂಡವು. ಏನೂ ಸುಧಾರಣೆಯಿಲ್ಲ. ಯಾವುದೂ ಬಿದ್ದುಹೋಗಿಲ್ಲ. ಒಂದು ಋತುವಿನ ಅಭಾವದಿಂದ ಇವುಗಳ ಆಯುಷ್ಯವು ಇಷ್ಟು ದೀರ್ಘವಾಗಿದೆಯೆಂದು ಕಾಣುತ್ತದೆ.

ಮಳೆ, ಗಾಳಿ, ಹಿಮಗಳನ್ನು ಲೆಕ್ಕಿಸದೆ ನಾವು ತಿರುಗಿ ಹೊರಟೆವು. ಅಂದೇ ಸಂಜೆ ಉಖೀಮಠವನ್ನು ಮುಟ್ಟಬೇಕಿದ್ದಿತು. ನಲಾಶ್ರಮಕ್ಕೆ ಬಂದ ಮೇಲೆ ಉಖೀಮಠವು ಮೂರೇ ಮೈಲು ಇದೆಯೆಂದು ಕೇಳಿದಾಗ ನಮ್ಮೆಲ್ಲರಿಗಾದ ಸಂತೋಷ ಅಷ್ಟಿಷ್ಟಲ್ಲ. ಆದರೆ ಅದೆಂಥ ಮೂರು ಮೈಲು! ಬೀಳುತ್ತ ಏಳುತ್ತ ಆ ಇಳುಕಲಿನಲ್ಲಿ ನಡೆದೇ ನಡೆಯುತ್ತಿದ್ದಾರೆ. ಮೂರು ಮೈಲು ಮುಗಿಯಲೇ ಇಲ್ಲ. ಯಾತ್ರಿಕರಲ್ಲಿ ಉತ್ಸಾಹವು ಅಳಿಯದಿರಲಿ ಎಂದು ಯಾರೊ ಆ ದೀರ್ಘ ಅಂತರಕ್ಕೆ ಮೂರು ಮೈಲು ಎಂದು ಖಚಿತಪಡಿಸಿರಬೇಕು.

ಉಖೀಮಠಕ್ಕೆ ತಲುಪಿವಾಗ ರಾತ್ರಿಯೇ ಆಗಿತ್ತು. ಉಖೀಮಠದ ಮೂಲ ಹೆಸರು, ಉಷಾಮಠ. ಹಿಂದೆ ಇದು ಬಾಣಾಸುರನ ರಾಜಧಾನಿ. ಅವನ ಮಗಳಾದ ಉಷೆಯನ್ನು ಶ್ರೀಕೃಷ್ಣನ ಮೊಮ್ಮಗ ಅನಿರುದ್ಧನು ಅಪಹರಿಸಿದ್ದನು. ಶ್ರೀಕೃಷ್ಣನಿಗೆ ತಕ್ಕ ಮೊಮ್ಮಗ. ಈಗ ಅದು ಪೇಟೆ, ಆಸ್ಪತ್ರೆ ಮುಂತಾದ ಎಲ್ಲ ನಾಗರಿಕ ಸರಂಜಾಮುಗಳಿಂದ ಕೂಡಿದ ನಗರವಾಗಿದ್ದಿತು.

ಹದಿನೆಂಟು ದಿನಗಳ ಹಿಂದೆ ನಮ್ಮ ಮೃತ್ಯುವಾಗಿದ್ದಿತು. ಈಗ ನಾವು ಬರಿಯ ಪ್ರೇತಗಳಾಗಿದ್ದೇವೆ. ಇಂದು ನಮ್ಮ ಬಂಧುಬಳಗದವರು ನೋಡಿದರೆ ನಮ್ಮ ಗುರುತನ್ನು ಹಿಡಿಯಲಾರರೇನೊ.

ನಾವು ಇಳಿದುಕೊಂಡಿದ್ದ ಧರ್ಮಶಾಲೆಯ ಹತ್ತಿರವೇ ಪೋಲೀಸ್ ಠಾಣೆ ಇದ್ದಿತು. ಜಮಾದಾರನೊಬ್ಬನು ವರ್ತಮಾನ ಪತ್ರವನ್ನು ಹಿಡಿದುಕೊಂಡು ಕಟ್ಟೆಯ ಮೇಲೆ ಕುಳಿತಿದ್ದನು. ಅದನ್ನು ಕಂಡು ಚಕಿತನಾದೆ. ಹಾಗಾದರೆ ನಾವು ಈ ಮೃತ್ಯುಲೋಕದಲ್ಲಿ ಜೀವಿಸಿದ್ದೇವೆ! ಪ್ರಪಂಚದ ಪ್ರತಿನಿಧಿಯಂತೆ ಆ ಕಾಗದದ ಚೂರು ಕಾಣಿಸಿತು. ಕಂಗಾಲತನದಿಂದ ಅದನ್ನು ಇಸಿದುಕೊಂಡು ಓದತೊಡಗಿದೆ. ಮಹಾತ್ಮಾಜಿ ಜೇಲಿನಲ್ಲಿದ್ದಾರೆ. ಮೇದಿನೀಪುರದಲ್ಲಿ ಮ್ಯಾಜಿಸ್ಟ್ರೇಟನ ಕೊಲೆ. ಚಿತ್ರದಲ್ಲಿಯ ಮುಸೋಲಿನಿಯ ಮುಖದ ಮೇಲೆ ವಿಜಯದ ನಗೆ ಹರಡಿದೆ. ಒಬ್ಬ ಹುಡುಗಿ ವಿಲಾಯಿತಿಯಿಂದ ಆಸ್ಟ್ರೇಲಿಯಾದ ತನಕ ವಿಮಾನೋಡ್ಡಾಣ ಮಾಡಿದ್ದಾಳೆ. ದುಂಡುಮೇಜಿನ ಪರಿಷತ್ತಿನ ತಯಾರಿ ನಡೆದಿದೆ. ಇತ್ಯಾದಿ

ಸುದ್ದಿಗಳನ್ನು ಓದುತ್ತಿದ್ದಂತೆ ನನ್ನ ಪ್ರೀತ್ಯಾಸ್ಪದ ಬದುಕನ್ನು ಅಪ್ಪಿಕೊಂಡಂತಾಯಿತು. ನನ್ನ ಕಣ್ಣುಗಳಲ್ಲಿ ಸಮಾಧಾನದ ಕಣ್ಣೀರು ಹರಿಯಿತು.

*

ಮರುದಿನ ನಸುಕಿನಲ್ಲಿಯೆ ನಮ್ಮ ಜೋಳಿಗೆ ಕಂಬಳಿಗಳ ಸಂಸಾರವನ್ನು ಹೆಗಲೇರಿಸಿದೆವು. ಬದ್ರೀನಾಥನಿರುವ ಪೂರ್ವದಿಕ್ಕಿನಿಂದ ನಮಗೆ ಕರೆಬಂದಿತ್ತು. ಉದಯಿಸಿದ ಸೂರ್ಯನ ಕಿರಣಗಳು ಆ ಸಂದೇಶವನ್ನು ಹೊತ್ತು ತಂದಿದ್ದವು. ಉಖೀಮಠಕ್ಕೆ ತಲುಪಲು ಎಷ್ಟೆಲ್ಲ ತಯಾರಿ ಮಾಡಿದ್ದೆವು! ಅಲ್ಲಿ ಎಷ್ಟು ಆಕರ್ಷಣೆ ಇತ್ತು! ಇಂದು ಅದೇ ಸ್ಥಳದ ವಿಚಾರವಾಗಿ ಅಷ್ಟೇ ನಿರ್ದಯ ಅವಹೇಳನವು ನಮ್ಮಲ್ಲಿ ತುಂಬಿದೆ ನಮ್ಮ ಜೀವನದಲ್ಲಿ ಇನ್ನು ಅದರ ಪ್ರಯೋಜನವಿಲ್ಲ. ಅದು ನಮ್ಮ ಹಾದಿಯ ಕಡೆಗೆ ದೈನ್ಯದಿಂದ ನೋಡುತ್ತ ನಿಂತಿತ್ತು.

ರಸ್ತೆ ಏರಾಗಿದೆ. ನಾವು ಸಾವಕಾಶವಾಗಿ ಸಾಗುತ್ತಿದ್ದೇವೆ. ಯಾರೂ ಮುಂದೆ ನಡೆಯುವ ಹಾಗಿಲ್ಲ. ಛಂದೋಬದ್ಧ ಗತಿಯಿಂದಲೆ ನಡೆಯಬೇಕು. ಹೆಚ್ಚು ಸಾಹಸ ಮಾಡಹೋದರೆ ದಾರಿಯು ಅವನನ್ನು ಕಠೋರವಾಗಿ ಶಿಕ್ಷಿಸುತ್ತದೆ.

ಕಾಂತಾ ಧರ್ಮಶಾಲೆ ಮೊದಲಾವುಗಳನ್ನು ದಾಟಿ, ಮಧ್ಯಾಹ್ನದ ಹೊತ್ತಿಗೆ ಜೋಪೇಠಾ ಧರ್ಮಶಾಲೆಗೆ ತಲುಪುವಾಗ ಅರೆಜೀವವಾಗಿತ್ತು. ಈ ಧರ್ಮಶಾಲೆಗಳು ಎಂದಿಗೆ ಮುಗಿಯುತ್ತವೋ ಏನೊ! ಇವು ದಾರಿಯ ಬದಿಯಲ್ಲಿ ಕುಳಿತು ಯಾತ್ರಿಕರನ್ನು ನುಂಗುತ್ತವೆ. ಮತ್ತು ತುಸು ಸಮಯದ ನಂತರ ಉಗುಳಿ ಬಿಡುತ್ತವೆ. ಅಲ್ಲ, ಅಲ್ಲ. ಬೇರೊಂದು ರೀತಿಯಿಂದ ಅವುಗಳನ್ನು ಬಣ್ಣಿಸಬೇಕು. ಈ ಧರ್ಮಶಾಲೆಗಳಂಥ ಬಂಧು ಯಾತ್ರಿಕರಿಗೆ ಇನ್ನೊಂದಿಲ್ಲ. ದರಿದ್ರಳೂ ದುಃಖಿತಳೂ ಆಗಿರುವ ತಾಯಿಯು ದಾರಿಯ ಬದಿಯಲ್ಲಿ ನಿಂತು ತನ್ನ ದಣಿದ ಮಕ್ಕಳ ದಾರಿ ಕಾಯುತ್ತಿರುವಂತೆ ಕಾಣಿಸಿಕೊಳ್ಳುತ್ತವೆ. ಅವಳ ಒಂದು ಕೈಯಲ್ಲಿ ಶೀತಲ ಜಲ, ಇನ್ನೊಂದು ಕೈಯಲ್ಲಿ ಒಣಗಿದ ರೊಟ್ಟಿ.

ಕೇದಾರ, ಬದರಿ, ಕರ್ಣಪ್ರಯಾಗಗಳಿಗೆ ಚಮೋಲಿ ಮಧ್ಯಸ್ಥಳ. ಅದು ಸಣ್ಣ ಶಹರವೇ ಇದ್ದಿತು. ಅಲ್ಲಿಯ ಧರ್ಮಶಾಲೆಗೆ ಬಂದಾಗ, ನನಗೆ ಮೈಯಲ್ಲಿ ಒಂದು ತರಹ ವೇದನೆಯಾಯಿತು. ಅನ್ನ ರುಚಿಸದು. ಕಣ್ಣುಗಳು ಉರಿಯುತ್ತಿದ್ದವು. ಯಾರೊಡನೆಯೂ ಮಾತನಾಡುವ ಮನಸ್ಸಿಲ್ಲ. ಚಾರೂಕೀ ಮಾ "ಠಾಕೂರದಾದಾ ನಿಮಗೆ ಏನಾಗಿದೆ?" ಎಂದು ಕೇಳಿದಳು. ನನಗೇನು ಹೇಳುವುದಕ್ಕಾಗಲಿಲ್ಲ. ಕಣ್ಣು ಮುಚ್ಚಿ ಮಲಗಲು ಪ್ರಯತ್ನಿಸುತ್ತಿದ್ದೆ. ಗೋಪಾಲದಾದಾ ಕಾತರತೆಯಿಂದ ನನ್ನ ಬಳಿಗೆ ಬಂದು, ತಲೆ ದೇಹಗಳ ಮೇಲೆ ಕೈಯಾಡಿಸಿದರು, "ಹೌದು. ನಾನೆಣಿಸಿದ್ದಂತೆಯೇ ಆಯಿತು. ನಿಮ್ಮ ದೇಹ ಜ್ವರದಿಂದ ಸುಡುತ್ತಿದೆ."

ನನಗೆ ಜ್ವರದಿಂದ ಮತ್ತು ಬಂದಂತಾಗಿತ್ತು. ಗೋಪಾಲದಾದಾ ನನಗೊಮ್ಮೆ ಆಸ್ಪತ್ರೆಯ ದರ್ಶನ ಮಾಡಿಸಿದರು ಅಲ್ಲಿಂದ ಅವರೆಲ್ಲ ಊಟ ಉಪಚಾರಗಳನ್ನು ಮುಗಿಸಿ ಮುಂದೆ ಹೊರಟು ಬಿಟ್ಟರು. ನನಗೆ ಉಸಿರನ್ನೆಳೆದುಕೊಳ್ಳುವುದಕ್ಕೂ ಶಕ್ತಿ ಇರಲಿಲ್ಲ. ಚಾರೂಕಿ ಮಾ ನೀರು ತಂದು ಕೊಟ್ಟಳು. ಗೋಪಾಲದಾದಾ, "ಚಿಂತೆಮಾಡಬೇಡಿರಿ. ಎಲ್ಲವೂ ಬಾಬಾನ ಇಚ್ಛೆ. ನಾವು ಇದೇ ದಾರಿಯಿಂದ ತಿರುಗಿ ಬರಬೇಕಾಗುವುದು. ಬರುವಷ್ಟರಲ್ಲಿ ನೀವು ಸುಧಾರಿಸಿಕೊಳ್ಳುವಿರಿ."

ಅವರು ಹೋದ ಮೇಲೆ ಅದೆಷ್ಟು ಹೊತ್ತಿನ ತನಕ ಬಿದ್ದುಕೊಂಡಿದ್ದೆನೊ. ಮಧ್ಯಾಹ್ನವಾದಂತೆ ಕಂಡಿತು. ಜ್ವರದ ತಾಪವನ್ನು ಸಹಿಸಲಾರದೆ ಮೇಲಕ್ಕೆದ್ದೆ. ಧರ್ಮಶಾಲೆಯ ಹಿಂದಿನ ದಾರಿಯಿಂದ ಕೆಳಗಿಳಿದು ನಡೆದೆ. ಮೊಳಲು ಕಲ್ಲುಗಳಿಂದ ತುಂಬಿದ ದಾರಿಯಲ್ಲಿ ನಡೆದು ನದಿಯ ದಂಡೆಗೆ ಬಂದೆ. ಪರಿಣಾಮದ ಯೋಚನೆ ಮಾಡದೆ ನೀರಿಗಿಳಿದೆ. ಅರ್ಧ ಗಂಟೆಯ ತನಕ ನೀರಲ್ಲಿಯೆ ಇದ್ದೆ. ದೇಹಕ್ಕೆ ಆಗ ಸುಖವೆನಿಸತೊಡಗಿತು. ವಿಷದಿಂದಲೇ ವಿಷವು ನಾಶ ಹೊಂದಿತ್ತು. ನೀರಿನ ಗುಣವಿದ್ದರೂ ಇರಬ

ಹುದು. ಮುಸ್ಸಂಜೆಗೆ ನಾನು ಯಾತ್ರೆಗೆ ತೊಡಗಿದೆ.

ಅನೇಕ ಧರ್ಮಸಾಲೆಗಳನ್ನು ಹೇಗೆ ದಾಟಿ ಹೋದೆನೊ. ದಾರಿಯಲ್ಲಿ ಯಾತ್ರಿಕರು ಹಲವರು ಭೆಟ್ಟಿಯಾದರೂ ಹೊಸಪರಿಚಯದ ಉಸಾಬರಿಗೆ ಹೋಗಲಿಲ್ಲ. ಕೊನೆಗೊಮ್ಮೆ ಜೋಶೀ ಮಠಕ್ಕೆ ಬಂದೆ. ಬಾಲ್ಯದಿಂದಲೂ ಇದರ ಹೆಸರನ್ನು ಕೇಳಿದ್ದೆ. ಇದರ ಸಂಸ್ಕೃತ ಹೆಸರು ಜ್ಯೋತಿರ್ಮಠವೆಂದು. ಶಂಕರಾಚಾರ್ಯರ ಉತ್ತರಧಾಮವು ಪ್ರಾರಂಭವಾದ ಸ್ಥಳವಿದು. ಕೇದಾರನಾಥದ ಪೂಜಾರಿ ಉಖೀಮಠದಲ್ಲಿ ಚಳಿಗಾಲವನ್ನು ಕಳೆವಂತೆ ಬದ್ರೀನಾಥದ ಪೂಜಾರಿಯಾದ ರಾವಳ ಮಹಾಶಯರ ಚಳಿಗಾಲದ ವಾಸ್ತವ್ಯ ಜೋಶೀಮಠದಲ್ಲಿರುತ್ತಿತ್ತು. ಜೋಶೀ ಮಠವು ಉಖೀಮಠಕ್ಕಿಂತ ದೊಡ್ಡದಾದ ಊರು. ಹತ್ತಿರವೇ ತಿಬೇಟ್, ಮಾನಸಸರೋವರಗಳಿಗೆ ಹೋಗಲು ರಸ್ತೆಯಿದೆ.

ಅಲ್ಲಿಯ ಒಂದು ಧರ್ಮಶಾಲೆಯಲ್ಲಿ ವಿಶ್ರಾಂತಿಯನ್ನು ಪಡೆದು, ಮುಂದಿನ ಪ್ರಯಾಣವನ್ನು ಕೈಕೊಂಡಾಗ ಕಾಲಿನ ನೋವು ತೊಂದರೆಕೊಡಹತ್ತಿತ್ತು. ಇಳುಕಲಿನಲ್ಲಿ ನಡೆಯುವುದಾದಲ್ಲಿ ಅದರ ನೋವು ಹೇಳತೀರದು. ಶ್ರೀ ವಿಷ್ಣು ಪ್ರಯಾಗವನ್ನು ತಲುಪುವ ಹೊತ್ತಿಗೆ ಸಂಜೆಯಾಗಿತ್ತು. ಇಲ್ಲಿ ವಿಷ್ಣುಗಂಗಾ ಅಥವಾ ಅಲಕನಂದೆಯೊಡನೆ ಧವಳ ಗಂಗೆಯ ಸಂಗಮವಿದೆ. ನೀಲವರ್ಣದ ಅಲಕೆಯ ಮಡಲಿನಲ್ಲಿ ಗೈರಿಕ ವಸನೆಯಾಗಿ ಗಂಗೆ ಆತ್ಮಸಮರ್ಪಣ ಮಾಡಿಕೊಳ್ಳುವ ಇಲ್ಲಿನ ದೃಶ್ಯವು ರೋಮಾಂಚಕಾರಿಯಾಗಿದೆ. ಇಲ್ಲಿಂದ ಬದರೀನಾಥ ಬರಿಯೆ ಹದಿನೇಳು ಮೈಲು ದೂರ.

ಮುಂದಿನ ರಸ್ತೆ ಸಾವಕಾಶವಾಗಿ ಮೇಲಕ್ಕೆ ಹೋಗುತ್ತಿದೆ. ಬರಿಯ ಏಳು ಗಂಗಾನದಿಯೂ

ಮೇಲಕ್ಕೆ ಬಂದಿದೆ. ಅದರ ಪ್ರವಾಹವು ವೇಗವಾಗಿದ್ದು ಭೀಮಗರ್ಜನೆ ಮಾಡುತ್ತ ಕೆಳಗೆ ಓಡುತ್ತಿದೆ. ನದಿಯ ಅವಿಶ್ರಾಂತ ಗತಿಯನ್ನು ಕಂಡು ನನ್ನ ಮನಸ್ಸು ಏಕೆ ಉಲ್ಲಸಿತವಾಯಿತೊ ಹೇಳಲಾರೆ. ದಾರಿಯಲ್ಲಿ ಒಂದು ಸ್ಥಳದಲ್ಲಿ ನಿಲ್ಲಬೇಕಾಯಿತು. ಅತಿ ಜಾರಿಕೆಯಿಂದಾಗಿ ಕುಳಿತುಕೊಂಡೇ ನದಿಯ ದಂಡೆಯ ತನಕ ಇಳಿದು ಬಂದೆ. ನದಿಯನ್ನು ದಾಟಲು ಹಗ್ಗದ ಪೂಲಿದೆ. ಈ ಪೂಲು ಪೂರ್ಣ ಸ್ವದೇಶೀ, ಪ್ರಾಚೀನ ಮತ್ತು ಅಕೃತ್ರಿಮ. ಈ ಪರ್ವತದಿಂದ ಆ ಪರ್ವತದ ಕಲ್ಲುಗಳಿಗೆ ಕಟ್ಟಿದ ಎರಡು ಗಡುತರ ಹಗ್ಗಗಳು. ಮಧ್ಯೆಮಧ್ಯೆ ಕೆಲವು ಕಟ್ಟಿಗೆಯ ತುಂಡುಗಳನ್ನು ಜೋಡಿಸಿದೆ. ಇದೇ ಪೂಲು ಅದನ್ನು ಹಿಡಿದುಕೊಂಡು ದಾಟುವಾಗ ಪ್ರತಿ ಕ್ಷಣಕ್ಕೂ ಪ್ರಾಣಭಯ. ಆಚೆಯ ದಡದ ರಸ್ತೆಯ ಸ್ಥಿತಿಯಂತೂ ಭಯಂಕರವಾಗಿತ್ತು. ಒಂದು ಎತ್ತರವಾದ ಗೋಡೆಯಂತೆ ಗುಡ್ಡ. ಮೇಲಕ್ಕೇರಲು ಮೆಟ್ಟಿಲುಗಳೇನೂ ಇರಲಿಲ್ಲ. ಬಾಬಾ ಬದ್ರೀನಾಥನು ದಾರಿಯಲ್ಲಿ ಎಷ್ಟು ವಿಪತ್ತುಗಳನ್ನು ತಂದೊಡ್ಡುವನೊ ಏನೊ. ಅವನು ಇನ್ನೂ ಎಂಟು – ಒಂಬತ್ತು ಮೈಲು ದೂರ ಕುಳಿತಿದ್ದ. ಈ ದಾರಿಯನ್ನು ಸುಗಮಗೊಳಿಸಲು ಅವನ ಅಪ್ಪನಿಂದಲೂ ಸಾಧ್ಯವಿರಲಿಲ್ಲ. ಈ ಕಲ್ಲು ಮಣ್ಣುಗಳ ಗೋಡೆಯನ್ನು ತೆವಳಿಕೊಂಡು, ಮೂಗು ತಿಕ್ಕುತ್ತ ಹೊಟ್ಟೆ ಹೊಸೆಯುತ್ತ, ಕಳವಳದಿಂದ ಬದ್ರೀನಾಥನ ಹದಿನಾಲ್ಕು ತಲೆಮಾರಿನ ಪೂರ್ವಜರನ್ನು ಬೈಯುತ್ತ ಅತ್ಯಂತ ಕಷ್ಟದಿಂದ ಏರತೊಡಗಿದೆ.

ತೀರ್ಥಯಾತ್ರೆಗೆ ಇದೇನು ಮಾರ್ಗವೆ? ಇಂಥ ಮಹಾಯೋಗಿ ತನ್ನ ಭಕ್ತರಿಗೆಂದು ರಾಜಮಾರ್ಗ, ಹೋಗಲಿ ಸಾದಾ ಮಾರ್ಗವನ್ನು ಅಣಿಗೊಳಿಸಬಾರದೆ? ಅಥವಾ ಪುಣ್ಯ ಸಂಪಾದನೆಗಾಗಿ ಜನ ಎಂತಿದ್ದರೂ ಬರುತ್ತಿರುವಾಗ ಅದರ ಅಗತ್ಯವಾದರೂ ಏನು? ಇಷ್ಟೆಲ್ಲ ಕಷ್ಟಗಳನ್ನು ಸಹಿಸಿ ನಡೆದು, ಅಲ್ಲಿ ಮುಟ್ಟಿದ ಮೇಲೆ ಕಾಣುವುದೇನು? ಒಂದು ಕಲ್ಲಿನ ದೊಡ್ಡ ತುಂಡನ್ನೋ, ಇಲ್ಲವೆ ಒಂದು ಅಕರಾಳವಿಕರಾಳ ಆಕೃತಿಯನ್ನೋ. ಆದರೂ ಯಾತ್ರಿಕರ ಗೋಳಿನಿಂದ ಬಾಬಾ ಬದ್ರೀನಾಥನು ಗೌರವಾನ್ವಿತನಾಗಿದ್ದಾನೆ – ವೃದ್ಧಾಪ್ಯವನ್ನು ಹೊಂದಿದವರು, ನೋವಿನಿಂದ ನರಳುತ್ತಿರುವವರು, ಅಶಕ್ತರು ಇವರ ಹೊರತು ಅವನ ಕೆಲಸ ನಡೆಯುವಂತಿಲ್ಲ, ಅವರಿಂದಲೇ ಅವನಿಗೆ ಇಷ್ಟು ಸನ್ಮಾನ. ತನ್ನ ಭಕ್ತರು ಬರುವ ದಾರಿಯಲ್ಲೆಲ್ಲ ದುರ್ಭಿಕ್ಷ, ವ್ಯಾಧಿ, ಅಕಾಲ ಮೃತ್ಯು ಇವುಗಳನ್ನು ಹರಡಿದ್ದುದು ಸರಿಯೆ?

ಹನುಮಾನ್ ಧರ್ಮಶಾಲೆಯಲ್ಲಿ ಅಂದಿನ ಯಾತ್ರೆಯನ್ನು ಮುಗಿಸಿದೆ. ಚಳಿಯಿಂದ ದೇಹವೆಲ್ಲ ನಡುಗುತ್ತಿದೆ. ತಿರುಗಿ ಬರ್ಫದ ರಾಜ್ಯವನ್ನು ಪ್ರವೇಶಿಸಿದ್ದೇನೆ. ಗಡಬಡಿಸಿ ಧರ್ಮಶಾಲೆಯಲ್ಲಿ ಒಳಹೊಕ್ಕೆ.

"ಓಹೊ; ಬಾಬಾ ಠಾಕೂರ! ಬಂದುಬಿಟ್ಟಿರಾ?" ತಿರುಗಿ ನೋಡುತ್ತೇನೆ ಚಾರೂಕಿ ಮಾ. "ಹೌದು. ನೀವೆಲ್ಲ ಸೌಖ್ಯವಷ್ಟೆ? ಗೋಪಾಲದಾದಾ ಎಲ್ಲಿ?"

ಒಳಗಿನಿಂದ, ಚಳಿಯಿಂದ ನಡುಗುತ್ತಿರುವ ಕಂಠವೊಂದು ಆನಂದದಿಂದ ಕೂಗಿಕೊಂಡಿತು. "ಬನ್ನಿ ದಾದಾ. ತಂಬಾಕು ಸೇದುತ್ತಿದ್ದೇನೆ... ರಸ್ತೆಯುದ್ದಕ್ಕೂ ನಿಮ್ಮದೇ ನೆನಪು" ಗೋಪಾಲದಾದಾನ ಬಳಿ ಹೋಗಿ ಕಂಬಳಿ ಹಾಸಿದೆ. ಮರುದಿನ ಕತ್ತಲಿರುವಾಗಲೇ ಹೊರಡಬೇಕೆಂಬುದನ್ನು ಕೇಳಿ ಬೇಗ ನಿದ್ದೆ ಮಾಡಬೇಕೆಂದೆ. ಚಳಿ ನಿದ್ದೆ ಮಾಡಗೊಡಲಿಲ್ಲ.

ಮುಂದಿನ ಯಾತ್ರೆಗೆ ಹೊರಟಾಗ ಕಾಲಿಡುವುದಕ್ಕೂ ನೆಲ ಕಾಣಿಸದಷ್ಟು ಕತ್ತಲೆ ಇದ್ದಿತು. ಅಂಥದರಲ್ಲಿ ಮಳೆ. ಅದರ ಹನಿಗಳು ದೇಹಕ್ಕೆ ಬಡಿಯುವಾಗ ಬಾರಕೋಲಿನಿಂದ ಹೊಡೆದಷ್ಟು ವೇದನೆಯಾಗುತ್ತಿದೆ. ಕೇದಾರನಾಥದ ದಾರಿಯಲ್ಲಿ ಅನುಭವಿಸಿದ ಪ್ರಕೃತಿ ಕೋಪದಿಂದಾಗಿ ನನಗಷ್ಟು ಗಟ್ಟಿಗತನ ಬಂದೀತೆಂದು ಭಾವಿಸಿದ್ದೆ. ದೇಹ ತಾಪವು ಹೆಚ್ಚೆಂದೇ ಕಂಡಿತು.

ದಾರಿಯನ್ನು ಶಪಿಸಿದರೂ ಇಕ್ಕೆಲಗಳಿಗೆ

A 6-18

ಏನೂ ಅನ್ನುವಂತಿಲ್ಲ. ನಮ್ಮ ಕಡೆ ನೋಡು, ನಾವು ನಿನ್ನ ದಣಿವನ್ನು ಪರಿಹರಿಸಬಲ್ಲೆವು ಎಂಬಂತಿತ್ತು ಹಿಮಾಲಯದ ಎಡಬಲದ, ಎದುರಿನ ದೃಶ್ಯ. ಎಲ್ಲೆಲ್ಲಿಯೂ ಬಿಳಿಯ ಹಿಮ, ಎರಡೂ ಕಡೆ ಇರುವ ಕಪ್ಪು ವರ್ಣದ ಪರ್ವತಗಳ ದೇಹಗಳಿಂದ ಹಿಮಪ್ರವಾಹಗಳು ಇಳಿದು ಬರುತ್ತಿವೆ. ಘನಶ್ಯಾಮನ ಕೊರಳಿನಲ್ಲಿ ಮಲ್ಲಿಗೆಯ ಹಾರಗಳು ಗಾಳಿಗೆ ಹಾರಾಡಿದಂತೆ ಕಾಣಿಸುತ್ತವೆ.

ಬೆಳಗಾಗಿದೆ. ಸೂರ್ಯ ಬಿಂಬವಿಲ್ಲದ ಬೆಳಕು ಅದು. ಈ ಬೆಳಕು ಬಾಳಿನ ಕೊನೆಯ ಗಳಿಗೆಯಂತೆ ಮಂದವಾಗಿದೆ. ಅಂತಿಮ ದಿನದಂತೆ ಆನಂದ ಹೀನವಾಗಿದೆ. ಏನಿದ್ದರೂ ಒಂದು ಸಮಾಧಾನ. ಇಂದು ನಮ್ಮ ಯಾತ್ರೆ ಮುಗಿಯಲೇಬೇಕು. ನಾವು ಹೊರಡುವಾಗ ಇದ್ದ ದೊಡ್ಡ ಗುಂಪು ಈಗ ಚಿಕ್ಕದಾಗಿತ್ತು. ಅನೇಕರು ಹಿಂದೆಯೆ ನಿಂತರು. ಕುದುರೆಯ ಮೇಲಿಂದ ಬರುತ್ತಿದ್ದ ಒಬ್ಬ ಹುಡುಗ ಕಾಲು ಜಾರಿ ಒಂದು ಮೈಲು ಕೆಳಗಿದ್ದ ನದಿಯ ಗರ್ಭದಲ್ಲಿ ಬಿದ್ದು ಅದೃಶ್ಯನಾಗಿ ಹೋದ. ಇದ್ದವರಲ್ಲಿ ಒಬ್ಬರಿಗೆ ಹೊಟ್ಟೆ ಕಡಿತ. ಇನ್ನೊಬ್ಬರ ತಲೆಯೇ ಕೆಟ್ಟಿದೆ - ಮತ್ತೊಬ್ಬರು ಧರಿಸುವ ಬಟ್ಟೆಯನ್ನೆ ಹರಿದು ಪಾದಗಳಿಗೆ ಸುತ್ತಿ ಕೊಂಡಿದ್ದಾರೆ.

"ಮಗೂ" ಉದಾಸೀನತೆಯಿಂದ ಅತ್ತ ನೋಡಿದೆ ಯಾತ್ರಿಕರ ಇಂಥ ನರಳಿನ ಕೂಗನ್ನು ದಾರಿಯಲ್ಲಿ ಕೇಳಿ ಬೇಸತ್ತಿದ್ದ ಒಬ್ಬ ಹೆಂಗಸು ಕುಸಿದು ಕುಳಿತಿದ್ದಳು. ಅವಳಿಗೆ ಬೇಕಾದುದೇನು? "ದಾರಿ ಇನ್ನೂ ಎಷ್ಟು ದೂರವಿದೆ?" ಎಂಬ ಆರ್ತನಾದ. ಅವಳ ಬಾಯಿ ನೊರೆಗಟ್ಟಿತ್ತು. ಕೆಲವು ರಕ್ತದ ಬಿಂದುಗಳೂ ಕಾಣಿಸಿಕೊಂಡವು. ಅವಳ ಗೋಳು ನೋಡಲಾರದೆ ಅಂದುಕೊಂಡೆ, "ಒಂದು ರಿವಾಲ್ವರ್ ಇದ್ದಿದ್ದರೆ ಅವಳ ವೇದನೆಯನ್ನು ಕೊನೆಗೊಳಿಸುತ್ತಿದ್ದೆ" ಎಂದು.

ಇಂದಿನ ದಾರಿ, ಕಡೆಯ ದಾರಿ ಇನ್ನಷ್ಟು ಗಂಡಾಂತಕಾರಿಯಾಗಿದೆ. ರಸ್ತೆಯ ಅಗಲವನ್ನು ಇಂಚುಗಳಲ್ಲಿ ಎಣಿಸುವಷ್ಟು ಆ ಸ್ಥಿತಿ. ಒಂದೇ ಹೆಜ್ಜೆ ಜಾರಿದರೂ, ಉಳಿಯುವ ಆಸೆ ಇಲ್ಲ. ಗೋಡೆಯಂತಿರುವ ಆ ಪರ್ವತದ ದಾರಿ ಕೊನೆಗೊಮ್ಮೆ ಮುಗಿಯಿತು. ಭೂತವು ಬಿಟ್ಟುಹೋಗುವಾಗ ಕೊನೆಯ ಬಾರಿ ಒಂದು ಸಲ ಹಿಡಿಸಿಹೋಗುವುದಂತೆ. ತಿರುಗಿ ಪ್ರಾಣಘಾತಕವಾದ ಏರುಮಾರ್ಗವು ಹತ್ತಬೇಕೆ? ಏರು, ಏರು ಬರಿಯ ಏರು? ನನ್ನ ಮತಿಯು ಹೀನವಾಗಿತ್ತು ಕಣ್ಣು ಬಿಟ್ಟು ಮುಂದುಗಡೆ ನೋಡಿದೆ. ಸ್ವಪ್ನದಲ್ಲಿ ನೋಡುತ್ತಿರುವ ಸ್ಥಿತಿಯಾಗಿತ್ತು ನನ್ನದು. ಹಿಮಾಚ್ಛಾದಿತ ರಾಜ್ಯ. ಅದರ ನೆರಳಿನಲ್ಲಿ ಒಂದು ಅಸ್ಪಷ್ಟ ಹಳ್ಳಿಯ ಚಿತ್ರ. ಮಧ್ಯದಲ್ಲಿ ಸ್ವರ್ಣ ಮಂಡಿತ ಶಿಖರವುಳ್ಳ ಒಂದು ಮಂದಿರ. ಅದರ ಚರಣದಲ್ಲಿಯೆ ಜಾಹ್ನವಿಯ ಗಮನ.

ಯಾರೋ ಕೂಗಿದರು, "ಜೈ ಬದ್ರೀವಿಶಾಲಲಾಲಕೀ!"

ಹೌದೆ! ಬದರಿ ಬಂದಿತೆ! ಎಲಾ, ಎಷ್ಟೊತ್ತಿನಿಂದ ನೋಡುತ್ತಿದ್ದೆ. ಆದರೂ ಬದರೀನಾಥವೆಂದೇ ತಿಳಿಯಲಿಲ್ಲ. ಈಗ ತಿಳಿದ ನಾನು ಬದುಕಿದ್ದೇನೆ ಎಂದಂತಾಯಿತು. ನನ್ನ ದೇಹದಲ್ಲಿ ಜೀವವಿದೆ. ಮತಿ ಸ್ತಿಮಿತದಲ್ಲಿದೆ, ಹೌದು!

ಬದರೀನಾಥವನ್ನು ಕಂಡಾಗ ಉಂಟಾದ ಆನಂದ ಉಲ್ಲಾಸಗಳನ್ನು ಪ್ರಕಟಗೊಳಿಸಲು ಶರೀರ, ಮನಸ್ಸುಗಳಲ್ಲಿ ಶಕ್ತಿಯಿಲ್ಲ ಗಂಗೆಯ ಪೂಲನ್ನು ದಾಟಿ ಊರನ್ನು ಪ್ರವೇಶಿಸಿದೆವು. ಊರಿನ ಹೆಸರೂ ಬದ್ರಿಕಾಶ್ರಮವೇ. ನಮಗಾಗಿ ಗೊತ್ತುಮಾಡಿದ ಬಿಡಾರಕ್ಕೆ ಬಂದೆವು. ಬಿಡಾರವೆಂದರೆ ನಮ್ಮ ಕ್ಷೇತ್ರ ಪುರೋಹಿತನ ಮನೆ. ಅವನು ಸಾಕಷ್ಟು ಹಣವಂತ. ಅವರು ಐದು ಮಂದಿ ಸಹೋದರರು. ಸೂರ್ಯಪ್ರಸಾದ ರಾಮಪ್ರಸಾದ...ಎಂದು ಅವರ ಹೆಸರುಗಳು. ಅವರ ಅತಿಥಿಸತ್ಕಾರದಿಂದಾಗಿ ನಮಗೆ ಅವರ ವಿಷಯದಲ್ಲಿ ಆದರಭಾವ ಮೂಡಿತ್ತು. ಕಂಬಳಿ, ಬೆಂಕಿಗಳನ್ನು ಒದಗಿಸಿದ್ದರು. ಅವರಂತಹ ಒಳ್ಳೆಯ ಸ್ವಭಾವ, ಪ್ರಿಯಭಾಷಿಕರಾದ ಪಂಡಾ ಜನರು ಇತರ ಕಡೆ ಇರಲಾರರೇನೊ.

ಊಟಕ್ಕೆ ನಾವು ಪುರಿಗಳನ್ನು ತರಿಸಿದೆವು.

ಮನೆಯೇ ತಾಯಿಯ ಮಮತೆಯ ಜಗತ್ತು — ಉತ್ತಮ ವಸ್ತುಗಳೇ ಅಲ್ಲಿ ಬೇಕು...

# ರಕ್ಷಿಸುವ ತಾಯಿ 'ಡಾಲ್ಡ'ವನ್ನೇ ಬಳಸುತ್ತಾಳೆ



ತನ್ನವರ ಮೇಲೆ ತಾಯಿಗಿರುವ ಅಪಾರ ಪ್ರೇಮ ಅವಳ ಪ್ರತಿಯೊಂದು ಕ್ರಿಯೆಯಲ್ಲಿಯೂ ಪ್ರತಿಬಿಂಬಿತವಾಗುತ್ತದೆ. ಬಟ್ಟೆ ಹೊಲಿಯುವಂತಹ ಸಾಮಾನ್ಯ ವಿಷಯವೇ ಇರಲಿ, ಅಥವಾ ಅಡಿಗೆ ಮಾಡುವಂತಹ ಬಹಳ ಮುಖ್ಯ ವಿಷಯವೇ ಇರಲಿ, ಅವಳು ತನ್ನವರ ಕಲ್ಯಾಣಕ್ಕಾಗಿ, ತನ್ನ ಕೆಲಸದಲ್ಲಿ ವಿಶೇಷ ಜಾಗರೂಕತೆಯನ್ನು ವಹಿಸುತ್ತಾಳೆ. ಅವಳ ಜಾಗೃತ ನಯನಗಳು ಯಾವಾಗಲೂ ಉತ್ಕೃಷ್ಟ ವಸ್ತುಗಳನ್ನೆ ಅರಸುತ್ತಿರುತ್ತವೆ. ರಕ್ಷಿಸುವ ತಾಯಿ ಅಡಿಗೆ ಮಾಡಲು 'ಡಾಲ್ಡ' ವನಸ್ಪತಿಯನ್ನೆ ಉಪಯೋಗಿಸುತ್ತಾಳೆ. ಅದರಿಂದ ತಯಾರಿಸಿದ ತರಕಾರಿಗಳು ಎಲ್ಲರ ಮೆಚ್ಚಿಕೆಗೆ ಪಾತ್ರವಾಗುತ್ತವೆ. 'ಡಾಲ್ಡ' ಉತ್ತಮ ವನಸ್ಪತಿ ಎಣ್ಣೆಗಳಿಂದ ತಯಾರಿಸಲ್ಪಡುತ್ತದೆ. ಶರೀರದ ಬೆಳವಣಿಗೆಗಾಗಿ ಅದಕ್ಕೆ ವಿಟಮಿನ್‌ಗಳು ಸೇರಿಸಲ್ಪಡುತ್ತವೆ. 'ಡಾಲ್ಡ' ಅಡಿಗೆಯ ಶುದ್ಧ ಹಾಗೂ ಉತ್ಕೃಷ್ಟವಾದ ಸಾಧನ. ಆದರಿಂದ ಮಾಡಿದ ಅಡಿಗೆ ಅತ್ಯಂತ ರುಚಿಕರವಾಗುತ್ತದೆ. ನಿಮ್ಮ ಮನೆಯಲ್ಲಿಯೂ 'ಡಾಲ್ಡ' ಅದರ ನ್ಯಾಯವಾದ ಸ್ಥಾನವನ್ನು ಪಡೆಯಲಿ.



## ಡಾಲ್ಡ ವನಸ್ಪತಿ — ರುಚಿಕರ ಅಡಿಗೆಗೆ ಸೊಗಸಾದ ಸಾಧನ

DL.68-X29 KN

ಹಿಂದುಸ್ಥಾನ್ ಲೀವರ್ ಅವರ ತಯಾರಿಕೆ

ಅದೇ ಈ ಭಾಗದಲ್ಲಿ ನಮ್ಮನ್ನು ಬದುಕಿಸುವ ಆಧಾರ. ಹೊರಗಡೆ ಒಂದೇಸಮನೆ ಹಿಮಮಿಶ್ರಿತ ಮಳೆ. ಗೋಪಾಲದಾದಾ ತಂಬಾಕನ್ನು ಸೇವಿಸುತ್ತ ಹಳೆಯ ವಿಷಯ ಮಾತನಾಡುತ್ತಿದ್ದರು. ಆ ಬ್ರಾಹ್ಮಣ ಮುದುಕಿ ಅನಾರೋಗ್ಯದಿಂದ ಬಳಲುತ್ತಿದ್ದಳು. ಆ ಮುರುಕು ದೇಹದ ಚಾರೂಕಿ ಮಾನಲ್ಲಿ ಮಾತ್ರ ಶಕ್ತಿ ಉಳಿದಿದ್ದಿತು.

ಮರುದಿನ ಎದ್ದಾಗ ಎಲ್ಲರಿಗೂ ಅಲ್ಲಿರುವ ಹಲವು ದೇವರ ದರ್ಶನದ ಆತುರ. ಮಂದಿರ ದೇವತೆಗಳ ದರ್ಶನದ ವಿಶೇಷ ಬಯಕೆ ನನಗಿಲ್ಲ ಎಂಬುದನ್ನು ಕೇಳಿ ಅನೇಕರು ಹುಬ್ಬೇರಿಸಿ ನನ್ನ ಕಡೆ ನೋಡಿದರು. ಸಾಕಷ್ಟು ಉಪದೇಶಪರ ಮಾತುಗಳು ಕೇಳಬಂದುವು. ಈ ಸ್ಥಳದಲ್ಲಾದರೂ ಅಂಥ ಮಾತನಾಡಬೇಡ, ಎಂಬ ಬೆದರಿಕೆಯ ದನಿಯೂ ಕೇಳ ಬಂತು. ಒಬ್ಬ ಮುದುಕಿ ಹೇಳಿದಳು.

"ಬೇರೆ ಏನೂ ಬೇಡ. ಒಂದು ಸಲ ನಮಸ್ಕಾರವನ್ನಾದರೂ ಮಾಡು, ಮಗೂ."

"ಯಾರಿಗೆ ?"

"ಯಾರಿಗೆ? ನಿನ್ನ ಮಾತು ಕೇಳಿದರೆ ಮೈಯೆಲ್ಲ ಉರಿಯುತ್ತಿದೆ. ಕೊನೆಯ ಪಕ್ಷ ನಿನ್ನ ತಾತ, ಮುತ್ತಾತರ ಬಾಯಿಗೆ ಒಂದಿಷ್ಟು ನೀರಾದರೂ ಬಿಡುವಿಯಾ ? ಏನು, ಅದೂ ಇಲ್ಲವೊ ?"

ಇಲ್ಲಿಯ ಬ್ರಹ್ಮಕಪಾಲದಲ್ಲಿ ಪಿತೃಗಳಿಗೆ ಪಿಂಡಪ್ರದಾನ. ನಮ್ಮ ಹಿರಿಯರು ಸ್ವರ್ಗದ್ವಾರದಲ್ಲಿ ನಿಂತು ಕೈನೀಡಿ, ನಮ್ಮಿಂದ ಪಿಂಡಗ್ರಹಣ ಮಾಡುವವರಂತೆ. ಇಲ್ಲಿ ಒಂದು ಬಿಸಿನೀರಿನ ಹೊಂಡವಿದೆ. ಎಲ್ಲರೂ ಅಲ್ಲಿಯೇ ಸ್ನಾನಮಾಡಲಿಚ್ಛಿಸುವವರು. ಅದಕ್ಕಿಂತ ಹೆಚ್ಚು ಪವಿತ್ರವಾದ ಗಂಗೆಯಲ್ಲಿ ಮೀಯಲು ಯಾರೂ ಹೋಗುವುದಿಲ್ಲ.

ನಾನೂ ಸ್ನಾನದ ಶಾಸ್ತ್ರ ಮುಗಿಸಿದೆ. ಸ್ಖಲಿತ ದೇಹ, ಬರಿಗಾಲು, ಕೊಳೆಯಾದ ಬಟ್ಟೆ, ಉದಾಸೀನವಾದ ಮುಖ ಇವುಗಳಿಂದ ಕೂಡಿ ಸಾವಕಾಶವಾಗಿ ಮೆಟ್ಟಲುಗಳನ್ನೇರಿ ಮಂದಿರದ ಒಳಗೆ ಹೋದೆ.

ಯಾತ್ರಿಕರು ಜಾತಿವರ್ಣಗಳ ಭೇದವನ್ನು ಮರೆತು ಕೋಲಾಹಲವನ್ನು ಮಾಡುತ್ತಿದ್ದಾರೆ. ಪಥಶ್ರಮದ ಗುರುತು ಅಂಗಾಂಗಗಳಲ್ಲಿ ಎದ್ದು-ಕಾಣುತ್ತಿದ್ದರೂ ಅವರೆಲ್ಲ ವಿಜಯೋನ್ಮಾದದಲ್ಲಿದ್ದಾರೆ. ಇಲ್ಲಿಯೂ ಒಳಗೆ ಕತ್ತಲು. ದೇವ-ಮೂರ್ತಿಯ ಸ್ಪಷ್ಟ ದರ್ಶನವಾಗುವದು ಕಠಿನ. ಶಂಖ-ಚಕ್ರ-ಗದಾ-ಪದ್ಮಧಾರಿಯಾದ ವಿಷ್ಣುಮೂರ್ತಿ; ಮೂರ್ತಿ ಸಣ್ಣದು. ಮುಂದುಗಡೆ ತುಪ್ಪದ ದೀಪ ಉರಿಯುತ್ತಿದೆ. ಹತ್ತಿರವೇ ನೈವೇದ್ಯಕ್ಕಾಗಿ ಅನ್ನವಿದೆ. ಇಲ್ಲಿಯೂ ಅನ್ನದ ವಿಚಾರವಾಗಿ ಸ್ಪೃಶ್ಯಾಸ್ಪೃಶ್ಯ ಭೇದವಿಲ್ಲ.

ಅಂತೂ ಇಷ್ಟು ದಿನಗಳ ಪಥಶ್ರಮ ಮಾಡಿದ್ದುದು ಬರಿಯೆ ಇದನ್ನು ನೋಡುವುದಕ್ಕಾಗಿಯೆ ? ನಮ್ಮೆಲ್ಲ ಕುತೂಹಲ, ಆಶೋತ್ತರ, ಅಖಂಡ ವ್ಯಥೆ ವೇದನೆಗಳೆಲ್ಲ ಈ ಕಲ್ಲಿನ ಮೂರ್ತಿಯನ್ನು ಕಂಡು ಮುಕ್ತಾಯಗೊಳ್ಳಬೇಕು ! ಅಷ್ಟರಿಂದ ತಮ್ಮ ಇಡೀ ಆಯುಷ್ಯವೇ ಧನ್ಯವಾಯಿತೆಂದು ತಿಳಿಯುವವರಿಗೆ ಅಡ್ಡಿಯಿಲ್ಲ. ಆದರೆ ನನ್ನಂತಹನಿಗೆ ? ನನ್ನಲ್ಲಿಯೂ ಭಕ್ತಿಭಾವನೆಯ ಅಂಕುರವಾಯಿತು. ತುಂಬಿದ ಹೃದಯದಿಂದ, ಹೊರಬಂದು ನಮ್ಮ ಬಿಡಾರದ ಹೊರ ಕಟ್ಟೆಗೆ ಕುಳಿತೆ.

"ದಾದಾ" ನನ್ನ ಕಿವಿಯಲ್ಲಿಯೆ ಒಂದು ಕರುಣ ಕಂಠವು ಕಂಪಿಸುತ್ತ ನುಡಿಯಿತು. ಆತ ಬ್ರಹ್ಮಚಾರಿ ! ಗುರುತೇ ಹತ್ತಲಿಲ್ಲ, ಮೊದಲಿಗೆ. ಅವನ ಶರೀರವು ಸೊರಗಿ ತೆಳ್ಳಗಾಗಿಹೋಗಿತ್ತು. ಚಳಿಯಿಂದ ಮೋರೆಯೆಲ್ಲ ಒಣಗಿತ್ತು. ಎರಡೂ ಕಾಲುಗಳು ಗಾಯಗಳಿಂದ ತುಂಬಿಹೋಗಿದ್ದವು. ಕೈಕಾಲುಗಳು ಹೆದರಿಕೆಯಾಗುವಷ್ಟು ಬಾತುಹೋಗಿದ್ದುವು.

"ಜ್ವರ ಹತ್ತಿ ಬಿದ್ದಿದ್ದೇನೆ. ಈ ಕಾಲಂತೂ ...." ಅವನ ಕಣ್ಣುಗಳಲ್ಲಿ ನೀರು ತುಂಬಿಕೊಂಡಿತು.

"ಕಾಲಿಗೆ ಇದೆಲ್ಲ ಏನಾಯಿತು ?"

"ನೊಣಗಳ ಕಡಿತ, ದಾದಾ. ನಿಮ್ಮಲ್ಲಿ ನಾನು ಅನೇಕ ಅಪರಾಧಗಳನ್ನು ಮಾಡಿದ್ದೇನೆ.




## 'ನಮ್ಮ ಇಂದಿನ ಜೀವನದ ಕ್ರಮ...'

ಮುಂಬಯಿಯ ಗೃಹಿಣಿ ಪ್ರೇಮಾ ಸುಂದರ್ಜಿ ಹೇಳುತ್ತಾರೆ.

'ನಮ್ಮ ಇಂದಿನ ಜೀವನದ ಕ್ರಮವೇ ಹಾಗಿದೆ! ನಮಗೆಲ್ಲ ಹೊಸ ಹೊಸ, ಉತ್ತಮ ತರದ ವಸ್ತುಗಳೇ ಬೇಕು. ಉದಾಹರಣೆಗೆ ಸರ್ಫ್' ಎಂದು ಅವರು ಹೇಳುತ್ತಾರೆ. 'ನನ್ನ ಮನೆಯಲ್ಲಿ ಎಲ್ಲ ಬಟ್ಟೆಗಳನ್ನು—ಷರ್ಟುಗಳು, ಸೀರೆಗಳು, ಟವೆಲುಗಳು, ಮಗ್ಗಲಾಸಿಗೆ—ಇತ್ಯಾದಿ ಎಲ್ಲವನ್ನು ಸರ್ಫ್ ಚೆನ್ನಾಗಿ, ಬೆಳ್ಳಗೆ ಒಗೆಯುತ್ತದೆ.'

ನಿಮ್ಮ ಮನೆಗೆ ಸರ್ಫ್ ಬೇಡವೆ? ಸರ್ಫ್ ನಿಮ್ಮ ಒಗೆಯುವ ಕೆಲಸವನ್ನು ಅರ್ಧದಷ್ಟು ಕಡಿಮೆ ಮಾಡುವುದಲ್ಲದೆ, ನಿಮ್ಮ ಬಟ್ಟೆಗಳಿಗೆ ದಿವ್ಯ ಬಿಳುಪನ್ನು ಕೊಡುತ್ತದೆ.




ಸರ್ಫ್ ನಿಮ್ಮ ಬಟ್ಟೆಗಳಿಗೆ

**ಅನುಪಮ ಬಿಳುಪು** ಬರುವಂತೆ ಒಗೆಯುತ್ತದೆ

ಹಿಂದುಸ್ಥಾನ್ ಲೀವರ್ ಅವರ ತಯಾರಿಕೆ

SU. 10-X30 KN

ನಿಮ್ಮನ್ನು ಬಿಟ್ಟು ಬಂದುದಕ್ಕಾಗಿ ಶಿಕ್ಷೆಯಾಗಿದೆ. ನನ್ನನ್ನು ಕ್ಷಮಿಸುವಿರಾ?"

ಇವನ ಮಮತೆ, ಸ್ನೇಹಗಳಿಂದ ಒಮ್ಮೆ ನಾನು ಕುರುಡನಾಗಿದ್ದೆ. ಅವನು ಒಮ್ಮಿಂದೊಮ್ಮೆ ಬಿಟ್ಟು ಹೋದಾಗ ನನ್ನ ಎದೆಯೇ ಒಡೆದಂತಾಗಿತ್ತು. ಆ ಮೇಲೆ ಅವನ ವಿಚಾರವನ್ನೇ ಮರೆತುಬಿಟ್ಟಿದ್ದೆ. ಅವನ ಶ್ರದ್ಧೆಯ ಪೊಳ್ಳುತನ, ಅವನ ಕೃತಘ್ನತೆಯಿಂದಾಗಿ ಈಗೂ ನನಗೆ ಅವನ ವಿಷಯದಲ್ಲಿ ಒಳ್ಳೆಯ ವಿಚಾರ ಬರಲಿಲ್ಲ.

ಬ್ರಹ್ಮಚಾರಿ ನುಡಿದ· "ಈ ಕಾಲಿನಿಂದ ಹಿಮಾಲಯದಲ್ಲಿ ಹೇಗೆ ನಡೆಯುವುದು? ನಾನು ಬದುಕುವಂತೆ ಕಾಣುವುದಿಲ್ಲ?

"ಎಲ್ಲರೂ ಒಂದು ದಿನ ಸಾಯುವವರೇ."

"ಬಾಬಾ, ನಿಮ್ಮ ಮೇಲೆಯೇ ಭರವಸೆ ಇಟ್ಟುಕೊಂಡಿದ್ದೇನೆ. ನಾಲ್ಕು ದಿನಗಳಿಂದ ನಿಮ್ಮ ದಾರೀ ಕಾಯುತ್ತಿದ್ದೆ. ಅದಕ್ಕಾಗಿ ಕುಂಟುತ್ತ ಮಂದಿರಕ್ಕೆ ಎಡತಾಕಿದೆ. ನನಗೆ ಉಪವಾಸದ ಹೆದರಿಕೆಯಿಲ್ಲ. ರಾಮನಗರದಿಂದ ವೃಂದಾವನದ ತನಕ ರೈಲುಚಾರ್ಜು ಕೊಟ್ಟರೆ ಸಾಕು. ಹೆಚ್ಚೇನೂ ಕೇಳುವುದಿಲ್ಲ."

ಒಂದೇ ದಿನ ನಾನೇ ಬ್ರಹ್ಮಚಾರಿಗೆ ಒತ್ತಾಯ ಮಾಡಿ ಖರ್ಚಿಗೆ ಕೊಟ್ಟಿದ್ದೆ. ಈಗ ಹೇಳಿದೆ: "ನಾನು ಬರುವಾಗ ಜಮೀನುದಾರಿಯನ್ನು ಕಟ್ಟಿಕೊಂಡು ಬರಲಿಲ್ಲ. ನಾನು ದಾನ ಮಾಡುವುದಕ್ಕೆ ಬರಲಿಲ್ಲ. ಪುಣ್ಯಸಂಪಾದನೆಯ ವಿಚಾರವೂ ನನಗಿಲ್ಲ."

"ಏನೊ ಸ್ವಲ್ಪ ..... ಎಂಟಾಣೆಯನ್ನಾದರೂ .."

"ಇಲ್ಲ."

ಬ್ರಹ್ಮಚಾರಿ ಇನ್ನು ಪ್ರಯೋಜನವಿಲ್ಲವೆಂದು ನಮಸ್ಕರಿಸಿ ಅಲ್ಲಿಂದ ಹೊರಟ. ತಿರುಗಿ ನಾನು ಅವನನ್ನು ಕಾಣಲಿಲ್ಲ.

ಊರಲ್ಲಿ ತಿರುಗಾಡಲು ಹೊರಟೆ. ಮನೆಗಳಿಗಿಂತ ಅಂಗಡಿಗಳೇ ಜಾಸ್ತಿಯಾಗಿ ಕಂಡವು.

ಚಿತ್ರಗಳನ್ನೂ ಪುಸ್ತಕಗಳನ್ನೂ ಮಾರುವ ಅಂಗಡಿಯೂ ಇತ್ತು. ಅವೆಲ್ಲ ಧರ್ಮ ಗ್ರಂಥಗಳು. ಒಂದು ಚಾ, ಬೀಡಿ ಮಾರುವ ಅಂಗಡಿಯೂ ಇದ್ದುದು ಅಚ್ಚರಿಯನ್ನುಂಟುಮಾಡಿತು. ಕಂಬಳಿಯನ್ನು ಸುತ್ತಿಕೊಂಡು ಅನಾಥ ಬಾಲಕನಂತೆ ಆಚೆ, ಈಚೆ ಓಡಾಡಿದೆ.

ಅಂದು ರಾತ್ರಿಯಲ್ಲಿ ಭೀಕರ ಬಿರುಗಾಳಿ ಬೀಸಿತು. ಆದರೆ ಆ ರಾತ್ರಿ ಮಾತ್ರ ನನಗೆ ಚೆನ್ನಾಗಿ ನಿದ್ದೆ ಹತ್ತಿತು. ನಾನೊಬ್ಬನೇ ಏಕೆ, ಎಲ್ಲರಿಗೂ ಗಾಢ ನಿದ್ರೆ ಬಂದಿದ್ದಿತು. ಬಾಬಾ ಬದರೀನಾಥನ ದಯೆ ಇರಬೇಕು. ಮರುದಿನ, ಬೆಳಗಾಗುವಾಗ ವಾತಾವರಣ ಶಾಂತವಿತ್ತು. ಯಾತ್ರಿಕರಿಗೆ ಮನೆಯ ನೆನಪು ಬರತೊಡಗಿತ್ತು. ಒಬ್ಬರು ಚಿತ್ರ ಪುಸ್ತಕಗಳನ್ನು, ಇನ್ನಿಬ್ಬರು ಪ್ರಸಾದವನ್ನು, ಬೇರೊಬ್ಬರು ಔಷಧ ಸಾಮಾನುಗಳನ್ನು, ಮತ್ತೊಬ್ಬರು ಚವರೀಕೂದಲುಗಳನ್ನು ಕೂಡಿಸುವುದರಲ್ಲಿ ನಿರತರಾಗಿದ್ದರು. ಕೆಲವರು ತಮ್ಮ ಊರಿಗೆ ಪತ್ರ ಬರೆಯುವುದರಲ್ಲಿ ನಿರತರಾಗಿದ್ದಾರೆ. ಇಲ್ಲಿಯ ಅಂಚೆ ಕಟ್ಟೆಯ ಮುದ್ರೆಯನ್ನು ಹೊಂದಿ ಆ ಪತ್ರಗಳು ಊರಿಗೆ ಹೋಗುತ್ತಾವಲ್ಲಾ ಎಂದು ಅವರ ಎಣಿಕೆ.

ಮೂರು ದಿನ ಅಲ್ಲಿ ನಿಂತು ಜೇಷ್ಠ ಪೂರ್ಣಿಮೆಯ ದಿನ,, ಇನ್ನೊಮ್ಮೆ ದೇವರಿಗೆ ಅಭಿವಂದಿಸಿ ಮರಳಿ ಹೊರಟೆವು. ಪುಣ್ಯ ಸಂಚಯದ ತೃಪ್ತಿ ಇದ್ದಿತು. ನಷ್ಟವಾದ ಆರೋಗ್ಯ, ಲೋಪವಾದ ಶಕ್ತಿಯೆಲ್ಲ ಜಾದೂ ಮಾಡಿದಂತೆ ತಿರುಗಿ ಕಾಣಿಸಿತು. ನಮ್ಮ ಅಸ್ವಾಸ್ಥ್ಯ ದಣಿವುಗಳನ್ನೆಲ್ಲ ಬದ್ರೀನಾಥನು ಕಸಿದುಕೊಂಡಿದ್ದ. ಒಂದೇ ದಿನದಲ್ಲಿ ನಾವು ನಡೆದುದು ಹತ್ತೊಂಬತ್ತು ಮೈಲು! ಇನ್ನು ಹತ್ತು ದಿನಗಳಲ್ಲಿ ನಾವು ರೇಲಿನಲ್ಲಿ ಕೂಡ್ರಲು ಆಗಬಹುದು. ಅಸಹ್ಯ ಪರ್ವತ ಪ್ರದೇಶವನ್ನು ಬಿಟ್ಟು,ಬೈಲುಜಾಗವನ್ನು ಕಾಣಲು ಎಲ್ಲರಿಗೂ ಉತ್ಸುಕತೆ.

ಕರ್ಣಪ್ರಯಾಗಕ್ಕೆ ಬಂದಾಗ, ಬೇಸರದ ಘಟನೆಯೊಂದು ನಡೆಯಿತು. ಇಷ್ಟು ದಿನಗಳ ತನಕ ನಮ್ಮ ಸುಖ-ದುಃಖಗಳಲ್ಲಿ ಪಾಲುಗಾರನಾಗಿದ್ದ ನಮ್ಮ ಅಂತರಂಗದ ಬಂಧುವಾಗಿ ಮಾರ್ಗದರ್ಶನ ಮಾಡುತ್ತಿದ್ದ ಅಮರಸಿಂಹನು ನಮ್ಮನ್ನು ಬೀಳ್ಕೊಡುವ ಸಮಯ ಬಂದಿತು. ಇವನು ಪರಕೀಯ, ನಮ್ಮಿಂದ ದೂರ ಹೋಗಬೇಕಾದವನು ಎಂಬ ಕಲ್ಪನೆ ಆಗ ಬಂದಿತು. ಬಟ್ಟೆ, ಚಾದರು, ಕಂಬಳಿ, ರೂಪಾಯಿ ಮೊದ-ಲಾದವುಗಳಲ್ಲಿ ಸಾಧ್ಯವಿದ್ದಷ್ಟನ್ನೂ ಉದಾರ ಮನಸ್ಸಿನಿಂದ ಯಾತ್ರಿಕರು ಅವನ ಜೋಳಿಗೆಯಲ್ಲಿ ಹಾಕಿದರು. ಬದ್ರೀನಾಥನಿಗೆ ಕೊಡದೇ ಇದ್ದವುಗಳನ್ನು ಅಮರಸಿಂಹನು ಪಡೆದ. ದೇವತೆಗಳು ಪೂಜೆಯನ್ನು ಸ್ವೀಕರಿಸಿದರೆ, ಮನುಷ್ಯನು ಪಡೆಯುವುದು ಪ್ರೇಮವನ್ನು. ಅವನ ನಂತರ ಸಹಯಾತ್ರಿಕರ ಯೋಗಕ್ಷೇಮವನ್ನು ನೋಡಿಕೊಂಡು ಕರೆದೊಯ್ಯುವ ಭಾರ ನನ್ನ ಮೇಲೆ

ಬಿದ್ದಿತು.

ನಾವು ಹದಿನಾಲ್ಕು ಜನರಿದ್ದೆವು. ರಾಣೀಖೇತ ಪಟ್ಟಣದ ವರೆಗೂ ಕಾಲ್ನಡಿಗೆಯಿಂದ ಬಂದಿದ್ದೆವು. ಅಲ್ಲಿ ಒಂದು ಬಸ್ಸನ್ನು ಗೊತ್ತು ಮಾಡಿಕೊಂಡು, ಹಲ್ದ್ವಾನೀ ಸ್ಟೇಶನ್ನಿಗೆ ತಲುಪಿದೆವು. ಸ್ಟೇಶನ್ನಿಗೆ ಬಂದಾಗ ೧೧ ಗಂಟೆ. ಮೊಟ್ಟಮೊದಲು ನಮಗೆ ನಿಜವಾದ ಬಿಸಿಲಿನ ಅನುಭವವಾಯಿತು. ಹಗಲಿನಲ್ಲಿ ನಮಗೆ ಯಾವ ಗಾಡಿಯೂ ಇರಲಿಲ್ಲ. ಆರು ಗಂಟೆಯ ಹೊತ್ತಿಗೆ ಗಾಡಿಯನ್ನು ಹತ್ತಿದೆವು. ನಾನೊಬ್ಬನೇ ನೈಮಿಷಾರಣ್ಯದ ಮಾರ್ಗವಾಗಿ ಹೋಗಲು ಬಾಲಾಮವೂ ಟಿಕೀಟನ್ನು ಕೊಂಡಿದ್ದೆ. ಎಲ್ಲ ಬಂಗಾಲಿಗಳೂ ಕೂಡಿ ರೇಲಿನ ಒಂದು ಚಿಕ್ಕ ಡಬ್ಬಿಯನ್ನು ಆಕ್ರಮಿಸಿದ್ದೆವು. ರಾತ್ರಿ ಒಂಬತ್ತೂವರೆಯ ಸುಮಾರಿಗೆ ಬರೇಲಿ ಸ್ಟೇಶನ್ನಿನಲ್ಲಿ ಗಾಡಿ ಬದಲಿಸಿ ಕಾಶಿಗೆ ಹೋಗುವ ಗಾಡಿಯಲ್ಲಿ ಕುಳಿತುಕೊಂಡೆವು. ಸಂಜೆಯ ಮುಂದೂ ಶಕೆಯಿಂದಾಗಿ ಹುರಪಳಿಸುತ್ತಿದ್ದೆವು. ಗಾಡಿಯ ಧಡಿಕೆಯಲ್ಲಿ ನಮಗೆಲ್ಲ ನಿದ್ರೆ. ರಾತ್ರಿ ಮೂರು ಗಂಟೆಯ ಸುಮಾರಿಗೆ ಎಚ್ಚರಾಯಿತು. ಬಾಲಾವ-ವೂ ಸ್ಟೇಶನ್ ಹತ್ತಿರವಿತ್ತು. ಒಬ್ಬರು ಕೇಳಿದರು, "ಯಾಕೆ ಬಾಬೂ, ನೀವು ಇಲ್ಲಿ ಇಳಿಯಬೇಕಲ್ಲವೆ ?"

ಮತ್ತೊಬ್ಬರು ಹೇಳಿದರು: "ಸಾಕು, ನಿಮ್ಮ ಈ ತೀರ್ಥಯಾತ್ರೆಯ ಹುಚ್ಚು. ಕಾಶಿಯಿಂದ ಬಂದಿದ್ದೀರಿ. ಸುಮ್ಮನೇ ಮನೆಗೆ ಹೋಗಿರಿ." ಸಣ್ಣ ಹುಡುಗನೊಬ್ಬ ಬುದ್ಧಿ ಹೇಳಿಸಿಕೊಂಡಂತೆ ಅದಕ್ಕೆ ನಾನು ಹೂಂ ಗುಟ್ಟಿದೆ. ನಾನೂ ಕಾಶಿಯ ತನಕ ಬರುತ್ತೇನೆಂದು ಅವರೆಲ್ಲರಿಗೂ ಸಂತೋಷವಾಗಿತ್ತು.

ಬೆಳಿಗ್ಗೆ ಲಖನೌ ಬಂದಿತು. ಅಲ್ಲಿಂದ ಗಾಡಿ ಬಿಡುವುದಕ್ಕೆ ೩-೪ ತಾಸಿನ ಅವಧಿಯಿತ್ತಾಗಿ ಊರೊಳಗೆ ಹೋಗಿ ಚಾ ಕುಡಿದು, ತಿರುಗಾಡಿ ಬಂದೆ. ಬರುವಾಗ ಹೊಸ ಪಾದರಕ್ಷೆಗಳನ್ನು ತಂದೆ. ತಿರುಗಿ ಬಂದು, ನಮ್ಮ ಡೆಹರಾಡೂನ್ ಎಕ್ಸಪ್ರೆಸ್ ಗಾಡಿಗೆ ಕೂಡ್ರುವಾಗ, ನನ್ನ ಹರಿದು ಹೋದ ಬಿಳಿಯ ಕ್ಯಾನವಾಸ್ ಪಾದರಕ್ಷೆಗಳನ್ನು ಲಖನೌ ಸ್ಟೇಶನ್ನಿಗೆ ಬಿಟ್ಟುಕೊಟ್ಟೆ. ದುಸ್ತರವಾದ ಹಿಮಾಲಯದ ವಿಚಿತ್ರ ಇತಿಹಾಸ ಮತ್ತು ಮರೆಯಲಾಗದ ಸ್ಮೃತಿಗಳನ್ನು ಹೊತ್ತುಕೊಂಡು ಆ ಪಾದರಕ್ಷೆಗಳು ಅನಾಥವಾಗಿ ಒಂದೆಡೆಗೆ ಬಿದ್ದುಕೊಂಡವು. ಕಲ್ಲುಮುಳ್ಳುಗಳಲ್ಲಿ ಹಿಮದಲ್ಲಿ ಮಳೆಯಲ್ಲಿ ಅವು ಸಹೋದರನಂತೆ ನನ್ನನ್ನು ಅನುಸರಿಸಿಕೊಂಡಿದ್ದವು. ಅಂಥವನ್ನು ಬಿಸಾಡಿ ನಾನು ಅನ್ಯಾಯ ಮಾಡಿದೆನೆಂದು ಕೆಡುಕೆನಿಸಿತು. ಅವು ಬಹುದೂರದ ತನಕ ನನ್ನನ್ನೇ ನೋಡುತ್ತಿರುವಂತೆ ಭಾಸವಾಯಿತು.

ಫೈಜಾಬಾದ, ಅಯೋಧ್ಯಾ, ಶಾಹಗಂಜ, ಜೈನಾಪುರಗಳನ್ನು ದಾಟಿ, ನಮ್ಮ ಗಾಡಿ ಕೊನೆಗೊಮ್ಮೆ ಕಾಶಿಯನ್ನು ತಲುಪಿತು. ಬಿಸಿಲಿನ ಬೇಗೆಯಿಂದ ನಾವೆಲ್ಲ ಹುರಪಳಿಸಿ ಹೋಗಿ-ದ್ದೆವು.

—ಸ್ಟೇಶನ್ನಿನಲ್ಲಿಯೆ ಎಲ್ಲರನ್ನೂ ಬೀಳ್ಕೊಟ್ಟೆ. ದಾರಿಯಲ್ಲಾದ ಪರಿಚಯವು ದಾರಿ ಮುಗಿದೊಡನೆ ಮುಗಿದುಹೋಯಿತು.

ಬಿಸಿಲಿನಲ್ಲಿ ನಿರ್ಜನವಾದ ಪಥದಲ್ಲಿ ಒಂದು ಕುದುರೆಯ ಗಾಡಿಯಲ್ಲಿ ಕುಳಿತು ಹೊರಟೆ. ಕುದುರೆಯ ಕುತ್ತಿಗೆಯೊಳಗಿನ ಗೆಜ್ಜೆಗಳೂ ಉತ್ಸಾಹದಿಂದ ಬಾರಿಸುತ್ತಿದ್ದವು. ನನಗೋ ಉತ್ಸಾಹವಿಲ್ಲ, ಆನಂದವಿಲ್ಲ. ಆಸೆಯಿಲ್ಲ. ನನ್ನ ಊರಲ್ಲಿಯೇ ನನ್ನ ಪರಿಚಯದ ಬೀದಿ, ಬಂಗಲೆಗಳನ್ನು ಬಹುದಿನದ ನಂತರ ನೋಡುವ ಲವಲವಿಕೆಯೂ ಇರಲಿಲ್ಲ. ಇಷ್ಟು ದೊಡ್ಡ ತೀರ್ಥಯಾತ್ರೆಯ ಫಲಶ್ರುತಿ ಇದೆಯೆ ? ಇದರಲ್ಲಿ ಆನಂದವಿಲ್ಲವೆ ? ನನಗೋ ಚಿರಪಥಿಕನಾಗುವ ಬಯಕೆ. ಇದಕ್ಕೆ ಕೊನೆಯಿಲ್ಲವೆ. ನಿತ್ಯದ ಬಾಳು ಅರ್ಥಹೀನವೆ ? ಪರಲೋಕ, ಪುನರ್ಜನ್ಮಗಳನ್ನು ಬಿಟ್ಟರೆ ಜೀವನಕ್ಕೆ ಅಂತಿಮ ಗುರಿ ಉಳಿಯಲಾರದೆ ?

ಏನೋ, ಮನುಷ್ಯನ ಮನಸ್ಸೇ ಒಂದು ವಿಚಿತ್ರ *



**This Magazine owned by The Loka Shikshana Trust, Hubli is printed and published by Shri H. R. Purohit at the Samyukta Karnatak Press, Koppikar Road, Hubli.**